# ಮಾತು ಮೌನಗಳ ನಡುವೆ

[ಡಾ. ವಿಜಯಾ ಸುಬ್ಬರಾಜ್‌ರವರ ಸಮಗ್ರ ಕಾವ್ಯ]

ಡಾ. ವಿಜಯಾ ಸುಬ್ಬರಾಜ್

ಕಾಲ ಪ್ರಕಾಶನ
ಬೆಂಗಳೂರು

MAATHU MOUNAGALA NADUVE

By
**Dr. Vijaya Subbaraj**
# 51, Hamsi, 1-A Cross
35th Main, Banagirinagara
Banashankari 3rd Stage
Bangalore - 560085
Phone : 080-26793219

Published by
**Kaala Prakashana**
No.23/A, 2nd Floor
10th Cross, 1st `N' Block
Rajajinagar
Bangalore - 560 010
Ph : 080- 23426778



First Impression : **2014**
Price : ₹ 480/-
Pages : xxxvi+708=744

Paper Used : **70 GSM Maplitho**
Book Size : **Demy 1/8**
Coverpage Design : Nagaraj Naik

*Printed At*
**Annapoorna Printers and Publishers**
No.132, III Main, 6th Cross
II Phase, Manjunath Nagar
Bangalore - 560010

# ಅರ್ಪಣೆ

ಕಾವ್ಯಾಭಿಮಾನಿಗಳಾದ ನನ್ನ ಎಲ್ಲ
ಸ್ನೇಹಿತರಿಗೆ, ಗುರುಗಳಿಗೆ,
ವಿದ್ವಾಂಸರಿಗೆ,

# ಹೊಗರ ಚೆಲ್ಲುವ ಚಿಗುರು ಬೇರು

**ಹೆಣ್ತನದ ರೋಮಾಂಚನಗಳು**
**ರಹಸ್ಯ ರಮ್ಯ ರಾಗಗಳು**
**ಹೆಣ್ಣಿಗಿತ್ತ ಉಡುಗೊರೆ**
**ಯಾರಿಗುಂಟು ಯಾರಿಗಿಲ್ಲ**
**ಹೆಣ್ಣು ಹೆಣ್ಣಲ್ಲ ಜಗದ ಕಣ್ಣು**
**ಅವಳೆ ಸೃಷ್ಟಿ ಅವಳೆ ವಿಶ್ವ**

ವಿಜಯ ಸುಬ್ಬರಾಜ್ ಅವರು ಬರೆದ ಮೇಲಿನ ಸಾಲುಗಳು ಅವರ ಕಾವ್ಯಧರ್ಮ ಹಾಗೂ ಜೀವನ ಧರ್ಮವನ್ನು ಸಾರುವ ಪದಪುಂಜಗಳು. ಪುರುಷಾಹಂಕಾರದ ನುಡಿಗಳು ಹಾಗೂ ಸ್ತ್ರೀವಾದಿ ನೆಲೆಯ ದನಿಗಳು ಹಲವು ಬಗೆಯಲ್ಲಿ ಹೆಣ್ಣನ್ನು ಕುರಿತು ವ್ಯಾಖ್ಯಾನ ವಿಮರ್ಶೆಗೆ ತೊಡಗಿವೆ. ಜಗತ್ತಿನ ಸಾಹಿತ್ಯವನ್ನು ವಿಮರ್ಶೆಗೆ ಒಡ್ಡಿದಾಗಲೆಲ್ಲ ಈ ಎರಡೂ ನೆಲೆಗಳಲ್ಲಿ ಅಲ್ಲಿನ ದೃಷ್ಟಿ ಧೋರಣೆಗಳನ್ನು ಬಗೆಯಲಾಗಿದೆ. ಪುರುಷಾಹಂಕಾರದ ಹೀಗಳಿಕೆ ಮತ್ತು ಸ್ತ್ರೀವಾದಿ ನೆಲೆಯ ಹೊಗಳಿಕೆ ಈ ಎರಡೂ ಏಕಮುಖ ಚಲನೆಯ ಚಿಂತನಾ ಮುಖಿಗಳು. ಏಕೆಂದರೆ ವಚನಕಾರರು ಹೇಳುವಂತೆ –

**ಮೊಲೆ ಮುಡಿ ಮೂಡಿ ಬಂದರೆ**
**ಹೆಣ್ಣೆಂಬರು**
**ಗಡ್ಡ ಮೀಸೆ ಮೂಡಿ ಬಂದರೆ**
**ಗಂಡೆಂಬರು**
**ನಡುವೆ ಸುಳಿವ ಆತ್ಮ ಹೆಣ್ಣೂ ಅಲ್ಲ ಗಂಡೂ ಅಲ್ಲ**

ಹೀಗಾಗಿ ಹೆಣ್ಣು ಗಂಡು ಎಂಬುದು ಲಿಂಗಮಿತಿಯಲ್ಲಿ ಹರಿಯುವ ಸ್ವಭಾವ ವಿಶೇಷವಾಗದೆ ಲಿಂಗಭೇದವನ್ನು ದಾಟಿದಂತೆ ಸ್ಪಂದಿಸುವ ಭಾವಸ್ಯಂದಿ ಗುಣವಾಗಿರುವುದು ಲೋಕಸತ್ಯ. ಪುರುಷ ರೂಪದ ಹೆಣ್ಣನ್ನು ಹೆಣ್ಣು ರೂಪದ

ಪುರುಷನನ್ನು ಪರಿಭಾವಿಸಿದಾಗ ಈ ಲಿಂಗಭೇದ ಗುಣ ಸಮೀಕರಣದ ಮಿತಿ ಅರಿವಿಗೆ ಬರುತ್ತದೆ. ಆದರೆ ಮುಖ್ಯ ವಿಶೇಷವಿರುವುದು ಈ ಪರಿಯ ಗುಣ ವಿಶೇಷತೆಯ ಗ್ರಹಿಕೆಗಿಂತ ದೇಹಬಂಧಿಯಾದ ನಿಸರ್ಗದತ್ತ ಇಂದ್ರಿಯಾನುಭವಗಳನ್ನು ಪರಿಭಾವಿಸುವ ಕ್ರಮದಲ್ಲಿ ಗಂಡು ಹೆಣ್ಣುಗಳ ಆಕಾರ ಸೌಂದರ್ಯವನ್ನು ಕುರಿತು ಎಲ್ಲ ಜೀವಜಾಲಗಳನ್ನು ಗಮನಿಸಿದಂತೆ ಹಲವು ಜನ ಸೌಂದರ್ಯ ಮೀಮಾಂಸಕರು ದಾರ್ಶನಿಕರು ಗಂಡಿನ ಪರವಾಗಿ ತಮ್ಮ ನಿಲುವನ್ನು ಪ್ರಕಟಿಸಿರುವುದು ಗೊತ್ತಿರುವ ವಿಚಾರ. ಇದರ ನಡುವೆಯೇ ಹೆಣ್ಣನ್ನು ಸೌಂದರ್ಯದ ಖಣಿಯಾಗಿ ಕಲಾವಿದರು ಕಂಡಿರುವುದೂ ಸತ್ಯ. ಈ ಎಲ್ಲ ನಿಲುವುಗಳನ್ನೂ ಗಂಡಿನ ಸ್ವಾರ್ಥವೆಂದು ಅರ್ಥೈಸಿರುವುದೂ ಉಂಟು. ಇಷ್ಟೆಲ್ಲ ವೈರುಧ್ಯಮುಖೀ ಚರ್ಚೆಗಳ ನಡುವೆ ಹೆಣ್ಣು ತನ್ನ ಕಾಮ ಸಂಬಂಧಿ ಪ್ರಜ್ಞೆಯನ್ನು ಹೇಗೆ ಅಭಿವ್ಯಕ್ತಿಸಿದ್ದಾಳೆ ಎಂಬುದು ಅಷ್ಟೇ ಮುಖ್ಯ. ಆತ್ಮವಾದಿಗಳಿಗೆ ಕಾಯವೆಂಬುದು ಮಾಯುಪರುವತ, ಸಾಧನೆಗೆ ತೊಡಗಿದವರಿಗೆ ಅಡಿಗಡಿಗೆ ಅಡ್ಡಗಾಲು; ಭೋಗವಾದಿಗಳಿಗೆ ಇದೇ ಆತ್ಯಂತಿಕ ಇದಿಲ್ಲದೆ ಏನೂ ಇಲ್ಲ; ಜನಸಾಮಾನ್ಯ ಭಾವಕ್ಕೆ ಇದೊಂದು ಉದ್ದಿನ ಮೂಟೆ ಉರುಳಿ ಹೋಗುವ ಘಟ ಇದರೊಳಗಿದೆ ಗಮಿಸುವ ಹಂಸೆ. ಇವೆಲ್ಲವೂ ಆಂಶಿಕ ಸತ್ಯಗಳು ಅಥವಾ ಆಂಶಿಕ ಮಿಥ್ಯೆಗಳು. ಆದರೆ ವಿಜಯಲಕ್ಷ್ಮಿಯವರು ಹೆಣ್ತನವನ್ನು ಪರಿಭಾವಿಸಿರುವ ಬಗೆ ಅಲೆಗಳಿಲ್ಲದ ರುಚಿ ವಿಶೇಷತೆಯಿಂದ ಕೂಡಿರುವುದು ಹಾಗೂ ಅನುಭವಾತ್ಮಕವಾದುದು.

ಮೇಲಿನ ಸಾಲುಗಳು ವೈಯಕ್ತಿಕ ಮಿತಿಯ ಅನುಭವದ ಆರ್ದ್ರತೆಯಲ್ಲಿ ಅರಳಿದಷ್ಟೇ ತೀವ್ರವಾಗಿ ವಿಶ್ವಾತ್ಮಕ ಭಾವಯಾನದ ವ್ಯಾಪ್ತಿಯಲ್ಲೂ ಅರ್ಥ ವಿಶೇಷತೆಯನ್ನು ಪಡೆದುಕೊಂಡಿವೆ. ಇಲ್ಲಿ 'ಹೆಣ್ಣಿನ ರಹಸ್ಯ ರಮ್ಯ ರಾಗಗಳು ಹೆಣ್ಣಿಗಿತ್ತ ಉಡುಗೊರೆ' ಸಾಲುಗಳು ಭ್ರಾಮಕ ನೆಲೆಯನ್ನು ಕುರಿತವುಗಳಲ್ಲಿ ಹೆಣ್ಣಿಗೆ ಮಾತ್ರ ಅನುಭವ ವೇದ್ಯವಾಗುವ ಸೃಷ್ಟಿ ರಹಸ್ಯದ ಭಾವ ಸೂಕ್ಷ್ಮಗಳನ್ನು ಸಂಭ್ರಮಿಸಿ ಹಾಡಿದವು. ಯಾರಿಗುಂಟು ಯಾರಿಗಿಲ್ಲ ಎಂಬ ಪ್ರಶ್ನಾರ್ಥಕ ಭಾವದ ನುಡಿಗಳು ಹೆಣ್ತನದ ಅನನ್ಯತೆಯ ಅನುಭವ ಭಾಗ್ಯವನ್ನು ಭಾವಿಸಿದವು. ಈ ಎಲ್ಲ ಸಾಲುಗಳಲ್ಲಿ ಯಾವುದೇ ಕಾವ್ಯಾತ್ಮಕ ಅಲಂಕಾರಗಳಿಲ್ಲ; ಸರಳವಾಗಿ ನೇರವಾಗಿ ಹೇಳಿದ ಹೇಳಿಕೆ ರೂಪದ ಪದಗಳಿವೆ. ಆದರೆ ಅಲ್ಲಿನ ಅಂತರ್ಲಯ ಪಿಸುದನಿಯ ಆರ್ದ್ರತೆಯನ್ನು ಒಳಗೊಂಡಿದೆ. ಆಪ್ತಭಾವದ ದೀಪ್ತಿಯಲ್ಲಿ ಅರ್ಥಸೌಂದರ್ಯವನ್ನು ಮನಗಾಣಿಸಿದೆ.

ವಿಜಯ ಸುಬ್ಬರಾಜ್ ಇವರ ಸಮಗ್ರ ಕಾವ್ಯವನ್ನು ಓದುತ್ತಾ ಹೋದಂತೆ ಈ ನಲವತ್ತು ವರ್ಷಗಳ ಅವಧಿಯಲ್ಲಿ ಈ ನೆಲದ ಮೇಲೆ ಘಟಿಸಿರುವ ಹಲವು ವಿದ್ಯಮಾನಗಳು ನೇರವಾಗಿ ಪರೋಕ್ಷವಾಗಿ ಇಲ್ಲಿ ಮಿಂಚಿ ಮರೆಯಾಗುತ್ತವೆ. ಓದುವ

ನಮ್ಮ ಮನೋಗತಿಯನ್ನು ತಡೆದು ಮಾತನಾಡಿಸುತ್ತವೆ. ಜೊತೆಗೆ ಈ ಭೂಖಂಡದ ಮೂಲೆ ಮುಡುಕುಗಳಲ್ಲಿ ಅರಳಿದ ವಿಚಾರ ಕ್ರಾಂತಿಯ ಹಲವು ಸೆಳಕುಗಳು ನಮ್ಮ ಮನೋಗತಿಯ ಎದುರು ಪ್ರಶ್ನೆಗಳನ್ನು ಎಸೆದು ವಾಗ್ವಾದಕ್ಕೆ ಆಹ್ವಾನಿಸುತ್ತವೆ. ಹೀಗಾಗಿ ಇಡೀ ಸಂಕಲನ ವ್ಯಕ್ತಿಯೊಬ್ಬರ ಭಾವಯಾನದ ಗಾಥೆಯಂತೆ ಕಾಣಿಸುತ್ತದೆ ಕೇಳಿಸುತ್ತದೆ. ಕನ್ನಡದ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ವ್ಯವಹಾರದಲ್ಲಿ ಬೇರು ಬಿಟ್ಟಂತೆ ಹರಿದ ಈ ಭಾವಯಾನ ಬಹುರೂಪಿ ಗುಣದ ಸಚೇತನ ಸ್ವಭಾವದ್ದು. ಹೆಚ್ಚು ಮಾತಾಳಿಯಾಗುತ್ತಲೇ ಮತ್ತೆ ಮತ್ತೆ ತನ್ನನ್ನು ಛಾಪಿಸುವ ಛಲದಿಂದ ನಡೆದದ್ದು. ಇಲ್ಲಿ ಹಲವು ವಿಚಾರಗಳ ಬಗ್ಗೆ ಅಭಿಪ್ರಾಯ ಭೇದಗಳು ವ್ಯಕ್ತಿತ್ವದ ಬೆಳವಣಿಗೆಯ ರೂಪಗಳಂತೆ ವಿಕಾಸಶೀಲವಾಗಿವೆ. ಭೇದವೆಂಬುದು ವೈರುಧ್ಯದಂತೆ ಕೆಲವೊಮ್ಮೆ ಭಾಸವಾದರೂ ಅದು ವಿರೋಧಾಭಾಸದ ದ್ವಂದ್ವಮುಖಿಯಾಗದೆ ಬದಲಾವಣೆಯ ಜೀವ ಗುಣವಾಗಿದೆ. ಅಭಿಪ್ರಾಯವೆಂಬುದು ಜಡವಲ್ಲ ಜಂಗಮ ಶೀಲವಾದ ಧಾತುರೂಪಿ. ಮೂಲ ಸೆಲೆಯನ್ನು ಬಿಟ್ಟುಕೊಡದೆ ಸಕಾರಣ ಬದ್ಧವಾಗಿ ಋತದ ಹಾದಿಯಲ್ಲಿ ಬೆಳೆಯುವ ಬಿತ್ತರೂಪಿ. ಇವರ ಕಾವ್ಯದಲ್ಲಿ ವಿಚಾರಗಳು ಸಂವೇದನೆಗೆ ಒಳಗಾಗಿರುವುದು ಈ ಬಗೆಯಲ್ಲಿ.

ಇವರ ಮೊದಲ ಕವನ ಸಂಕಲನ ಪ್ರಕಟವಾದದ್ದು ೧೯೮೭ರಲ್ಲಿ. ಅದು ಕರ್ನಾಟಕದ ಬದುಕಿನಲ್ಲಿ ಹಲವು ಚಳವಳಿಗಳು ಜೀವಂತವಿದ್ದ ಕಾಲ. ದಲಿತ ಬಂಡಾಯ ರೈತ ಚಳವಳಿಗಳ ಜೊತೆಗೆ ಭಾಷಾ ಚಳವಳಿಯೂ ತೀವ್ರವಾಗಿದ್ದು ಎಲ್ಲ ನಿಟ್ಟಿನ ವಿಚಾರಧಾರೆಗಳನ್ನು ತೀವ್ರವಾಗಿ ಪ್ರಶ್ನಿಸುತ್ತಿದ್ದ ಎಚ್ಚರದ ದಶಕವದು. ತುರ್ತು ಪರಿಸ್ಥಿತಿ ಮುಗಿದು ರಾಜಕೀಯ ಸ್ಥಿತ್ಯಂತರದಲ್ಲಿ ಸಾಮಾಜಿಕ ಬದಲಾವಣೆಯ ಬಗ್ಗೆ ಕನಸುಗಳನ್ನು ಬಿತ್ತಿದ್ದ ದಿನಗಳವು. ಕನ್ನಡ ಸಾಹಿತ್ಯದಲ್ಲಿ ನವ್ಯ ಮಾರ್ಗ ತನ್ನ ಅತಿರೇಕದ ಶಿಖರ ಸೀಮೆಯನ್ನು ಮುಟ್ಟಿ ತನ್ನ ಒಳಗಿನಿಂದಲೇ ಹುಟ್ಟಿದ ಹಲವು ನೆಲಮುಖೀ ಪ್ರಶ್ನೆಗಳಿಗೆ ಉತ್ತರಿಸಲಾಗದೆ ಬಳಲಿಕೆಯ ಅಂಚಿನಲ್ಲಿ ನಿಂತಿದ್ದ ಇಳಿಗಾಲವದು. ಬರಹದಲ್ಲಿ ಹೇಳಿದ್ದಕ್ಕೂ ಬದುಕಿನಲ್ಲಿ ಗುರುತಿಸಿಕೊಂಡದ್ದಕ್ಕೂ ಸಾಕಷ್ಟು ವೈರುಧ್ಯಗಳನ್ನು ರಾಚಿದಂತೆ ಕೆಲವರ ರಾಜಕೀಯ ನಡೆ ನವ್ಯದೊಳಗಿನ ಕೆಲವರಿಗಾದರೂ ನಿಜದ ನೆಲೆಯ ಅರಿವಿನ ಉರಿತಾಕಿಸಿತು. ಬ್ರಾಹ್ಮಣ–ಶೂದ್ರ ಪ್ರಜ್ಞೆಗಳನ್ನು ಪ್ರಖರವಾಗಿ ಎತ್ತಿಹಿಡಿದಂತೆ ಬರಹಗಾರರ ಒಕ್ಕೂಟ ಹುಟ್ಟಿದ್ದು ಹಾಗೆಯೇ ಅಲ್ಪಾಯುಷಿಯಾಯಿತು. ಆದರೆ ಅದು ಹುಟ್ಟಲು ಕಾರಣವಾದ ಧಾತು ದ್ರವ್ಯ ತನ್ನ ಸಂಚಲನವನ್ನು ವ್ಯಾಪಕ ಪ್ರಮಾಣದಲ್ಲಿ ಉಂಟುಮಾಡಿತು. ಹುನ್ನಾರಗಳನ್ನು ಅರಿಯುವ ಎಚ್ಚರದ ಪ್ರಜ್ಞೆಗಳನ್ನು ಬೆಳಸಿತು. ಸಾಂಸ್ಕೃತಿಕ ರಾಜಕಾರಣದ ಹೊಸದಾರಿಗಳ ಶೋಧಕ್ಕೆ ಅನುವು ಮಾಡಿಕೊಟ್ಟಿತು.

ಇಂಥ ಬಿಕ್ಕಟ್ಟುಗಳನ್ನು ಎದುರಿಗಿಟ್ಟ ಕಾಲಘಟ್ಟದಲ್ಲಿ ವಿಜಯಾ ಬರೆಯ ತೊಡಗಿದರು. ಇವರ ಅಧ್ಯಯನದ ಶಿಸ್ತನ್ನು ರೂಪಿಸಿದ್ದು ನವ್ಯದ ವಿಚಾರಧಾರೆ. ವ್ಯಕ್ತಿಕೇಂದ್ರಿತ ಭಾವದಲ್ಲಿ ಸಮಸ್ಯೆಗಳನ್ನೆಲ್ಲ ತಲೆಮೇಲೆ ಹಾಕಿಕೊಂಡು ಅವುಗಳನ್ನು ವಿಶ್ಲೇಷಿಸುವ ನೋಡುವ ದೃಷ್ಟಿ ಹರಿದದ್ದು ವ್ಯಕ್ತಿಗತ ನೆಲೆಯ ಮುಖಮಾರ್ಗದಿಂದಲೇ ಎಂಬುದು ಈ ದೃಷ್ಟಿಯ ಬಹುದೊಡ್ಡ ಮಿತಿ. ಅದನ್ನು ವಿರೋಧಿಸಿ ಸಾಹಿತ್ಯ ಚಿಂತನೆಯನ್ನು ಸಮಾಜ ಮುಖಿಯಾಗಿಸಿದ ದಲಿತ ಬಂಡಾಯಗಳ ವಿಚಾರವೂ ಅದಾಗಲೇ ತನ್ನ ಪ್ರಭಾವಳಿಯನ್ನು ಅಬ್ಬರದಲ್ಲಿ ಬಿತ್ತುತ್ತಿದ್ದ ಕಾಲಮಾನವದು. ಇಂಥ ಸಂಘರ್ಷದ ಒತ್ತಡಕ್ಕೆ ವಿಜಯ ಅವರು ಸಿಕ್ಕಿಕೊಂಡಿದ್ದು ಒಂದು ಚಾರಿತ್ರಿಕ ಸತ್ಯ. ಬೆನ್ನ ಹಿಂದಿನ ಭಾರವಾಗಿ ತಲೆಯ ಮೇಲೆ ಸವಾರಿ ಮಾಡುತ್ತಿರುವ ನವ್ಯ ಹಾಗೂ ಮನದ ಮುಂದಣ ತೆರೆದ ಕಟು ಸತ್ಯವಾಗಿ ಅಬ್ಬರಿಸುತ್ತಿರುವ ಬಂಡಾಯದ ಮೊಳಗು ಇವುಗಳಲ್ಲಿ ಯಾವ ದಾರಿ ನನ್ನದು ಎಂಬುದು ಇವರಿಗೆ ಆಯ್ಕೆಯ ಪ್ರಶ್ನೆಯಾಗಿ ಕಂಡಿದೆ. ಇದೇ ಸಂದರ್ಭದಲ್ಲಿ ಅವರಿಗೆ ಈ ಪ್ರಶ್ನೆಯ ಜತೆಗೆ ಅತಿ ಜರೂರಾಗಿ ಕಾಡಿರುವುದು ಬೇರೆ ಮಾರ್ಗವಿದೆಯೇ? ಎಂಬ ತಳಮಳ.

**ವೃತ್ತದೆಲ್ಲೆಯ ಸುತ್ತಸುತ್ತಿ**
**ಸುತ್ತಿ ಗಿರಕಿ ಹೊಡೆದು**
**ಹೊರಟ ಹಾದಿಗೇ ಹೊರಳಿ**
**ಸಿಡಿಮಿಡಿಸಿ**
**ವೃತ್ತದೊಂದಿಗೇ ಉರುಳುರುಳಿ**
**ಬಂಡೆಗಪ್ಪಳಿಸಿ**
**ತಪ್ಪಿಸಿಕೊಳ್ಳ ಬಯಸಿದರೆ**
**ನಾನೆ ತಲೆಕೆಳಕು.**
......................
.........................
**ನನ್ನ ಬಳಸಿದ ವೃತ್ತವೇ**
**ನನ್ನ ಸಮಾಧಿಗೆ ಶ್ರೀಕಾರ.**

ಸೈದ್ಧಾಂತಿಕ 'ವೃತ್ತದೊಳಗೆ' ಬಂದಿಯಾದ ಯಾವುದೇ ಮನಸ್ಸಿಗೆ ಈ ಪರಿಯ ತಹ ತಹ ಸಹಜ. (ವಿಜಯ ಅವರು) ಯಾವುದೇ ಚಳವಳಿಯಲ್ಲಿ ತೊಡಗಿಕೊಂಡಿದ್ದವರಲ್ಲ. ಆದರೆ ಘಟಿಸುತ್ತಿದ್ದ ವಿದ್ಯಮಾನಗಳಿಗೆ ಕಣ್ಣು ಕಿವಿ ತೆರೆದಿಟ್ಟುಕೊಂಡಿದ್ದವರು. ಚಳವಳಿ ಎಂಬುದು ಇವರಿಗೆ ಹೊರಗಿನ ಸಂಗತಿಯಾಗದೆ

ಒಳಗಿನ ಅಳುಕಾಗಿ ಪ್ರಶ್ನೆಯಾಗಿ ಕಾಡಿಸಿದ್ದು ಸಹಜವಿದೆ. ಹೀಗಾಗಿ ಎಂಬತ್ತರ ದಶಕದಲ್ಲಿ ಬಂದ ಬಂಡಾಯ ಬರಹಗಳಿಗಿಂತ ಭಿನ್ನವೂ ನವ್ಯದ ಅತಿರೇಕದ ಅವಾಂತರಗಳಿಂದ ಬಿಡಿಸಿಕೊಂಡು ಬರೆಯುವ ಉಮೇದೂ ಇವರ ಪ್ರಾರಂಭದ ಸಂಕಲನದಲ್ಲಿ ಢಾಳಾಗಿ ಕಂಡು ಬರುತ್ತದೆ.

**ನನ್ನ ನಂತರವೂ ನನ್ನ ವಿಭವದ**
**ಹೊಗರ ಚೆಲ್ಲುವ ಚಿಗುರು ಬೇಕು**
**ಭೂಮವಾಗಿ**
**ಉಳಿಯಬೇಕೆಂಬುದೇ**
**ಅಂತರಾಳದ ಆಸೆ**
**(ಆಸೆ)**
**ಯೂಲಿಸಿಸ್ ಅನುಭವಗಳೆಲ್ಲ**
**ಏಳು ಸುತ್ತಿನ ಕೋಟೆ**
**ಮುಚ್ಚಳದೊಳಗೆ**
**ಕುಳಿತು ಮೊಳೆ**
**ಬಡಿಸಿಕೊಂಡಿವೆ.**
**(ವೇದನೆ)**

ಸಂಕಲನದಲ್ಲಿನ 'ತ್ರಿಶಂಕು' ಎಂಬ ಶೀರ್ಷಿಕೆಯ ಪದ್ಯವೇ ಅವರ ಮನಸ್ಸಿನ ದ್ವಂದ್ವಾತ್ಮಕ ಧೋರಣೆಗೆ ಕನ್ನಡಿ ಹಿಡಿದಂತಿದೆ. ಪುರಾಣದ ವ್ಯಕ್ತಿಯಾದ 'ತ್ರಿಶಂಕು' ನವ್ಯದ ಮನಸ್ಸುಗಳಿಗೆ ಒಂದು ವ್ಯರ್ಥ ಪ್ರಯತ್ನಕ್ಕೆ ಒಡ್ಡಿಕೊಂಡ ಪ್ರತಿಮೆಯಾಗಿ ಕಾಣುತ್ತಾನೆ; ಅಸಾಧ್ಯವಾದದ್ದಕ್ಕೆ ಆಸೆ ಪಟ್ಟು ಅತಂತ್ರದ ಸ್ಥಿತಿಗೆ ಬಿದ್ದವ.

**ತ್ರಿವಿಕ್ರಮನಲ್ಲದ ನೀನು**
**ನೆಲದಲ್ಲಿದ್ದೂ ಸ್ವರ್ಗದಲ್ಲಿ**
**ಹೆಜ್ಜೆಯೂರಲಾರೆ**
**ನೀ ಚಾಚಿದ ಕೈಗೆ ಸಿಕ್ಕುವುದು**
**ಉಚ್ಚೈಶ್ರವಸ್ಸಿನ**
**ಉದುರು ಕೂದಲು ಮಾತ್ರ**

ಹೀಗೆ ಅವನ ಪ್ರಯತ್ನವನ್ನು ಬಹಳ ಕೆಟ್ಟ ಮಾತಿನಲ್ಲೇ (ಉದುರು ಕೂದಲು) ಜರೆದು ಝುಂಕಿಸುತ್ತಾರೆ ಕವಯತ್ರಿ. ಆದರೆ ನವ್ಯದ ಆರೋಪಿತ ಆಲೋಚನೆಗಳಿಗೆ

ನಮ್ಮ ಪುರಾಣದ ಸಾಂಸ್ಕೃತಿಕ ಸಂಘರ್ಷದ ಪಾತ್ರ ವಸ್ತು ಪ್ರಸಂಗಗಳು ಹೀಗೆ ಅಪಾರ್ಥಕ್ಕೆ ಎಡೆಕೊಟ್ಟು ಬಳಕೆಯಾಗುವುದರಿಂದ ಆಗುವ ಸಾಂಸ್ಕೃತಿಕ ಅಪಾಯ ತೀವ್ರತರವಾದುದು. ತ್ರಿಶಂಕು ಪ್ರಸಂಗವನ್ನು ಪರಿಭಾವಿಸಿದರೆ ಅವನು ಕೇವಲ ಒಬ್ಬ ವ್ಯಕ್ತಿಯಾಗಿ ಎದುರಾಗುವುದಿಲ್ಲ. ಅವನ ಹಿಂದೆ ವಿಶ್ವಾಮಿತ್ರ–ವಸಿಷ್ಠರಿದ್ದಾರೆ. ಇವರ ಜಗಳ ಎರಡು ಸಂಸ್ಕೃತಿಗಳ ಸಮರವಾಗಿದೆ. ವಿಶ್ವಾಮಿತ್ರ ಪ್ರಜ್ಞೆ ಹಾಗೂ ವಸಿಷ್ಠ ಪ್ರಜ್ಞೆಗಳ ಘರ್ಷಣೆಯೆಂಬುದು ಅನಾದಿಕಾಲದ್ದಾದಷ್ಟೇ ವರ್ತಮಾನದ ವಿದ್ಯಮಾನವೂ ಹೌದು. ಬ್ರಾಹ್ಮಣ್ಯದ ಜಾತಿಸೂತಕ ಅಂಶವನ್ನು ಮರೆಮಾಚಿಕೊಂಡು ಹಿಂದುತ್ವದ ಧರ್ಮಸೂಚಕ ಮುಖವಾಡದಲ್ಲಿ ಮೆರೆಯುತ್ತಿರುವ ಈ ವಸಿಷ್ಠ ಪ್ರಜ್ಞೆ ಈ ನೆಲದ ಕಾಲುದಾರಿ ಸಂಸ್ಕೃತಿಗಳನ್ನು ಆ ಮೂಲದ ಪ್ರತಿಭೆಗಳನ್ನು ಈಗಲೂ ಅಗೌರವಿಸಿ ಅವಜ್ಞೆಗೆ ತಳ್ಳುತ್ತಿದೆ. ಅವೈದಿಕವಾದದ್ದನ್ನು ಕೀಳ್ಗಳೆದು ಅಮಾನ್ಯಗೊಳಿಸುವುದು ಅದರ ಹುಟ್ಟುಗುಣ. ವಿಶ್ವಾಮಿತ್ರನ ಹೋರಾಟ ಪರ್ಯಾಯ ಸಂಸ್ಕೃತಿ ನಿರ್ಮಾಣದ ಪ್ರಯತ್ನ. ವಸಿಷ್ಠ ಪ್ರಜ್ಞೆಯ ಮನಸ್ಸುಗಳಿಗೆ ತ್ರಿಶಂಕು ಸ್ವರ್ಗವೆಂಬುದು ಅಣಕದ ವಿದ್ಯಮಾನ. ತುಚ್ಛೀಕರಿಸಬೇಕಾದ ಸರಕು. ಇಲ್ಲಿ ವಿಜಯ ಅವರು ಈ ಇದೇ ಜಾಡಿನಲ್ಲಿ ವಿಚಾರ ಹರಿಸಿದಂತೆ ತ್ರಿಶಂಕುವಿನ ಪ್ರಯತ್ನವನ್ನು ಅಣಕಿಸಿದ್ದಾರೆ. ಅವನ ಸ್ವರ್ಗದ ಕನಸನ್ನು ಲೇವಡಿಗೆ ದೂಡಿದ್ದಾರೆ. ಉಚ್ಚೈಶ್ರವದ ಉದುರು ಕೂದಲು ಕೂಡ ಅವನಿಗೆ ಸಿಗುವುದಿಲ್ಲವೆಂಬ ನೇತ್ಯಾತ್ಮಕ ಧೋರಣೆಯಲ್ಲಿ ಹೀಗಳೆದಿದ್ದಾರೆ. ಪುರಾಣ ಜಗತ್ತಿನ ಆಂತರ್ಯದಲ್ಲಿ ಹುದುಗಿರುವ ಸಾಂಸ್ಕೃತಿಕ ಸಂಘರ್ಷಗಳನ್ನು ಅರಿಯದೆ ಹೋದಾಗ ಈ ಪರಿಯ ಅಪಾಯಗಳು ಉಂಟಾಗುತ್ತವೆ. ಸಾಂಸ್ಕೃತಿಕ ಎಚ್ಚರ ಕವಿಯ ಜೀವದ್ರವ್ಯ. ಸಾಂಸ್ಕೃತಿಕ ಎಚ್ಚರವಿಲ್ಲದ ಕವಿಯ ಕಾವ್ಯದಲ್ಲಿ ಅನಾಹುತಗಳು ಅವಘಡಗಳು ಜೀವ ವಿರೋಧಿ ಅಂಶಗಳಂತೆ ಹರಿದಾಡುತ್ತವೆ. ಸಾಂಸ್ಕೃತಿಕ ಎಚ್ಚರ ಎಂಬುದು ಆಕ್ರಮಣ ಶೀಲ ಸಂಸ್ಕೃತಿಯ ಪರವಾದದ್ದಾಗಿರದೆ ತುಳಿತಕ್ಕೊಳಗಾದದ್ದರ ಪರವಾಗಿರುತ್ತದೆ. ಆಧುನಿಕ ಕನ್ನಡ ಕಾವ್ಯ ಜಗತ್ತಿನಲ್ಲಿ ಶ್ರೇಷ್ಠತೆಯ ವ್ಯಸನ ಸಂಪ್ರದಾಯಗಳು ಇಂಥ ವಸಿಷ್ಠ ಪ್ರಜ್ಞೆಯ ಪ್ರವಾಹ ಪತಿತರಾಗಿರುವುದು ಸಂಸ್ಕೃತಿ ನಿಷ್ಠ ಎಚ್ಚರದ ದುರಂತವ್ಯಂಗವೇ ಸರಿ.

ಕಲಾ ಜಗತ್ತಿನಲ್ಲಿ ಬಳಕೆಯಾಗುವ ಕಲಾತ್ಮಕ ಪರಿಕರಗಳು ಕೂಡ ಈ ಪರಿಯ ಚರ್ಚೆಗೆ ಒಡ್ಡಿಕೊಳ್ಳಬೇಕಾದ ಅಗತ್ಯವಿದೆ. ಚಿನ್ನದ ಸೂಜಿ ಕಣ್ಣಿಗೆ ಚುಚ್ಚುವ ಹತಾರವಾಗಬಾರದಲ್ಲವೇ? ವಿಜಯ ಅವರಲ್ಲಿ ನವ್ಯದ ಬೌದ್ಧಿಕತೆಯೆಂಬುದು ಇಂಥ ಪ್ರಮಾದಕ್ಕೆ ಕಾರಣವಾಗಿರುವುದು ಈ ಕವನದಲ್ಲಿ ಎದ್ದು ಕಾಣುವ ವಿಚಾರವಾಗಿದೆ. ಏಕೆಂದರೆ ಇಡೀ ಸಂಕಲನದಲ್ಲಿ ಹೆಣ್ತನದ ಬಗ್ಗೆ ಹೆಣ್ಣಿನ ಶೋಷಣೆಯ ವಿರುದ್ಧ ದನಿ ಎತ್ತಿದ ಕವಯಿತ್ರಿ ಹೆಣ್ಣಿನ ಸ್ವಾಭಿಮಾನದ ಪರವಾಗಿ ಹೆಗ್ಗಳಿಕೆಯ ಮಾತುಗಳನ್ನಾಡುತ್ತಾರೆ. ಅದೇ ರೀತಿ ಶೋಷಿತರ ಪರವಾಗಿ ನುಡಿಗೊಡುತ್ತಾರೆ. ಇಂಥ ಆರ್ದ್ರಭಾವದ ಮನಸ್ಸು

ತ್ರಿಶಂಕುವಿನ ಬಗ್ಗೆ ಹೀಗೆ ಯೋಚಿಸಿದ್ದರ ಹಿಂದೆ ನಮ್ಮ ಶೈಕ್ಷಣಿಕ ಪಠ್ಯಗತಿ ಹಾಗೂ ನವ್ಯ ಸಂದರ್ಭದ ಕಾವ್ಯ ಸಾಮಗ್ರಿಯ ಬಗೆಗಿನ ರೂಢಿಗತ ತಿಳವಳಿಕೆಗಳು ಕಾರಣವೆಂಬುದನ್ನು ಕಡೆಗಣಿಸುವಂತಿಲ್ಲ. ಸಾಂಸ್ಕೃತಿಕ ವಿಸ್ಮೃತಿ ಎಂಬುದು ಈ ರೀತಿಯ ಅರ್ಥ ಮಾರ್ಗದಲ್ಲಿ ಆಲೋಚನೆಗಳನ್ನು ಬಂಧಿಸುವುದರ ಮೂಲಕ ಜರುಗುವ ವಿದ್ಯಮಾನ ಎಂಬುದು ಒಂದು ಚಾರಿತ್ರಿಕ ವಿಪರ್ಯಾಸ.

ವಿಜಯಾ ಅವರ ಕಾವ್ಯದ ವಿಶೇಷವೆಂದರೆ ಅದು ಘಟನಾವಳಿಗಳಿಲ್ಲದ ಕಥನ. ಹೇಳುವಿಕೆಯಲ್ಲಿಯೇ ಒಂದು ಸೊಗಸನ್ನು ನಾಟಕೀಯತೆಯನ್ನು ಒಳಗೊಂಡಂತೆ ಪದ್ಯ ಬೆಳೆಯುತ್ತದೆ. ಈ ಕಾರಣದಿಂದಾಗಿಯೇ ಮಾತು ಹ್ರಸ್ವದಲ್ಲಿ, ಕ್ರಿಯಾಪದಗಳ ಚುರುಕಿನಲ್ಲಿ ಕೆಲವೊಮ್ಮೆ ಹರಿದರೆ ಹಲವು ಬಾರಿ ಅದು ಮಾತಾಳಿಯ ದೀರ್ಘತೆಯಲ್ಲಿ ಬಳಲುತ್ತವೆ. ರೂಪಕ ದೃಷ್ಟಾಂತಗಳ ಮಿಂಚು ಬೆಳಕಿಗಿಂತ ಮಾತಿನ ಪಂಜು ಹಿಡಿದ ಪಯಣದಲ್ಲಿ ದಾರಿ ಸವೆದದ್ದೇ ಹೆಚ್ಚು. ಉದಾಹರಣೆಗೆ ಈ ಕೆಳಗಿನ ಸಾಲುಗಳನ್ನು ಗಮನಿಸಿ.

**ಜನಾರಣ್ಯ ಬೀದಿಗಳ ಕಿಷ್ಕಿಂಧೆಯಲ್ಲಿ**
**ಬಸ್ಸು ಲಾರಿ ಕಾರುಗಳ**
**ದೈತ್ಯವೇಗದ ಮೊರೆತ ಕಾರಡವಿಯಲ್ಲಿ**
**ಕಳೆದು ಹೋದ ಮುಖಗಳು**
**ಇರಿದು ಕೊಲುವ ನಖಗಳು**
**ಕಾವಿಯಲ್ಲಿ ಕೃಷ್ಣರಾಗಿ**
**ಕಾಮರಲ್ಲಿ ರಾಮರಾಗಿ**
**ಹಿಂಸೆಯಲ್ಲಿ ಕಂಸರಾಗಿ**
**ಬಿದ್ದರಲ್ಲಿ ಬುದ್ಧರಾಗಿ**
**ಕ್ರುದ್ಧರಲ್ಲಿ ಸಿದ್ಧರಾಗಿ**
**ಬಳ್ಳಿಮರ ಕಾನುಬಾನು**
**ನೆಲ ಬಿಲ ಮಲೆ ತೊಲೆ**
**ನೀರು ಬೀರು ಕ್ಲಬ್ಬುಪಬ್ಬು**
**ಮನೆ ಮಠ ಗಿಡಗೋಪುರ**
**ದಾಟಿಯೆಲ್ಲೆಲ್ಲೋ**
**ಆಳದಲ್ಲೋ**
**ಎಲ್ಲಿಯೋ ಒಂದು ಕಡೆ**

ಕದ್ದು ಕುಳಿತ ಕಣ್ಣರು
ತಾಯ ಮರೆತ ಚಿಣ್ಣರು
ಒಂದಲ್ಲ ಒಂದು ದಿನ
ಬಂದೇ ಬಂದಾರು
ಸಂತರಾಗಿ ಪಂತರಾಗಿ
ನೆಂಟರಾಗಿ ಬಂಟರಾಗಿ
ಉಡಿದ ತಲೆಗೆ ಮುಕುಟ ತೊಡಿಸಿ
ಕನಸ ಬೀದಿಯ ತುಂಬ
ಕಾಮನ ಬಿಲ್ಲು ರಂಗೋಲಿ ಬಿಡಿಸುವ
ಈ ಇವರು
ಮುಖವಿಲ್ಲದವರು ಬಂದೇ ಬರುತ್ತಾರೆ.

ಇವರ ಕಾವ್ಯದಲ್ಲಿ ಆಂತರ್ಯದಲ್ಲಿ ನಿರಾಶೆಯ ಜೊತೆಗೆ ನಿರೀಕ್ಷೆಯೂ, ವಾಸ್ತವದ ಅರಿವಿನ ಬಳಲಿಕೆಯ ಜೊತೆಗೆ ಕನಸಿನ ಅಪೇಕ್ಷೆಯೂ ಉತ್ಸುಕತೆಯೂ ದ್ವಂದ್ವಮಾನ ಗುಣದಲ್ಲಿ ಮೈ ಪಡೆದಿವೆ. ಈ ಭೂಮಿ ಸಮೃದ್ಧಿಯ ಫಲದಾಯಿಯಾದಷ್ಟೇ ಬಂಜೆಗುಣದ ಸತ್ವಹೀನ ಶರೀರೆಯಾಗಿಯೂ ಇವರ ಅನುಭವ ಕಕ್ಷೆಯಲ್ಲಿ ಕಂಡಿದ್ದಾಳೆ. ನೆಲದ ಗುಣಕ್ಕಿಂತ ಬೀಜದ ಕಾರಣ ಪರಿಣಾಮದಲ್ಲಿ ಆಗುವ ಅನಾಹುತವೆಂಬ ಅರಿವಿನ ಅನುಭವವೂ ಇವರ ಚಿಂತನೆಯಲ್ಲಿ ಹಾಯುವುದುಂಟು. ಹೀಗಾಗಿ ನೆಲದ ಬದುಕಿನಲ್ಲಿನ ಈ ಬಗೆಯ ಎರಡು ಮಾದರಿಗಳು ವ್ಯಕ್ತಿಗತಭಾವಕ್ಕೆ ವಿವರಣಾತ್ಮಕ ದೃಷ್ಟಾಂತವಾಗಿ ನಿರೂಪಿತವಾಗುತ್ತವೆ. ಇಂಥ ವಿವರಣೆಯಲ್ಲಿ ಲಯ ಮಾಧುರ್ಯದ ಪ್ರತಿಧ್ವನಿ ಪದಮಂಜಗಳು ಸಲೀಸಾಗಿ ಹರಿದಾಡುತ್ತವೆ. ಇದು ಇವರ ರಚನಾ ಶೈಲಿ ಕೂಡ. ಆದರೆ ಆತ್ಮಗತ ಕಥನವನ್ನು ಪ್ರತೀಯ ಮಾನ ವಸ್ತು ಸಾರೂಪ್ಯದಲ್ಲಿ ಹೇಳತೊಡಗಿದಾಗ ಕವಯತ್ರಿಯ ಮಾತು ಧಿಗ್ಗನೆ ಬೆಚ್ಚಿ ಬೀಳಿಸುವ ಆತ್ಮ ನಿರೀಕ್ಷೆಗೆ ಒಳಗಾಗುತ್ತದೆ. ಆತ್ಮ ನಿರೀಕ್ಷೆ ಎಂಬುದು ಒಳಗಿನ ವೇದನೆಯಾದಾಗ ಮಾತು ಹ್ರಸ್ವವಾಗುತ್ತದೆ. ವಿವರಣೆಗಳೆಲ್ಲ ವಿರುದ್ಧ ನಿಂತ ಶಕ್ತಿಗಳಾಗಿ ತನ್ನ ಮಾತೇ ತನಗೆ ಮುಳುವಾದ ಭಾವದಲ್ಲಿ ಕವನದ ಧ್ವನಿಶಕ್ತಿ ಹೊಸ ತಿರುವು ಪಡೆಯುತ್ತದೆ. 'ಬಂಜೆ ಗಿಡಗಳು' ಎಂಬ ಪದ್ಯ ಇದಕ್ಕೆ ಉದಾಹರಣೆ.

ಈ ಕವನದ ನೋವು ವೈಯಕ್ತಿಕ ನೆಲೆಗೆ ಸಂಬಂಧಿಸಿದ್ದಾದರೂ ಅದನ್ನು ಅಭಿವ್ಯಂಜನೆಗೆ ಒಳಗು ಮಾಡಿರುವ ಪರಿ ಅನನ್ಯ ರೀತಿಯದು. ಮತ್ತೊಬ್ಬರ ನೋವನ್ನು ಪರಿಭಾವಿಸದ ಸಮಷ್ಟಿಯ ಪ್ರತಿಕ್ರಿಯೆ ಶಬ್ದಜಡ ಭಾವದಲ್ಲಿ ವ್ಯವಹರಿಸುತ್ತದೆ. ಸಮಷ್ಟಿಯೊಳಗೆ ತಾನೂ ಒಂದು ಎಂಬ ಭಾವದ ಬಗೆಯಲ್ಲಿ ನೋವಿನ ತೀವ್ರತೆಯನ್ನು

ಅನುಭವಿಸಿದಾಗ ಆಗುವ ಅಳಲು ಇಬ್ಬಗೆಯದು. ಒಂದು ಕಡೆ ಒಳ ಸಂಕಟ ಇನ್ನೊಂದು ಕಡೆ ಹೊರಗಿನ ಪ್ರತಿಕ್ರಿಯೆ ಇವುಗಳನ್ನು ತನ್ನೊಳಕ್ಕೆ.ತಾನೇ ಎರಡೂ ಆಗಿ ತಂದುಕೊಂಡು ಅನುಭವಿಸುವುದು ದುರಂತ ವ್ಯಂಗ್ಯವೇ ಸರಿ. ಸ್ವಕೀಯ ವಿಷಯಗಳು ನಿಸರ್ಗ ವ್ಯಾಪ್ತಿಯ ವಸ್ತು ಪ್ರತಿರೂಪಗಳಲ್ಲಿ ದನಿಪಡೆದುಕೊಳ್ಳುವುದು ಇವರ ಬಹುಪಾಲು ರಚನೆಗಳಲ್ಲಿ ಕಂಡುಬರುತ್ತದೆ. ಇಂಥದ್ದರ ನಡುವೆ ಇವರನ್ನು ಆಕರ್ಷಿಸಿದ ಹಲವು ವ್ಯಕ್ತಿತ್ವಗಳು ವ್ಯಕ್ತಿ ಚಿತ್ರಗಳಾಗಿ ಮೈ ಪಡೆದಿವೆ. ಮದರ್ ಥೆರೇಸಾ, ನೀಲಾಂಜನೆ, ಅಂಬೇಡ್ಕರ್, ಬುದ್ಧ, ಶಾಕುಂತಲೆ, ಅಕ್ಕಮಹಾದೇವಿ, ಬಸವಣ್ಣ, ಶ್ರೀನಿವಾಸರಾಜು, ವೈ ಎನ್ಕೆ, ಬಸವಾರಾಧ್ಯ– ಹೀಗೆ ಈ ಪಟ್ಟಿ ಬೆಳೆಯುತ್ತದೆ. ಇವರಲ್ಲಿ ಲೋಕ ಪ್ರಸಿದ್ಧರೂ ಇದ್ದಾರೆ. ವೈಯಕ್ತಿಕ ಕಕ್ಷೆಯಲ್ಲಿ ಪ್ರಭಾವ ಬೀರಿದ ಆಪ್ತ ಬಳಗದವರೂ ಇದ್ದಾರೆ. ವ್ಯಕ್ತಿ ಸಂಬಂಧ ಆಪ್ತವಾಗಿದ್ದಾಗ ಹರಿವ ಭಾವ ಬಾವುಣಿಕೆಗಳೆಲ್ಲ ಮಧುರವೂ ಆರ್ದ್ರವೂ ಆಗಿರುತ್ತವೆ. ಅನುಭವವೇ ಪ್ರಮಾಣುವಾಗಿ ಆಪ್ತತೆಯೇ ಪ್ರಾಣ ಜೀವಾಣುವಾಗಿ ಮಾತಿನಲ್ಲಿ ವ್ಯಕ್ತಿತ್ವ ಮೂರ್ತಗೊಳ್ಳುತ್ತದೆ. ಸಿದ್ಧ ಪ್ರಸಿದ್ಧರ ವ್ಯಕ್ತಿತ್ವಗಳನ್ನು ಕಟ್ಟಿಕೊಡುವಾಗ ಅವರ ಸಾಧನೆ, ಜೀವನ ಧರ್ಮ ವಿಮರ್ಶೆಯ ವಿವಕ್ಷೆಗೆ ಒಳಗಾಗುತ್ತವೆ.

ಥೆರೇಸಾ, ಅಕ್ಕ, ಅಂಬೇಡ್ಕರ್, ಬಸವಣ್ಣ ಇಂಥವರ ಸಾಧನೆಗಳನ್ನು ಲೋಕದ ಬದುಕನ್ನು ವಿವರಿಸಿಕೊಳ್ಳುವುದಕ್ಕೆ ಪ್ರಮಾಣು ಮಾದರಿಯಾಗಿಟ್ಟುಕೊಂಡಂತೆ ಆಲೋಚಿಸುತ್ತಾರೆ. ಆದರೆ ವೈಯಕ್ತಿಕ ಪರಿಧಿಯಲ್ಲಿ ಬಂದ ಅನುಭವಗಳ ಆಪ್ತತೆಯಲ್ಲಿ ಶ್ರೀನಿವಾಸರಾಜು, ವೈಎನ್ಕೆ, ಬಸವಾರಾಧ್ಯ ಇಂಥವರ ವ್ಯಕ್ತಿ ಚಿತ್ರಗಳ ಸೊಗಸು ಇದೆ. ವ್ಯಾಪಕವಾದ ಅರ್ಥದಲ್ಲಿ ಇದು ವಿಜಯಾ ಅವರು ಕಂಡು ಹಾಗೂ ಕಾಣ ಬಯಸಿದ ಸಾಂಸ್ಕೃತಿಕ ಬದುಕಿನ ಒಂದು ಮುಖ.

ವ್ಯಕ್ತಿತ್ವಗಳ ಅಸ್ಮಿತೆಯನ್ನು ವಿಶೇಷವಾಗಿ ಗ್ರಹಿಸಿ ಗೌರವಿಸುವ ಛಾತಿ ವಿಜಯಾ ಅವರದು. ಸಂಬಂಧಗಳು ಹೇರಿಕೆಗಳಾಗಿ ಒಂದು ಮತ್ತೊಂದರ ಭಾರದಲ್ಲಿ ಆತ್ಮಗೌರವ ಆತ್ಮಾಭಿಮಾನಗಳು ನಲುಗಬಾರದು. ಇದು ಎರಡೂ ಜೀವಕ್ಕೂ ಒಳ್ಳೆಯದಲ್ಲ. ಪರಸ್ಪರ ಗೌರವದಲ್ಲಿ ವ್ಯಕ್ತಿತ್ವದ ಬೆಳವಣಿಗೆ ಸಮುದಾಯದ ಹಿತ ಸಾಧನೆ. ಹಾಗೆಂದು ವಿರುದ್ಧವೂ ಅಮಾನವೀಯವೂ ಅವೈಜ್ಞಾನಿಕವೂ ಆದವುಗಳನ್ನು ಸಹಿಸಿಕೊಳ್ಳಬೇಕೆಂದಲ್ಲ. ಒಳಿತು ಕೆಡುಕಿನ ಸೂಕ್ಷ್ಮದಲ್ಲಿ ಪರಾಮರ್ಶಿಸಿ ಪಾರದರ್ಶಕವಾಗಿ ನಡೆದುಕೊಳ್ಳುವ ಗುಣ ಮುಖ್ಯ ಇದು ವ್ಯಕ್ತಿತ್ವದ ಅಸ್ಮಿತೆಯನ್ನು ಗೌರವಿಸುವ ಪರಿ ಹಾಗೂ ಸಮುದಾಯದ ಒಳಿತನ್ನು ಹಾರೈಸುವ ದಾರಿ. ನಿರೀಕ್ಷೆಗಳನ್ನು ಹೇರಬೇಡ' – ಎಂಬ ಕವನದಲ್ಲಿ ಇಂಥ ವಿಚಾರವನ್ನು ಸೊಗಸಾಗಿ ಧ್ಯಾನಿಸಿದ್ದಾರೆ.

ದಾಂಪತ್ಯ ಜೀವನವನ್ನು ವ್ಯಾವರ್ಣಿಸುವ ಹಲವು ಕವನಗಳಿವೆ. ಅಲ್ಲೆಲ್ಲಾ ಗಂಡನನ್ನು ಗೆಳೆಯನೆಂದು, ಸಖನೆಂದು ಸಂಬೋಧಿಸುತ್ತಾರೆ. ಕಾಮ ಪ್ರೇಮದ

ಮಾತುಗಳ ನಡುವೆ ಲಿಂಗತಾರತಮ್ಯದ ಸುಳಿಗಾಳಿ ಬಿರುಗಾಳಿ ಬೀಸುವುದುಂಟು. ಈ ಗಾಳಿ ಇಲ್ಲಿ ಒಳಗಿನ ಒತ್ತಡವಾಗುವುದಕ್ಕಿಂತ ಕಲಿತ ಸಿದ್ಧಾಂತ ಮೂಲದ ತಿಳಿವಳಿಕೆಯಾಗಿ ಇಲ್ಲಿ ಮಾತನಾಡಿದೆ. ಆಳದಲ್ಲಿನ ಸಂಪ್ರದಾಯದ ಬಗೆಗಿನ ಗೌರವ ಹಾಗೂ ವ್ಯಕ್ತಿತ್ವಗಳ ಅಸ್ಮಿತೆಯನ್ನು ಕಾಪಾಡುವ ಎಚ್ಚರದ ನಡೆ ಇದು. ಭಾವಸೂಕ್ಷ್ಮ ಹಾಗೂ ಗುಣ ಗೌರವಗಳ ಸಂದಿಗ್ಧತೆಯನ್ನು ಕವಯಿತ್ರಿ ಅಷ್ಟೇ ಸೂಕ್ಷ್ಮವಾಗಿ ನಿಭಾಯಿಸಿದ್ದಾರೆ. ಇದು ಲೆಕ್ಕಾಚಾರದಲ್ಲಿ ನಡೆದ ನಡೆ ಅಲ್ಲ, ವ್ಯಕ್ತಿ ಸಹಜ ಸ್ವಭಾವವಾಗಿ ಅನುವರ್ತಿಸಿದ ಪರಿ. ಆದ್ದರಿಂದಲೇ ಇಂಥ ಕವನಗಳ ತಾತ್ವಿಕತೆ ಪ್ರಶ್ನಾರ್ಹ ಸಂಗತಿಯಾಗದೆ ಗುಣ ಗೌರವದ ಗ್ರಹಿಕೆಯಾಗುತ್ತದೆ.

ವಿಜಯಾ ಅವರ ಕಾವ್ಯ ಜಗತ್ತಿನಲ್ಲಿ ಅನುಭವ ದ್ರವ್ಯದ ಜೊತೆಗೆ ಓದಿನ ಹಾಗೂ ಕಂಡು ಕೇಳಿದ ಸಂಗತಿಗಳ ಮೂಲಕ ಪಡೆದ ವಸ್ತು ಪ್ರಪಂಚ ವಿಸ್ತಾರವಾಗಿದೆ. ಇಲ್ಲಿ ಜಾನಪದ ಜಗತ್ತಿನ ರಾಜಕುಮಾರಿಯೂ ಬರುತ್ತಾಳೆ. ಪುರಾಣ ಇತಿಹಾಸ ಪ್ರಪಂಚದ ಹಲವು ಪಾತ್ರಗಳು ಪ್ರಸಂಗಗಳು ಸಂಗತಿ ವಿಶೇಷಗಳು ಇವರ ಚಿಂತನೆಗೆ ಗ್ರಾಸವಾಗಿವೆ. ಸ್ತ್ರೀ ಸಂವೇದನೆ ಪ್ರಧಾನವಾಗಿ ಆಲೋಚನೆಗೆ ಒಡ್ಡಿಕೊಳ್ಳುವ ತಾತ್ವಿಕ ವಿಚಾರವಾದರೆ ಆನುಷಂಗಿಕವಾಗಿ ಸಂಪ್ರದಾಯ–ಆಧುನಿಕತೆಗಳ ಸಂಘರ್ಷಮುಖೀ ಜಿಜ್ಞಾಸೆ ದನಿ ಪಡೆದುಕೊಂಡಿರುವುದನ್ನು ಕೇಳಬಹುದು. ನಗರಾಂತರ್ಗತ ಮಧ್ಯಮ ವರ್ಗದ ಬದುಕಿನ ಆತಂಕಗಳನ್ನು ಅಪೇಕ್ಷೆಗಳನ್ನು ಭಾವ ಸೂಕ್ಷ್ಮಗಳ ಬೆರಗು ಬೆಡಗುಗಳನ್ನು ಹಿಡಿಯುವಲ್ಲಿ ಇವರ ಒಲವು ಹೆಚ್ಚಾಗಿರುವುದನ್ನು ಇವರ ಕಾವ್ಯಮಾನದಲ್ಲಿ ಕಾಣಬಹುದಾಗಿದೆ. ಮೂರು ದಶಕಗಳಿಗೂ ಮಿಕ್ಕಂತೆ ಕಾವ್ಯ ನಿರ್ಮಿತಿಯಲ್ಲಿ ತೊಡಗಿರುವ ವಿಜಯಾ ಅವರ ಕಾವ್ಯಶ್ರದ್ಧೆ ಬತ್ತದ ಗಂಗೆ. ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಕ್ರಿಯಾಶೀಲವಾಗಿ ತೊಡಗಿಸಿಕೊಂಡಿದ್ದರೂ ಅವರ ಪ್ರಧಾನ ಆದ್ಯತೆ ಕಾವ್ಯವೆಂಬುದು ಅವರ ಕಾವ್ಯ ರಚನಾ ವಿಪುಲತೆಯನ್ನು ಕಂಡಾಗ ಅರಿವಿಗೆ ಬರುತ್ತದೆ. ಪ್ರೀತಿಯ ಒತ್ತಾಯದಲ್ಲಿ ಮುನ್ನುಡಿ ರೂಪದ ಮಾತುಗಳನ್ನು ಬರೆಯಲು ಆಗ್ರಹಿಸಿದ ಅವರ ಆತ್ಮೀಯತೆಗೆ ಕೃತಜ್ಞತೆಗಳು.

**ಎಸ್. ಜಿ. ಸಿದ್ಧರಾಮಯ್ಯ**

# ಕುತೂಹಲವನ್ನು ಕೆರಳಿಸುವ ಕಾವ್ಯ

ಡಾ. ವಿಜಯ ಸುಬ್ಬರಾಜ್ ಅವರ ಕಾವ್ಯ ಅನೇಕ ಕಾರಣಗಳಿಗಾಗಿ ಕುತೂಹಲಕರ. ಆಧುನಿಕ ಕನ್ನಡ ಕಾವ್ಯದ ಯಾವ ನಿರ್ದಿಷ್ಟ ಕಾವ್ಯ ಚಳುವಳಿಗಳ ಜೊತೆಗೂ ಅವರನ್ನು ಗುರುತಿಸಲಾಗುವುದಿಲ್ಲ ಎನ್ನುವುದು ಅವರ ಕಾವ್ಯದ ವಿಶೇಷತೆಯೂ ಹೌದು, ಹೆಗ್ಗಳಿಕೆಯೂ ಹೌದು. ಅಧ್ಯಾಪನ ಮತ್ತು ಕಾವ್ಯದೊಂದಿಗಿನ ಸತತ ಒಡನಾಟವೂ ನಿರ್ದಿಷ್ಟ ಕಾವ್ಯ ಪಂಥಗಳಾಚೆಗೇ ಇವರ ಕಾವ್ಯ ಉಳಿದಿರುವುದನ್ನು ನಿರ್ಧರಿಸಿರುವ ಪ್ರಧಾನ ಅಂಶಗಳಲ್ಲಿ ಒಂದೆಂದು ತೋರುತ್ತದೆ. ಕಾವ್ಯದ ಅತ್ಯುತ್ತಮ ಮಾದರಿಗಳೊಂದಿಗಿನ ಸತತ ಸಾಂಗತ್ಯವು ಕವಿಯೊಬ್ಬನ / ಕವಿಯೊಬ್ಬಳ ಬರವಣಿಗೆಯ ತಾತ್ವಿಕತೆಯನ್ನು ಮುಕ್ತವಾಗಿಯೇ ಇರಿಸುತ್ತದೆ ಎನ್ನುವುದರ ಬಗೆಗೆ ನನಗಂತೂ ವಿಶ್ವಾಸವಿದೆ.  ಈ ವಿಶ್ವಾಸಕ್ಕೊಂದು ಸಾಕ್ಷಿಯಂತಿದೆ ವಿಜಯ ಸುಬ್ಬರಾಜ್ ಅವರ ಕಾವ್ಯ.

ಡಾ ವಿಜಯಾ ಅವರ ಕಾವ್ಯದ ಬಗೆಗೆ ಮೊದಲಿಗೇ ಗುರುತಿಸಿಕೊಳ್ಳಬೇಕಾಗಿರುವ ಇನ್ನೊಂದು ಮುಖ್ಯ ಅಂಶವೆಂದರೆ ಇವರ ಕಾವ್ಯದ ಮೂಲ ಗುಣ ಅಥವಾ ಮುಖ್ಯ ಕೇಂದ್ರ ಸ್ತ್ರೀ ಪ್ರಣೀತ ಎನ್ನುವುದು ನಿಜ. ಆದರೆ ಅದನ್ನು ಸ್ತ್ರೀ ಕೇಂದ್ರಿತ ಎಂದು ಕರೆಯಲಾಗುವುದಿಲ್ಲ. ಎಂದರೆ ಮಹಿಳಾ ಕಾವ್ಯವನ್ನು ಕುರಿತಂತೆ ಸ್ಥಾಪಿತವಾಗಿರುವ ನಿರೀಕ್ಷಿತವಾಗಿರುವ ಗುಣಲಕ್ಷಣಗಳನ್ನು ಇವರ ಕಾವ್ಯ ಅಪ್ರಜ್ಞಾಪೂರ್ವಕವಾಗಿಯೇ ಎನ್ನುವಂತೆ ದಾಟುತ್ತದೆ. ಹೆಣ್ಣಿನ ಬದುಕು ಮತ್ತು ವ್ಯಕ್ತಿತ್ವದ ತಲ್ಲಣಗಳು ಮತ್ತು ಸವಾಲುಗಳು ನಿದ್ದೆ ಎಚ್ಚರಗಳಲ್ಲಿ ಎನ್ನುವಂತೆ ಇವರನ್ನು ಕಾಡಿವೆ. ಆದರೆ ಇಷ್ಟೇ  ತೀವ್ರವಾಗಿ ಲೋಕವೂ ಇವರನ್ನು ಕಾಡಿದೆ. ಎಂತಲೇ ಇವರ ಕಾವ್ಯವನ್ನು ಸ್ತ್ರೀ ಪ್ರಣೀತ ಮತ್ತು ಲೋಕ ಕೇಂದ್ರಿತ ಎಂದು ಕರೆಯಬಹುದು. ಇವರ ಕಾವ್ಯಕ್ಕೆ ಈ ಕಾರಣಕ್ಕಾಗಿಯೇ ವಿಸ್ತಾರ ಭಿತ್ತಿಯೊಂದು ಒದಗಿದೆ.

೧೯೮೨ರಲ್ಲಿ ಪ್ರಕಟವಾದ ಮೊದಲ ಸಂಕಲನ 'ತ್ರಿಶಂಕು'ವಿನಿಂದ ೨೦೦೭ರ 'ಸಖಿ ಬಾ ಸಂಚಾರ'ಕೆ ತನಕ ಸಂಕಲನಗಳನ್ನು ವಿಜಯ ಸುಬ್ಬರಾಜ್ ಅವರ ಕಾವ್ಯದಲ್ಲಿ ಹಲವು ಮಜಲುಗಳಿವೆ.  ಮೊದಲ ಘಟ್ಟದ ಕಾವ್ಯವನ್ನು 'ನೋಟ'ವೆಂದು

ಎರಡನೆಯ ಘಟ್ಟದ ಕಾವ್ಯವನ್ನು 'ಒಡನಾಟ'ವೆಂದು ಮೂರನೆಯ ಘಟ್ಟವನ್ನು ಸಂಕ್ರಮಣ ಘಟ್ಟ ಎಂದು ಬಹು ಸ್ಥೂಲವಾಗಿ ಗುರುತಿಸಬಹುದು.

ಮೊದಲನೆಯ ಘಟ್ಟವನ್ನು 'ನೋಟ' ಎಂದು ಗುರುತಿಸುವಲ್ಲಿ ಹಲವು ಕಾರಣಗಳಿವೆ. ಬದುಕು, ಲೋಕ, ಸಂಬಂಧ ಮತ್ತು ಸನ್ನಿವೇಶಗಳನ್ನು ಗಾಢವಾಗಿ ಪರಿಭಾವಿಸುವ ಘಟ್ಟ ಇದು. ಈ ಘಟ್ಟದಲ್ಲಿ ಕವಿಯು ತನ್ನನ್ನು ಸಾಕ್ಷಿ ಪ್ರಜ್ಞೆಯಾಗಿ ನೋಡುತ್ತ ವಸ್ತುವಿಶೇಷಗಳೊಂದಿಗೆ ಅಂತರವೊಂದನ್ನು ಪ್ರಜ್ಞಾಪೂರ್ವಕವಾಗಿ ಕಾಪಾಡಿಕೊಳ್ಳಲು ಯತ್ನಿಸುತ್ತಿರುತ್ತದೆ. ಸ್ವ ಮತ್ತು ಅನ್ಯಗಳ ವರ್ಗೀಕರಣ ಇಲ್ಲಿ ಸ್ಪಷ್ಟವಾಗಿರುತ್ತದೆ. ತಾನು ರೂಪಿಸಿಕೊಂಡಿರುವ ಅಥವಾ ತನ್ನನ್ನು ಪ್ರಭಾವಿಸಿರುವ ತಾತ್ವಿಕತೆಯನ್ನು ನಿಕಶವಾಗಿಯೂ, ಮಾನದಂಡವಾಗಿಯೂ ಕವಿ ಇಲ್ಲಿ ಬಳಸಿದ್ದಾರೆ. ವ್ಯಕ್ತಿಯೋ ನಿರ್ದಿಷ್ಟ ಸನ್ನಿವೇಶವೋ ಇತಿಹಾಸದ ಆಗುಹೋಗುಗಳೋ ಬದುಕಿನ ಅಸಂಗತ ಸಂಗತಿಗಳೋ ಈ ಎಲ್ಲವನ್ನೂ ಕವಿ ಪರೀಕ್ಷಕ ಮತ್ತು ತೀರ್ಮಾನದ ನೆಲೆಯುಲ್ಲೇ ನೋಡಲು ಪ್ರಯತ್ನಿಸುತ್ತಾರೆ. ಮನುಷ್ಯನ ವಿಹ್ವಲತೆಗಿಂತ ಅಸಹಾಯಕತೆಗಿಂತ, ದುರ್ದಮ್ಯತೆಗಿಂತ ಇದು ಯಾಕೆ ಹೀಗೆ ಎನ್ನುವ ಪ್ರಶ್ನೆಯೇ ಈ ಘಟ್ಟದ ಕಾವ್ಯದ ಸ್ವರೂಪವನ್ನು ನಿರ್ಧರಿಸಿದೆ. ಭೂತದ ಹಳಹಳಿಕೆ ಮತ್ತು ಭವಿಷ್ಯದ ಕನವರಿಕೆಯ ನಡುವೆ ಹಾಯುವ ಮನಸ್ಥಿತಿ ಇಲ್ಲಿನದು. ಉದಾಹರಣೆಗೆಂದು ಸವಿತಾ ನನ್ನ ಕವಿತಾ ಎನ್ನುವ ಕವನವನ್ನು ನೋಡಬಹುದು. ಕಾವ್ಯದ ಪಾರಂಪರಿಕ ಸ್ವರೂಪದೊಂದಿಗೆ ಘರ್ಷಣೆ ನಡೆಸುತ್ತಲೇ ಕಾವ್ಯದ ಹೊಸ ಸ್ವರೂಪ ಮತ್ತು ವ್ಯಾಖ್ಯಾನವನ್ನು ಕನವರಿಸುವ ಈ ಕವನ ಈ ಎರಡರ ನಡುವೆ ತನ್ನ ಸಧ್ಯದ ಸ್ವರೂಪದ ಬಗ್ಗೆ ಅಸ್ಪಷ್ಟವಾಗಿದೆ. ಕಳೆದುಹೋದ ಕಾವ್ಯದ ಬಗೆಗಿರುವ ಖಾಚಿತ್ಯವಾಗಲೀ ಮುಂದೆ ಬರಬೇಕಾಗಿರುವ ಕಾವ್ಯದ ನಿರೀಕ್ಷೆಯ ನಡುವೆ ಅದು ಇಂದು ಈ ಘಳಿಗೆಯಲ್ಲಿ ಸಾಧಿತವಾಗಬೇಕಾಗಿರುವ ಪ್ರಕ್ರಿಯೆಯ ಬಗೆಗೆ ಸಾಧ್ಯವಾಗುತ್ತಿರುವುದು ನೋಟ ಮಾತ್ರ. ಬುದ್ಧ, ಅಂಬೇಡ್ಕರ್, ಇಂದಿರಾ ಗಾಂಧಿ ಹೀಗೆ ನಮ್ಮ ಸಮುದಾಯದ ಹಲವು ಘನ ವ್ಯಕ್ತಿತ್ವಗಳನ್ನು ಗೌರವ, ಆರಾಧನೆ ಎರಡೂ ಬೆರೆತ ನೋಟದಲ್ಲಿ ನೋಡುತ್ತ, ಬದಲಾದ ಸನ್ನಿವೇಶ ಮತ್ತು ಆಶಯಗಳ ಹಿನ್ನೆಲೆಯಲ್ಲಿ ಎದುರಾಗುತ್ತಿರುವ ಡಿವೋರ್ಸ್, ಆಧುನಿಕ ಮಹಿಳೆಯ ಇಬ್ಬಂದಿತನಗಳು, ಪ್ರಭುತ್ವದ ಅನಾಹುತಗಳು ಈ ಎಲ್ಲವನ್ನು ವಿಜಯ ಶೋಧದ ಒಳ ತೀವ್ರತೆಯಲ್ಲಿ ಹುಡುಕುವುದಿಲ್ಲ. ಬೌದ್ಧಿಕ ನೆಲೆಯಲ್ಲಿ ಅಚ್ಚೊತ್ತಿರುವ ದೃಷ್ಟಿಕೋನದ ಕನ್ನಡಿಯ ಮೂಲಕವೇ ಇವುಗಳನ್ನು ಗ್ರಹಿಸಲು ಯತ್ನಿಸುತ್ತಾರೆ. ಸಾಮಾಜಿಕ ಅಥವಾ ಸಾಂಸ್ಕೃತಿಕ ಸನ್ನಿವೇಶಗಳು ಎದುರಾಗುವ ದ್ವಂದ್ವಗಳ ಕಡೆಗೆ ಅಥವಾ ಸವಾಲುಗಳ ಬಹುಮುಖೀ ಆಯಾಮಗಳ ಕಡೆ ಕವಿಯ ಗಮನ ಇಲ್ಲಿ ಅಷ್ಟಾಗಿ ಹರಿಯುವುದಿಲ್ಲ.

ಎರಡನೆಯ ಘಟ್ಟದಲ್ಲಿ ಕವಿಯ ದೃಷ್ಟಿಕೋನ ಮತ್ತು ಗ್ರಹಿಕೆಯು ಸಂಪೂರ್ಣವಾಗಿ ಬದಲಾಗಿರುವಂತೆ ತೋರುತ್ತದೆ ೧೯೯೬ರಲ್ಲಿ ಪ್ರಕಟವಾದ 'ಹಾಡೇನ ಪಾಡೇನ' ಸಂಕಲನದ ಶೀರ್ಷಿಕೆಯೇ ಇದನ್ನು ಸೂಚಿಸುತ್ತದೆ. ವ್ಯಕ್ತಿ ಮತ್ತು ಬದುಕಿನ ಸಂಕೀರ್ಣತೆಗಳು ಕವಿಯ ನೋಟವನ್ನು ಇಲ್ಲಿ ಹೊರಳಿಸುತ್ತವೆ. ಫ್ಯಾನ್ಸಿ ಡ್ರೆಸ್ ಎನ್ನುವ ಕವನ ಮೇಲ್ನೋಟಕ್ಕೆ ಸರಳವಾಗಿ ಕಂಡರೂ ನಾಗರೀಕ ಮನುಷ್ಯ ಹಾಕುವ, ಹಾಕಲು ಬಯಸುವ , ಹಾಕುವ ಅನಿವಾರ್ಯತೆಯ ಸನ್ನಿವೇಶವನ್ನು ಈ ಕವನ ಧ್ವನಿಸುತ್ತದೆ. 'ದಿನನಿತ್ಯದ ನಾಟಕಕ್ಕೆ ಒಂದೆಲ್ಲಿ ಸಾಕು

**ಇಂದೊಂದು ನಾಳೆ ನಾಳಿದ್ದು ಒಂದೊಂದು**
**ವೇಶದಂಗಡಿಯನ್ನೇ ಕೊಳ್ಳುವ ಬಯಕೆ**
............
**ಯಾವ ಕ್ಷಣದಲ್ಲಿ ಯಾವುದಕ್ಕೆ ಬೇಡಿಕೆಯೋ**
................
**ಯಾರಿಗೆ ಯಾವುದು ಬೇಕಾಗುವುದೋ ಹೇಳಲಾಗುವುದಿಲ್ಲ.**

ಮನುಷ್ಯನನ್ನು ಸಂದರ್ಭಗಳ ಒತ್ತಡಗಳು ಮತ್ತು ಅನಿವಾರ್ಯತೆಯಲ್ಲಿ ನೋಡುವ ಈ ಕವನ ಮುಖ್ಯವಾಗಿ ಗುರುತಿಸುವುದು ಮನುಷ್ಯನ ಸಂಕಟಗಳನ್ನು, ಗೊಂದಲಗಳನ್ನು ಗುರುತಿಸುತ್ತಲೇ ಮುಖವಾಡಗಳಾಚೆಗೆ ಮನುಷ್ಯ ಚೇತನ ಬೆಳೆಯಬೇಕಾದ ಅಗತ್ಯವನ್ನೂ ಸೂಚಿಸುತ್ತದೆ. ಸರಿರಾತ್ರಿಯ ಸಂತೆ, ತೆಗೆದುಬಿಡು ಬಾಗಿಲನು, ಮೊದಲಾದ ಕವಿತೆಗಳೂ ಕೂಡ ಮನುಷ್ಯನ ಊರ್ಧ್ವಮುಖಿ ಚಲನೆಯನ್ನು ಹಂಬಲಿಸುವ ರಚನೆಗಳಾಗಿವೆ.

ಡಾ. ವಿಜಯ ಸುಬ್ಬರಾಜ್ ಅವರ ಕಾವ್ಯದಲ್ಲಿ ಚರ್ಚಿಸಬೇಕಾದ ಇನ್ನೆರಡು ಮುಖ್ಯ ಸಂಗತಿಗಳೆಂದರೆ ಗಂಡು ಹೆಣ್ಣಿನ ಸಂಬಂಧ ಮತ್ತು ಬದಲಾಗುತ್ತಿರುವ ಹೆಣ್ಣಿನ ಸ್ವಚಿತ್ರಣ. ಇವರ ಕಾವ್ಯದಲ್ಲಿ ಈ ಎರಡೂ ಸ್ಥಾಯಿ ಎನ್ನುವಂತೆ ಉಳಿದು ಬೆಳೆದು ಬಂದಿವೆ. ಗಂಡು ಹೆಣ್ಣಿನ ಸಂಬಂಧವನ್ನು ದಾಂಪತ್ಯ ಮತ್ತು ಸಖ್ಯ ಎರಡೂ ನೆಲೆಗಳಲ್ಲಿ ವಿಜಯ ಸುಬ್ಬರಾಜ್ ಮುಖಾಮುಖಿಯಾಗುತ್ತಾರೆ. ದಾಂಪತ್ಯವೆನ್ನುವುದು ಕೊನೆಗೂ ಗಂಡಿನ ಅಧಿಕಾರ ಕೇಂದ್ರದ ನಿರ್ವಚನವಲ್ಲವೇ ಎನ್ನುವ ಪ್ರಶ್ನೆಯನ್ನು ಇವರ ಅನೇಕ ಕವಿತೆಗಳು ಎತ್ತುತ್ತವೆ. ಸುಶಿಕ್ಷಿತ ಆಧುನಿಕ, ಬದಲಾಗಬೇಕಾದ ಸನ್ನಿವೇಶಗಳ ಸ್ಪಷ್ಟ ಅರಿವಿದ್ದೂ ಗಂಡು ಈ ಅಧಿಕಾರ ಕೇಂದ್ರವನ್ನು ಆಧರಿಸುವುದನ್ನು ವಿಜಯ ವಿಷಾದದಿಂದಲೆಂಬಂತೆ ಚಿತ್ರಿಸುತ್ತಾರೆ. ಹೆಣ್ಣು ತನ್ನ ಸ್ವತ್ತು ಎನ್ನುವ ಮನೋವಿನ್ಯಾಸ ಅನೇಕ ಬಾರಿ ಅಪ್ರಜ್ಞಾಪೂರ್ವಕವಾಗಿಯೋ ಎನ್ನುವಂತೆ ಕಾರ್ಯ ಪ್ರವೃತ್ತವಾಗುವುದನ್ನು ಹೇಗೆ ಎದುರಿಸುವುದು ಎನ್ನುವ ಸವಾಲು ಇವರ ಕಾವ್ಯದಲ್ಲಿ ಪುನರುಕ್ತವಾಗಿದೆ. ಈ ಅಧಿಕಾರ ಕೇಂದ್ರವನ್ನು ವಿಸರ್ಜಿಸುವಲ್ಲಿ ಅನೇಕ ಸಂದರ್ಭಗಳಲ್ಲಿ

# ನನ್ನ ಕಾವ್ಯದ ಹಾದಿ

'ಮಾತು ಮೌನಗಳ ನಡುವೆ' ಎಂಬ ನನ್ನ ಈ ಸಮಗ್ರಕಾವ್ಯ ಸಂಪುಟದ ಬಗ್ಗೆ ಒಂಧೆರಡು ಮಾತುಗಳನ್ನು ಹೇಳಿಕೊಳ್ಳುವುದು ಅನಿವಾರ್ಯವೇ ಆದರೂ ನನ್ನ ಕಾವ್ಯದ ಬಗ್ಗೆ ನಾನು ಏನು ತಾನೆ ಹೇಳಿಕೊಳ್ಳಲು ಸಾಧ್ಯ? ಎಂದು ಯೋಚಿಸಿದೆ. ನನ್ನ ಕಾವ್ಯ ಕುರಿತು ಸಂಕ್ಷೇಪವಾಗಿ ಹೇಳಬಹುದೆಂದರೆ ಇದೊಂದು ನನ್ನ ವೈಯಕ್ತಿಕ ನೆಲೆಯಿಂದ ಹೊರಟ 'ಭಾವಯಾನ' ವಾಗಿದೆ. ಸುಮಾರು ೭೦ರ ದಶಕದಿಂದ ಬರೆಯುತ್ತಿದ್ದರೂ ಸಂಕಲನ ರೂಪದಲ್ಲಿ ಹೊರಬಂದದ್ದು ೮೦ರ ದಶಕದಲ್ಲಿ. ನಾನು ಬರೆಯ ಹೊರಟ ಸಂದರ್ಭ ಅತ್ಯಂತ ಸಂಕೀರ್ಣವಾದದ್ದು. ನವೋದಯವನ್ನು ಧಿಕ್ಕರಿಸಿ ನವ್ಯಕಾವ್ಯಪಂಥದಲ್ಲಿ ವಿಜೃಂಭಿಸುತ್ತಿದ್ದ ಕಾವ್ಯಪರಿಸರ. ಇದರ ಜೊತೆಗೆ ದಲಿತವಾದ ಸ್ತ್ರೀವಾದಗಳ ಅಬ್ಬರ, ರಭಸಗಳೂ ಮೇಳವಿಸಿದ್ದವು. ಯಾವ ಹಾದಿ ಹಿಡಿದು ನನ್ನ ಕಾವ್ಯ ಸಾಗಬೇಕೆಂಬುದರ ಬಗ್ಗೆ ನನಗೆ ಸ್ಪಷ್ಟ ಕಲ್ಪನೆ ಇರಲಿಲ್ಲ. ಮಹಿಳಾ ಚಳುವಳಿ ದಲಿತ ಚಳುವಳಿಗಳ ಹಿಂದೆ ಸಾಮಾಜಿಕ ಆಶಯಗಳೂ ಇದ್ದವು. ನವ್ಯ, ತನ್ನೊಳಗೆ ಕೇಂದ್ರೀಕರಿಸಿಕೊಂಡ ವಿಕ್ಷುಬ್ಧ ಮನ:ಸ್ಥಿತಿಗಳ ಮತ್ತು ನಿರೂಪಣೆಯಲ್ಲಿ ಬಳಸಿಕೊಂಡ ಸಾಂಕೇತಿಕತೆ, ಪ್ರತಿಮಾ ವಿಧಾನಗಳು ನನ್ನ ಕಾವ್ಯಾಭಿವ್ಯಕ್ತಿಗೆ ಸವಾಲುಗಳಾಗಿದ್ದವು. ನವ್ಯದ ಕಾಲಘಟ್ಟದಲ್ಲಿ ಬರೆಯತೊಡಗಿದೆನಾದರೂ ನವೋದಯದ ಮನಃಸ್ಥಿತಿಯನ್ನು ರೂಢಿಸಿಕೊಂಡಿದ್ದವಳು. ಆದರೆ ನವೋದಯ ಮಾದರಿಯ ಕವಿತೆಗಳನ್ನು ಬರೆದರೆ ಖಂಡಿತವಾಗಿಯೂ ಗುರುತಿಸಿಕೊಳ್ಳಲು ಸಾಧ್ಯವಾಗುವುದಿಲ್ಲ ಎನಿಸಿತು. ಇಂತಹ ಸಂದರ್ಭದಲ್ಲಿ ಯಾವ ರೀತಿಯಲ್ಲಿ ನನ್ನ ಕಾವ್ಯವನ್ನು ರೂಪಿಸಿಕೊಳ್ಳಬೇಕೆಂಬ ಸಂಘರ್ಷದಲ್ಲಿ ನವೋದಯವೂ ಅಲ್ಲದ ನವ್ಯವೂ ಅಲ್ಲದ ಒಂದು ವಿಚಿತ್ರ ರೀತಿಯಲ್ಲಿ ನನ್ನ ಕಾವ್ಯ ಶೈಲಿಯನ್ನು ರೂಢಿಸಿಕೊಂಡೆ ದಲಿತ ಮಹಿಳೆ ಯಾವುದೂ ನನ್ನ ಕೇಂದ್ರ ಪ್ರಜ್ಞೆಯಾಗದೆ 'ನಾನು' ಮತ್ತು 'ಮನುಷ್ಯ' ಇವೇ ನನ್ನ ಕೇಂದ್ರ ಪ್ರಜ್ಞೆಯಲ್ಲಿ ಉಳಿದುಕೊಂಡವು. ಅದಕ್ಕಾಗಿಯೇ ನನ್ನ ಕಾವ್ಯ ನನ್ನನ್ನು ಕುರಿತು ಮಾತನಾಡುತ್ತದೆ ಇಲ್ಲವೆ ವಿಶ್ವ ಕೇಂದ್ರದಲ್ಲಿನ ಮನುಷ್ಯನನ್ನು ಕುರಿತು ಮಾತನಾಡುತ್ತದೆ. ನನ್ನ ವ್ಯಕ್ತಿಗತ ಜೀವನದಲ್ಲಿನ ಭಾವಾಘಾತಗಳು, ಹೋರಾಟಗಳು, ಸಂಕಟಗಳು, ತಲ್ಲಣಗಳು ಮಾತ್ರವಲ್ಲದೆ ಜಾತ್ಯಾತೀತ, ಲಿಂಗಾತೀತ

ನೆಲೆಯಲ್ಲಿ ಮನುಷ್ಯ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸರದಲ್ಲಿ, ಹಿಂಸೆ, ಕ್ರೌರ್ಯ, ಶೋಷಣೆ, ದಬ್ಬಾಳಿಕೆ, ದೌರ್ಜನ್ಯ, ಅನ್ಯಾಯ, ಅವಮಾನ–ಮುಂತಾದವುಗಳ ಕಪಿಮುಷ್ಠಿಯಲ್ಲಿ ಸಿಲುಕಿ ಅನುಭವಿಸುವ ಯಾತನೆ, ಇತ್ಯಾದಿಗಳಿಗೆ ತೀರಾತೀರಾ ಪ್ರಾಮಾಣಿಕವಾಗಿ, ವೈಯಕ್ತಿಕ ನೆಲೆಯಿಂದ ತೀವ್ರವಾಗಿ ಸ್ಪಂದಿಸಿದ್ದೇನೆ. ನೋವು, ಸಂಕಟ, ಶೋಷಣೆಗಳು ಯಾವುದೇ ಒಂದು ಜಾತಿವರ್ಗಕ್ಕೆ ಹೆಣ್ಣು–ಗಂಡೆಂಬ ಲಿಂಗ ಭೇದಕ್ಕೆ ಮಾತ್ರ ಸೀಮಿತವಾದುದಲ್ಲ. ದೈಹಿಕವಾಗಿ, ಆರ್ಥಿಕವಾಗಿ, ಸಾಮಾಜಿಕ ಶ್ರೇಣೀಕರಣದಿಂದಾಗಿ ದುರ್ಬಲ ಸಮುದಾಯಗಳು ಅನಾದಿಕಾಲದಿಂದಲೂ ತುಳಿತಕ್ಕೆ, ನಿರ್ಲಕ್ಷ್ಯಕ್ಕೆ, ಅವಹೇಳನಕ್ಕೆ ಒಳಗಾಗುತ್ತಲೇ ಬಂದಿರುವಾಗ ನಾನು ಯಾವುದೇ ಲಿಂಗ, ಜಾತಿಪರವಾದ ಸೈದ್ಧಾಂತಿಕತೆಗೆ ಬದ್ಧವಾಗಿ ಉಳಿಯಲು ಇಷ್ಟಪಡಲಿಲ್ಲ. ಹೆಣ್ಣು–ಗಂಡು ಮಕ್ಕಳು, ಮುದುಕರು ಯಾರ ನೋವೇ ಆದರೂ ನನ್ನ ನೋವು, ಸಂಕಟಗಳೊಂದಿಗೆ, ಸಮೀಕರಿಸಿಕೊಂಡಿದ್ದೇನೆ. ಅದಕ್ಕಾಗಿಯೇ ನನ್ನ ಕವಿತೆಗಳಲ್ಲಿ, 'ನಾನು' ನೆಲೆಯಿಂದಲೇ ಎಲ್ಲವನ್ನೂ ಹೇಳುತ್ತಾ ಬಂದಿದ್ದೇನೆ. ಅಂತಹ ಸಂದರ್ಭಗಳೂ ನನ್ನ ಬದುಕಿನ ಭಾಗವಾಗಿಯೇ ಬಂದಿವೆ. ಹಾಗಾಗಿ ಈ ನನ್ನ ಕವಿತೆಗಳು ವ್ಯಕ್ತೀಕರಣಗೊಂಡ ಭಾವಗೀತೆಗಳಾಗಿವೆ. ಶಂಕರಮೊಕಾಶಿ ಪುಣೇಕರ್ ಅವರು ತಮ್ಮ ಲೇಖನ 'ಸ್ವಾತಂತ್ರ್ಯ ಪೂರ್ವ ಹೊಸಗನ್ನಡ ಸಾಹಿತ್ಯ'ದಲ್ಲಿ ಕನ್ನಡದಲ್ಲಿ ನವೋದಯ ಮನೋಧರ್ಮದ ಬಗ್ಗೆ ಮಾತನಾಡುತ್ತಾ, "ಇಂಗ್ಲಿಷ್ ಭಾಷೆಯ ಸಂಪರ್ಕದಿಂದ ಹೊಸ ಅನುಭವ, ವಿಚಾರ ಸರಣಿ, ವಿಮರ್ಶಕ ಮನೋವೃತ್ತಿ, ಇತಿಹಾಸ ಪ್ರಜ್ಞೆ, ಇವೆಲ್ಲವೂ ಕನ್ನಡಕ್ಕೆ ಬಂದವು. ಆದರೆ ಇವೆಲ್ಲವುಗಳಿಗಿಂತ ಹೆಚ್ಚಿನ ವ್ಯಾಪಕ ಮಾನಸಿಕ ಕ್ರಾಂತಿಯೆಂದರೆ ಮಾನವ ಕೇಂದ್ರಿತ ವ್ಯಕ್ತೀಕರಣ' ಅಂತ ಹೇಳಬಹುದು ಎನ್ನುತ್ತಾರೆ. ಅಲ್ಲದೆ ವೈಯಕ್ತಿಕ ವೇದನೆ – ಸಂವೇದನೆಗಳು ತಮ್ಮ ಮಾನವೀಯ ಸ್ತರಗಳಲ್ಲೇ ಪರಿಪಾಕಗೊಳ್ಳುತ್ತವೆ ಎನ್ನುವ ಅಭಿಪ್ರಾಯವನ್ನೂ ವ್ಯಕ್ತಪಡಿಸುತ್ತಾರೆ. ಹೀಗೆ ಮಾನವ ಕೇಂದ್ರಿತ ಅನುಭವದ ಮೂಲಕವೇ humanist lyric ಹುಟ್ಟಿದ್ದು ಎನ್ನುವುದು ಅವರ ಬಲವಾದ ವೈಚಾರಿಕ ನಂಬಿಕೆ.

ಯಾವುದೇ ಪಂಥಕ್ಕೆ ಸೇರದ ಕಾವ್ಯವಾದರೂ ಭಾವಮೂಲದಿಂದ ಹೊರಟು, ವೈಚಾರಿಕ ಏರುವಿಕೆಯ ಹಂತದಲ್ಲಿ ದಲಿತ ಚಿಂತನೆ ಮಹಿಳಾ ಚಿಂತನೆಯ ಲಕ್ಷಣಗಳನ್ನು ಪಡೆದುಕೊಂಡು ಒಂದು ಚಳುವಳಿಯ ಸೈದ್ಧಾಂತಿಕತೆಯೊಂದಿಗೆ ಗುರುತಿಸಿಕೊಳ್ಳುತ್ತದೆ. ಆದರೆ ಈ ನನ್ನ ಕಾವ್ಯ ದಲಿತ ಸಂವೇದನೆ. ಸ್ತ್ರೀ ಸಂವೇದನೆಗಳನ್ನು ಮೈಗೂಡಿಸಿಕೊಂಡಿದ್ದರೂ ಅಂತಹವುಗಳು, ವೈವಿಧ್ಯಮಯವಾದ, ತೀವ್ರವಾದ ಭಾವಸ್ಥಿತಿಗಳ ನಡುವೆ ಎಲ್ಲಿಯೋ ಕೆಲವು ಮಾತ್ರ! ಸಾಮಾಜಿಕ, ರಾಜಕೀಯ ಸಾಹಿತ್ಯಿಕ

ವಲಯಗಳಲ್ಲಿ ಆಗುತ್ತಿರುವ ಸ್ಥಿತ್ಯಂತರಗಳು, ಅವುಗಳ ಪರಿಣಾಮಗಳು ಎಲ್ಲವನ್ನೂ ಗಮನಿಸುತ್ತಲೇ ಕಾಲಕಾಲಕ್ಕೆ ಸ್ಪಂದಿಸುತ್ತಲೇ ಬಂದಿದ್ದೇನೆ. ನನ್ನ ಕಾವ್ಯದಲ್ಲಿ ನನ್ನದೆಂಬ ಯಾವುದೇ ನಿರ್ದಿಷ್ಟ ಪ್ರೀತಿಯ ವಸ್ತುವೆಂಬುದಿಲ್ಲ. ರಾಷ್ಟ್ರನಾಯಕರ, ರಾಜಕೀಯ ವ್ಯಕ್ತಿಗಳ, ಸಮಾಜದ ವರಿಷ್ಠರ ದ್ವಂದ್ವ ಮುಖಗಳೂ ಮದರ್ ತೆರೆಸಾ ಅಂಬೇಡ್ಕರ್, ಗಾಂಧಿ, ರವಿಶಂಕರ್, ಪುತಿನ, ಕುವೆಂಪು, ನಿಟ್ಟೂರು, ಜಿ.ವಿ. ಅಲ್ಲದೆ ಪುರಾಣ ವ್ಯಕ್ತಿಗಳಾದ ರಾಮ, ಕೃಷ್ಣ ಮೊದಲಾದವರೂ ನನಗೆ ಮುಖ್ಯರಾಗುತ್ತಾರೆ. ಭ್ರಷ್ಟತೆ ಕಂಡು ಕಿನಿಸಿದರೆ, ತ್ಯಾಗ, ಔದಾರ್ಯ, ವಿದ್ವತ್ತುಗಳಿಗೆ ತಲೆದೂಗಿದ್ದೇನೆ. ಹೀಗಾಗಿ ನನ್ನ ಭಾವಸ್ಪಂದನಗಳಿಗೆ ಗುರಿಯಾದ, ಭಾವ-ಬುದ್ಧಿಗಳನ್ನು ಕೆಣಕಿದ, ಮನದ ಮರುಕ, ತಲ್ಲಣಗಳನ್ನು ಉದ್ರೇಕಿಸಿದ ಯಾವೊಂದನ್ನೂ ಬಿಡದೆ ಕವಿತೆಯಾಗಿಸುವತ್ತ ಹೆಜ್ಜೆಯಿರಿಸಿದ್ದೇನೆ. ನಿಜವಾಗಿ ಹೇಳುವುದಾದರೆ ಕವಿತೆಗಳನ್ನು ಕಟ್ಟಲಿಲ್ಲ. ವಸ್ತು, ಶಿಲ್ಪದ ಬಗ್ಗೆ, ಭಾಷೆಯ ಬಗ್ಗೆ, ಪ್ರತಿಮೆ ಪ್ರತೀಕಗಳ ಬಗ್ಗೆ ತಲೆಕೆಡಿಸಿಕೊಳ್ಳುವ ಗೋಜಿಗೆ ಹೋಗಲಿಲ್ಲ. ಬಸವಣ್ಣ ಹೇಳಿದಂತೆ 'ಆನೊಲಿದಂತೆ ಹಾಡಿದ್ದೇನೆ.' ಭೌತಿಕ ಜಗತ್ತಿನ, ಬದುಕಿನ ನಿಗೂಢತೆಗಳನ್ನು, ಮನುಷ್ಯನ ಸುಪ್ತ ಪ್ರಜ್ಞೆಯಾಳದ ತಲ್ಲಣ, ವಿಕ್ಷುಬ್ಧತೆಗಳನ್ನು, ಆಧ್ಯಾತ್ಮ, ಅನುಭಾವಗಳನ್ನು ಕಾವ್ಯವಾಗಿಸುವ ಹಂಬಲ ನನ್ನದಾಗಿರಲಿಲ್ಲ. ನನ್ನ ಸೀಮಿತ ಅನುಭವಕ್ಕೆ ದಕ್ಕಿದ ಜಗತ್ತಿನ ಲಯಗಳನ್ನು ಬದುಕಿನ ಸಂಘರ್ಷಗಳನ್ನು, ಮನುಷ್ಯ ಸ್ವಭಾವದ ವಿಚಿತ್ರ ರೀತಿಗಳನ್ನು 'ನನ್ನ' ಅಂದರೆ ನನ್ನ ವೈಯಕ್ತಿಕ ನೆಲೆಯಿಂದಲೇ ಕಾವ್ಯಾಂತರಿಸುವ ಪ್ರಯತ್ನ ಮಾಡಿದ್ದೇನೆ. ನನಗೆ ನನ್ನ ಅನುಭವಗಳು, ನನ್ನ ಪ್ರತಿಕ್ರಿಯೆಗಳು, ತೀವ್ರ ಸಂವೇದನೆಗಳು, ಓದುಗರ ಹೃದಯಕ್ಕೆ ತಲುಪಬೇಕು. ನನ್ನ ಕಾವ್ಯದ ಹಿಂದಿನ ನನ್ನ ಚಿಂತನೆ ಥಟ್ಟನೆ ಝಳಪಿಸಬೇಕು ಎನ್ನುವುದಷ್ಟೆ ನನ್ನ ಗುರಿಯಾಗಿರುವುದರಿಂದ ನೇರವಾಗಿ, ನನಗೆ ಹೇಳಬೇಕೆನಿಸಿದ್ದನ್ನು ಹೇಳಿದ್ದೇನೆ. ಭಾವ ವಿಚಾರಗಳ ಸಂಕೀರ್ಣತೆಯಾಗಲೀ, ಭಾಷೆಯ ಕ್ಲೀಷೆಯಾಗಲೀ ಸರಳ, ಸುಲಭ ಗ್ರಹಿಕೆಗೆ ದಕ್ಕದ ಪ್ರತಿಮೆ, ಪ್ರತೀಕ, ರೂಪಕಗಳ ಬಳಕೆಯಾಗಲಿ ನನ್ನ ಕಾವ್ಯದಲ್ಲಿ ಕಾಣುವುದಿಲ್ಲವಾದರೂ ಅಪ್ರಜ್ಞಾಪೂರ್ವಕವಾಗಿ ಕಾಣಿಸಿಕೊಂಡವುಗಳಲ್ಲಿ ಹೃದಯವಂತ ವಿಮರ್ಶಕರು, ಅರ್ಥ ಸೂಕ್ಷ್ಮತೆಗಳನ್ನು ಧ್ವನಿ ರಮ್ಯತೆಯನ್ನು ಗುರುತಿಸಿರುವುದು ನನ್ನಲ್ಲೇ ನನಗೆ ಭರವಸೆಮೂಡುವಂತೆ ಮಾಡಿದ್ದಾರೆ. ಒಂದು ರೀತಿಯಲ್ಲಿ 'ಅಕ್ಕ'ನ ಅಧ್ಯಾತ್ಮಿಕ, ಅನುಭಾವಿಕ ಪಯಣದ ಹಾದಿಯಲ್ಲಿ ಕಾಣಿಸಿದ ಆತ್ಮಕಥಾನಕದ' ಶೈಲಿಯೇ ನನ್ನದೆಂಬುದು ನನ್ನ ಭಾವನೆ. ವೈಯಕ್ತಿಕ ಸಂಕಟ, ತಳಮಳ, ಯಾತನೆಗಳ ಅನುರಣನವೇ ಅವಳ ಕಾವ್ಯವಾದಂತೆ ನನ್ನ ಕಾವ್ಯವೂ ಕೂಡ. ೧೯೮೭ರಿಂದ ಪ್ರಕಟವಾದ ನನ್ನ ೬ ಕವಿತಾ ಸಂಕಲನಗಳಿಗೆ, ಹಿರಿಯ ಕವಿಗಳು ನನ್ನ ಸಮಕಾಲೀನ ಕವಿಗಳೂ ವಿಮರ್ಶಕರೂ

ಆದ ಡಾ. ದೊಡ್ಡರಂಗೇಗೌಡ, ಡಾ.ಕೆ.ವಿ ನಾರಾಯಣ, ಎಮ್.ಎಚ್.ಕೃಷ್ಣಯ್ಯ, ಡಾ. ಕಮಲಾಹಂಪನಾ, ಎಸ್.ಜಿ. ಸಿದ್ಧರಾಮಯ್ಯ, ಎಲ್.ಎಸ್. ಶೇಷಗಿರಿರಾಯರು ಮೊದಲಾದವರೆಲ್ಲರೂ ಪ್ರೀತಿ, ಸ್ನೇಹಗಳಿಂದ ಮುನ್ನುಡಿಗಳನ್ನು ಬರೆದುಕೊಟ್ಟು, ಏನೇನೂ ಅಲ್ಲವೆಂದು ಭಾವಿಸಿ ಹೆದರಿದ್ದ ನನ್ನ ಕವಿತೆಗಳ ಬಗ್ಗೆ ಮೆಚ್ಚುಗೆಯ ಮಾತುಗಳನ್ನು ಹೇಳುತ್ತಲೇ ನನ್ನ ಕಾವ್ಯದ ಮಿತಿಗಳನ್ನೂ ಎತ್ತಿ ತೋರಿಸಿದ್ದಾರೆ. ಇವರೆಲ್ಲರೂ ನನ್ನ ಕಾವ್ಯವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸಿದ್ದಾರೆ. ಕಾವ್ಯ ಜಗತ್ತಿನಲ್ಲಿ ನಾನೂ ಕವಿಯಾಗಿ ನೆಲೆಗೊಳ್ಳಲು ಆತ್ಮಸ್ಥೈರ್ಯವನ್ನು ತುಂಬಿದ್ದಾರೆ. ಇವರೆಲ್ಲರೂ ನನ್ನ ಕವನ ಸಂಕಲನಗಳನ್ನು ಬಿಡಿ ಬಿಡಿಯಾಗಿ ಪರಿಭಾವಿಸಿದ್ದರೆ, ಈಗಿನ ಈ ಸಮಗ್ರ ಸಂಕಲನಕ್ಕೆ 'ಹೊಗರ ಚೆಲ್ಲುವ ಚಿಗುರು ಬೇರು' ಹೆಸರಿನಲ್ಲಿ ಮುನ್ನುಡಿ ಬರೆದುಕೊಟ್ಟಿರುವ ಪ್ರೊ. ಎಸ್.ಜಿ. ಸಿದ್ಧರಾಮಯ್ಯ, ನನ್ನ ಕಾವ್ಯದ ಸಮಗ್ರ ನೋಟವನ್ನು ಅದ್ಭುತವಾಗಿ ಕಟ್ಟಿಕೊಟ್ಟಿದ್ದಾರೆ. ನನ್ನ ಸಮಕಾಲೀನರೇ ಆದ ಸಿದ್ಧರಾಮಯ್ಯ ನನ್ನ ಕಾವ್ಯದ ತೊದಲ ಹೆಜ್ಜೆಗಳ ಕಾಲದಿಂದಲೂ ನನ್ನನ್ನು ಬಲ್ಲವರಾದ್ದರಿಂದ ನನ್ನ ಕಾವ್ಯದ ಬೆಳವಣಿಗೆಯ ವಿವಿಧ ಹಂತಗಳನ್ನು ಗುರುತಿಸುತ್ತಲೇ ಸೂಕ್ಷ್ಮವಾಗಿ ಕನ್ನಡ ಕಾವ್ಯ ಚಳುವಳಿಗಳ ಚಾರಿತ್ರಿಕ ಅಂಶಗಳ ಮೇಲೂ ಟಾರ್ಚ್‌ಪೈಟ್ ಹಾಯಿಸಿದ್ದಾರೆ. ಕಾವ್ಯ ಬರೆಯಲು ಹೊರಟ ಕಾಲದಲ್ಲಿನ ನನ್ನ ಸಂಕಟಗಳನ್ನು, ಸಂದಿಗ್ಧಗಳನ್ನು ಸಂಘರ್ಷಗಳನ್ನು, ನನ್ನ ಅಂತರಂಗದ ಮಾರ್ದನಿಗಳೆಂಬಂತೆ ಯಥಾವತ್ತಾಗಿ ಚಿತ್ರಿಸಿದ್ದಾರೆ. ಒಂದೊಂದು ಕವಿತೆಯನ್ನೂ ಅತ್ಯಂತ ಗಂಭೀರವಾಗಿ ಅಧ್ಯಯನಕ್ಕೆ ಒಳಗಾಗಿಸಿಕೊಂಡಿದ್ದಾರೆ ಎಂಬುದಕ್ಕೆ ಅವರ ವಿಸ್ತೃತವಾದ ವಿಶ್ಲೇಷಣೆ, ವ್ಯಾಖ್ಯಾನಗಳೇ ಸಾಕ್ಷಿಯಾಗಿವೆ. ನನ್ನ ಸೀಮಿತ ಅನುಭವಗಳಲ್ಲಿಯೂ ಸ್ವಕೀಯ ವಿಷಯಗಳಲ್ಲಿಯೂ, ವ್ಯಕ್ತಿಗತ ನೋವಿನ ಅಭಿವ್ಯಕ್ತಿಯಲ್ಲಿಯೂ, ಸಮಷ್ಠಿ ಆಯಾಮವನ್ನು ಗುರುತಿಸುವ ಇವರ ಹಿರಿತನ, ನಿಷ್ಪಕ್ಷಪಾತ ನಿಲುವು. ಸೂಕ್ಷ್ಮ ಗ್ರಹಿಕೆಯ ಅಂತರಾಳ. ನಿಜವಾಗಿಯೂ ನನ್ನನ್ನು ತೂಗಿವೆ. ಒಬ್ಬರಾದರೂ ನನ್ನ ಕಾವ್ಯದ ಗಂಭೀರ ಚಿಂತನೆ ನಡೆಸಲಿಲ್ಲವೆಂಬ ನನ್ನ ನಿರಂತರ ನೋವಿಗೆ ನಿಲುಗಡೆ ತಂದಿದ್ದಾರೆ. ನಿಜಕ್ಕೂ ನಾನು ಅವರಿಗೆ ಕೃತಜ್ಞಳಾಗಿದ್ದೇನೆ.

ಹಾಗೆಯೇ, ನನ್ನ ಕಾವ್ಯವನ್ನು ಸ್ತ್ರೀವಾದಿ ನೆಲೆಯಿಂದ ಗಮನಿಸಿ ಒಂದೆರಡು ಮಾತುಗಳನ್ನು ಬರೆದುಕೊಡಬೇಕೆಂದು ಡಾ. ಆಶಾದೇವಿ ಅವರನ್ನು ಕೇಳಿಕೊಂಡಾಗ, ನನ್ನ ಕೇಳಿಕೆಗೆ ಸ್ಪಂದಿಸಿ, ಚಿಕ್ಕದಾದರೂ ಚೊಕ್ಕವಾದ ಮುನ್ನುಡಿ ಬರೆದುಕೊಟ್ಟಿದ್ದಾರೆ. ಸ್ತ್ರೀ ಪ್ರಣೀತ ಕಾವ್ಯವೆಂದೂ ಆದರೆ ಸ್ತ್ರೀವಾದಿ ಚಿಂತನೆಗೂ ಮೀರಿದ ಎಲ್ಲೆಗಳತ್ತ ವಿಸ್ತರಿಸುವುದನ್ನೂ ಗುರುತಿಸಿ, ನನ್ನ ಕಾವ್ಯದ 'ಮಿತಿ' ಮೀರುವಿಕೆಯತ್ತ ಮೆಚ್ಚುಗೆಯ

ನಿರ್ದೇಶದತ್ತ ಗಮನ ಸೆಳೆದ ಡಾ. ಆಶಾದೇವಿ ಅವರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತಿದ್ದೇನೆ.

ನನ್ನೆಲ್ಲ ಬರವಣಿಗೆ, ಪ್ರಕಟಣೆಗೊಂಡು ಪ್ರಕಾಶಗೊಳ್ಳಲು ಕಾರಣರಾದ, ಪ್ರಕಾಶಕರಾದ ಎಂ.ಆರ್.ಗಿರಿರಾಜು ಅವರಿಗೆ ಸದಾ ನಾನು ಚಿರಋಣಿ. ಅಚ್ಚುಕಟ್ಟಾಗಿ ಸುಂದರವಾಗಿ ನನ್ನ ಪುಸ್ತಕಗಳನ್ನು ಹೊರತಂದು ನನ್ನ ಪುಸ್ತಕಗಳ ಮೌಲಿಕತೆಯನ್ನು ಹೆಚ್ಚಿಸುತ್ತಿರುವುದು ನನಗೆ ಹೆಚ್ಚಿನ ಸಂತೋಷವನ್ನು ನೀಡಿದೆ. ಅವರ ಸ್ನೇಹ, ಸಹಕಾರಗಳು ಹೀಗೆಯೇ ಮುಂದುವರೆಯಲೆಂದು ಆಶಿಸುತ್ತೇನೆ.

ಸ್ವದಾ ಹಸನ್ಮುಖಿಯಾಗಿ ಅವಿರತ ಶ್ರಮದೊಂದಿಗೆ, ಒಂದಿಷ್ಟೂ ತಪ್ಪುಗಳಿಲ್ಲದೆ ಅಚ್ಚುಕಟ್ಟಾಗಿ ಡಿ.ಟಿ.ಪಿ ಮಾಡಿಕೊಡುತ್ತಿರುವ ಕಾಲ ಬಳಗಕ್ಕೆ ನನ್ನ ಕೃತಜ್ಞತೆಗಳು.

**ಡಾ. ವಿಜಯಾ ಸುಬ್ಬರಾಜ್**

# ಪರಿವಿಡಿ

## ಏನು ಹೇಳಲಿ ಗೆಳೆಯಾ? (೧೯೮೮)



## ಹಾಡೇನ<sub></sub>ಽ ಪಾಡೇನಽ (೧೯೯೬)

## ಈ ತೆರದ ನಿರೀಕ್ಷೆಯಲ್ಲಿ (೧೯೯೮)

## ವಸುಂಧರೆಯ ಪ್ರಾಯ (೨೦೦೩)

## ಸಖ ಬಾ ಸಂಚಾರಕೆ (೨೦೦೭)

## ನೆನಪು ನೆರಳಿನ ಹಾದಿಗುಂಟ (೨೦೧೨)

**(ಅಪ್ರಕಟಿತ ಕವಿತೆಗಳು)**

## ಪರ್ಶಿಯನ್ ಕವಿತೆಗಳು

## ಅನುಬಂಧಗಳು

# ತ್ರಿಶಂಕು

ಹಾಯಾಗಿ ಅರಮನೆಯಲಿ
ಇದ್ದುಕೊಂಡು
ಅಪ್ಸರೆಯ ಸಂಗಕ್ಕೆ ಸಾಥಾದ
ತೊಗಲು, ಸಾಬೂನು ನುಣುಪಿನಲಿ
ಸಲೀಸಾದ ಸಂತೋಷ ಗೆದ್ದುಕೊಂಡು
ಗದ್ದುಗೆಯ, ಬಿಳಿ ಛತ್ರಿ ನೆರಳಲ್ಲಿ
ಬಿದ್ದುಕೊಂಡು,
ಇದ್ದು ಬಿಡಬಾರದಿತ್ತೇ?

ಅನಿಷ್ಟ ಕೋಪಿಷ್ಟ ಕೌಶಿಕನ
ಶಕ್ತಿ ಬೆಂಬಲಗಾಳಿ
ಸ್ವರ್ಗ ಕನಸಿನ ಬೆಂಕಿ ಉರುಬಿ
ಅಲ್ಲಿಯೂ ಇಲ್ಲದೆ
ಇಲ್ಲಿಯೂ ಇಲ್ಲದೆ
ವಾತರೂಫಿಗೆ ತಲೆ ಕೆಳಗಾಗಿ
ಜೋತು ಬಿದ್ದೆ

ನಿನ್ನ ಪ್ರಕೃತಿಗೆ ಹಿಡಿಸಿದ್ದ
ಆರೋಗ್ಯಕರ ಹವಾಮಾನ ಒದ್ದು
ಕಂಪುನಾರುವ ಸ್ವರ್ಗಕ್ಕೆ
ಲಗ್ಗೆ ಬಿದ್ದೆ!
ಈ ನೆಲದ ಬೀಜ ನೀನು
ಇಲ್ಲಿ ಬೆಳೆಯದೆ ಸೆಡೆತುಕೊಂಡು

ಅಲ್ಲಿ ಸಿಡಿದು ಬೆಳೆಯುವೆನೆಂಬ
ನಂದನದ ನಂದನೆಯರ ಸಖ್ಯ
ಗಿಟ್ಟಿಸಿಕೊಂಡು,
ಸಾಲು ಪಂಕ್ತಿಯೊಳಗೆ ಸಮಾನ
ಕೂರುವೆನೆಂಬ ಭ್ರಾಂತಿ ಬಲೂನು
ಸ್ಫೋಟಿಸದೆ ನಿಂತದ್ದು
ನಿಮ್ಮಪ್ಪನ ಪುಣ್ಯ ಪ್ರಭಾವ
'ಹಿಂದೆ ಬಂದರೆ ಒದೆಯಬೇಡಿ
ಮುಂದೆ ಬಂದರೆ ಹಾಯಬೇಡಿ' – ಎಂದು
ಪ್ರಾರ್ಥಿಸಿಕೊಂಡು
ಹಿತ್ತಿಲ ದ್ವಾರ ಪ್ರವೇಶಿಸಿದರೂ
ನಿನಗೆ ಸಿಟಿಜನ್ ಷಿಪ್
ದೊರಕುವುದು ಖಾಯಂ ಅಲ್ಲ
ತ್ರಿವಿಕ್ರಮನಲ್ಲದ ನೀನು
ನೆಲದಲ್ಲಿದ್ದೂ ಸ್ವರ್ಗದಲ್ಲಿ
ಹೆಜ್ಜೆಯೂರಲಾರೆ

ನಿನ್ನವರು
ಗದ್ದುಗೆ
ನೆಲ
ನೆನಪು ಸೊನ್ನೆಯಾಗುತ್ತದೆ
ನೀನವರ ಮೆದುಳ ಗುಡಿಯೊಳಗೆ
ಭಗ್ನ ಮೂರ್ತಿಯಾಗುತ್ತೀಯೆ
ಅಂದದರಮನೆ ಮೇಲೆ
ಬೆದರು ಬೊಂಬೆಯಾಗುತ್ತೀಯೆ
ಸುಂದರ ದೇಹದಲ್ಲಿನ
ತೊನ್ನಾಗುತ್ತೀಯೆ
ಅಪಶಕುನ ನುಡಿವ
ಹಕ್ಕಿಯಾಗುತ್ತೀಯೆ
ನಿನ್ನವರ ಸುಪರಿಚಿತ
ಅಧ್ವಾನ್ನ ಸ್ಥಿತಿಯಲ್ಲಿ

ಅಡಗಿರುವ ಅವರ ನಿಧಾನ ಗುಟ್ಟುಗಳ
ಮೊಟ್ಟೆಗಳು ಒಡೆದಿಲ್ಲ
ಇಟಲಿ, ರೋಂ, ಪರ್ಸಿಪೋಲಿಸ್‌ಗಳ
ಭೂಗತ ಇತಿಹಾಸ ಗುರುತಿಲ್ಲ
ನೀ ಚಾಚಿದ ಕೈಗೆ ಸಿಕ್ಕುವುದು
ಉಚ್ಚೈಶ್ರವಸ್ಸಿನ
ಉದುರು ಕೂದಲು ಮಾತ್ರ!

ಮಗ್ಗುಲು ತಿರುಗಿದರೆ
ಮೂರ್ಛೆ ಬರಿಸುವ
ಜೋಲಿ ಹೊಡೆಸುವ
ರಂಭೆ, ರತಿಯರ
ಕೆಕ್ಕರಿಸುವ
ರೂಪಸಿ ಮಡದಿ
ತಣಿಸುವೈದು ಮಕ್ಕಳ ಹಿಸುಕಿ
ಅಲ್ಲಿನ ರಸದೊಳಗೆ
ಊರು ಹಾಕಿ
ಹುಟ್ಟಿಸುತ್ತೇನೆ
ಬೆಳೆಸುತ್ತೇನೆ – ಎಂಬ
ಭ್ರಮೆಯ ಕೊಂದರೆ
ಭೂಮಿ ಬಾಯಿ
ತೆರೆಯುತ್ತದೆ
ಸಮಾಗಮ ಸಂತೃಪ್ತಿಯಲ್ಲಿ
ಕಣ್ಣು ಮಿರುಗುತ್ತದೆ
ಗಂಧಗಾಳಿಯ ಕೊರಳು
ಇನಿದಾಗಿ
ಅರಳುತ್ತದೆ

# ಅಪ್ರಬುದ್ಧ, ಪ್ರಬುದ್ಧ, ಬುದ್ಧ

## –ಅಪ್ರಬುದ್ಧ–

ಕುರುಡಾಗಿಸಿದರೂ ಸರಿ
ಝುಗ ಝುಗಿಪ ಬಣ್ಣ ಬೆಳಕು
ತುದಿಗಳಲಿ ಪೂರ್ಣ ವಿರಾಮ ಚಿಹ್ನೆ
ನೇರ ಮೀಸೆಯ ಮೇಲೆ
ಹಂಗಿಲ್ಲ. ನಮಗೆನುವ ಆತ್ಮವಿಶ್ವಾಸ
ಹಾದಿ ಬೀದಿಯಲಿ ಕಂಡದ್ದಕ್ಕೆಲ್ಲಾ ಹಾದು
ಕೈ ಕಬಳಿಸುವ ಹನುಮದಾಶೆ
ಜಾರು ನುಣುಪುಗಳೆಲ್ಲ ನಮ್ಮ ಸೆರೆಯಲಿ ಭದ್ರ
ನೀರಿನಲಿ ಅಕ್ಷರಾಭ್ಯಾಸ
ಮಾದಕ ಬಣ್ಣದೂಗಳ ಮೂಲ
ಬೇರು ನಿರ್ಲಕ್ಷ್ಯ
ಬಿದ್ದ ಹನಿ ಮೆದು ಮಾಡದ
ಕಲ್ಲು ನೆಲ
ಎಲ್ಲವೂ ಸರಳ, ಸುಲಭ
ಹೆಣ್ಣಿನೊಡನಾಟ
ರಸ್ತೆಯಾಚಿನಪಘಾತ
ಸಾವು ಸಮಸ್ಯೆಗಳೆಲ್ಲಾ
ಸಿನಿಮಾ ದೃಶ್ಯಗಳು
ಪರದೆ ಮೇಲಿನ ಬದುಕು
ಪ್ರಯೋಗ ಮೋಜು
ಜೇಬು ಝಣ ಝಣ ಭಾರ
ಅಪ್ಪನ ಹನಿ ಬೆವರು

ಒರೆಸಿಕೊಂಡರೆ...
ಅಮ್ಮನೊಳಗಿನ ಕೊರಗು
ಅವಳ ಕರ್ಮ
ಅರ್ಥವಾಗದ ಮರ್ಮ
'ಶುದ್ಧೋದನನರಮನೆಯ
ಅಂತಃಪುರದೊಳಗೆ
ಬುದ್ಧನಿಗೆ ಸೆರೆ'
ನಗ್ನದೃಶ್ಯ ಮತ್ತು ಹೇಯ
ಹೆಣ್ಣು ಹೊನ್ನುಗಳು
ಅಟ್ಟಾಸಿನಳತೆ...!
ಕಣ್ಣು ಆಡಿಸಿದಲ್ಲಿ
ಅಸಂಖ್ಯ ರತಿ ಸಂದೋಹ!

## –ಪ್ರಬುದ್ಧ–

ಸ್ವರ್ಗ ಸುಖ ಕಡಲಿನಲಿ ತೇಲುತ್ತಿದ್ದರೂ
ಮುಳ್ಳು ನೋವು
ಮುಳುಗಿದರೂ ಭಾರದಲಿ
ಹಗುರ ಚೆಂಡಿನ ತೇಲು
ನುಡಿಯುತ್ತಿದೆ ಹಕ್ಕಿಯೊಂದಾಳದಲಿ
ಅಸ್ಪಷ್ಟ ದನಿಯಲಿ–
'ಇದು ಮಾಂತ್ರಿಕ ದ್ವೀಪ'
ನಿನ್ನ ನೆಲೆ ಇದಲ್ಲ
ಇನ್ನೂ ಉಳಿದಲ್ಲಿ ಈಡಿಪಸ್ ಕುರುಡು
ಹೆಜ್ಜೆ ಹೆಜ್ಜೆಗೂ ಸರಪಳಿಯ
ಕೊಂಡಿಗಳು!
ಅನಿಸುತ್ತಿದೆ!, – ಸ್ವತಂತ್ರನಾದರೂ
ಅಸ್ವತಂತ್ರ ! ಬಂದಿ !
ಅರಮನೆಯ ತುಂಬೆಲ್ಲ,
ಗುಸುಗುಸು.

ಅಪ್ಪ ಅಮ್ಮನ
ಅಂತರಂಗದ
ರಹಸ್ಯ ಮಂದಿರದಲ್ಲಿ
ವಿದ್ರೋಹ ಸಮಾವೇಶ
ಯಶೋಧರೆ ಬಳ್ಳಿಯಲಿ
ಕಾಯಿ ಮೊಗ್ಗು
ಪಾಪ ಪ್ರಜ್ಞೆಯ ಹುಳು ಕೊರೆತ ಕೊಬ್ಬು
ಹೂಸಂಗ ಅಸಹ್ಯ ದುಂಬಿ ಮನಕೆ
ಆದರೂ ವಂಶ ಅರಳಿ
ಹರಡ ಬೇಕಲ್ಲವೇ?
ಸಂಕೋಲೆ – ಸಂಕೋಲೆ –
ಅನುಭವ
ಮೋಹಕ ಮೇಲು ಪದರದ ಕೆಳಗೆ
ಯಾವುದೋ ಅಮೂಲ್ಯ
ನಿಧಾನ ಪ್ರಜ್ಞೆ
ತಳಪಾಯವಿಲ್ಲದಾಕರ್ಷಕ
–ಅರಮನೆ–ಮಂದಿಯೊಂದಿಗೆ
ಕುಸಿಯುವುದು ಖಂಡಿತ.
"ತಪ್ಪಿಸಿಕೊಳ್ಳಲೇ ಬೇಕು!"
–ಚೀರು ಧ್ವನಿ ಒಳಗೆ
ಎತ್ತರದ ಗೋಡೆಗಳ ಹಾರಲು
ಹಕ್ಕಿ ರೆಕ್ಕೆಗಳು ಬಲಿತಿಲ್ಲ
ಕುಪ್ಪಳಿಸಿ
ಕಸರತ್ತು ಮಾಡಿ,
ಹಾರಿ ಹೋಗುವೆನಾಚೆ ಆಕಾಶದೊಳಗೆ
–ಭರವಸೆಯ ಸಾಂತ್ವನ
ಸ್ವಲ್ಪ ನೆಮ್ಮದಿ;
ಕಾಲಬರಬೇಕಣ್ಣ
ಕಾಲಬರಬೇಕು.

## –ಬುದ್ಧ–

ರೆಕ್ಕೆ ಬಲಿತಿದೆ
ಮೋಹಕ ಬಣ್ಣಗಳ,
ಮುಖವಾಡಗಳ,
ವೇಷ ಭೂಷಣಗಳೊಳಗಿನ
ಅಸಹ್ಯ ನಗ್ನತೆ ದರ್ಶನ.
ಸಮತಲದ ಆಳದಲಿ
ಕೊರಕಲು, ಪ್ರಪಾತಗಳರಿವು
ಅಂತರಾಳದ ಪ್ರಯೋಗ ಶಾಲೆಯಲಿ
ಸತ್ಯಾನ್ವೇಷಣ
ಏಳುಬಣ್ಣಗಳೊಳಗಿನಾ ಬಿಳಿ ಬೆಳಕು ವೀಕ್ಷಣ
ನೋವು ನರಳು ಸಾವುಗಳಿಗೆ
ಚಿಕಿತ್ಸೆ ಸಂಶೋಧನೆ
ಸಾವಿರಾನೆಗಳ ಬಲಕೂ ಚಲಿಸದ
ಹಿಮಗಿರಿ ಚಿತ್ತ
ಸುತ್ತಿ ಬಳಸಿರುವ
ಸಾವಿರ ಪದರಗಳ
ಕಳಚಿ ಬೋಧಿ ವೃಕ್ಷದ ಕೆಳಗೆ
ಬುದ್ಧ ಆಸೀನ
ಕೊರೆವ ಹುಳು ಸತ್ತು
ಶಾಂತಿ ದೂತನ ಜನನ
ಇರಿವ ದಾಹಕೆ ಇವನ
ಸತ್ಯದರಿವಿನ ಪಾನ
ಇನ್ನಿವನು
ಅಪ್ರಬುದ್ಧ ಹಾರು ಚಿಟ್ಟೆಯಲ್ಲ
ಪ್ರಬುದ್ಧ ಚಡಪಡಿಕೆ ಹೊಟ್ಟೆಯಲ್ಲಿ
ಅ–
ಪ್ರ–
–ಗಳ ಕಳೆದು
ಭೂಮಾಗಿ ನಿಂತಿರುವ
ಬುದ್ಧ!
ಬುದ್ಧ!!

# ಬೇರುಗಳು

ಬೀಜ ಬಿತ್ತಿದ್ದೇ
ನೆನಪಿಲ್ಲ!
ಇಷ್ಟು ಬೃಹತ್ತಾಗಿ
ಬೆಳೆದು
ಆಕಾಶಕ್ಕೆಲ್ಲಾ ಹಬ್ಬಿ
ನಿಂತಿರುವ
ಇದರ ತಲೆ ಕಡಿದು
ಬುಡಕಿತ್ತು
ಉರುಳಿಸಿ
ಭವ್ಯ ಭವನ
ಕಟ್ಟಬೇಕೆಂದಿದ್ದೇನೆ
ದಿನ ದಿನಕ್ಕೂ
ಇದರ ತಲೆ ಸವರಿದಷ್ಟೇ
ವೇಗವಾಗಿ
ಬೆಳೆದು
ಅಟ್ಟಹಾಸದಿ ನನ್ನ
ಅಣಕಿಸುವುದ ಕಂಡು
ಅಪಮಾನದಿಂದ
ಕೆಂಪೇರಿ
ಇದರ ಬುಡ ಬೇರುಗಳ
ಹುಡುಕಿ–
ಕತ್ತರಿಸಿ
ಕಿಚ್ಚಿಟ್ಟು
ಹೆಸರಳಿಸಬೇಕೆಂಬ
ನಿರ್ಧಾರದಲ್ಲಿ

ದಣಿದು...
ತೆವಳುವಂತಾಗಿದೆ
ಅಪ್ಪ, ಅಣ್ಣ, ತಮ್ಮ–
ಆದಿಯಾಗಿ,
ಅಗೆದಗೆದು
ಬೇರುಗಳ ತುದಿ
ಹುಡುಕಿ,
ಪತ್ತೆ ಹಚ್ಚುವ
ಪ್ರಯತ್ನದಲ್ಲಿ
ಸೋತು, ಕುಸಿದು–
ಮಕ್ಕಳು
ಮೊಮ್ಮಕ್ಕಳಿಗೆ
ಜಾಗ ಖಾಲಿ–
ಬಿಟ್ಟಿದ್ದಾರೆ !
ಬೇರುಗಳು ಮಾತ್ರ
ಕಾಣದಂತೆ
ದಿಕ್ಕು ಪಾಲಾಗಿ
ಸುಕ್ಕು ಸುಕ್ಕಾಗಿ
ಎಲ್ಲೆಲ್ಲಿಗೋ ಹಬ್ಬಿ
ನೆಲಗರ್ಭದಾಳದ
ಮಾನವನನೂಹ್ಯ
ಸಾಧ್ಯತೆಯಲಿ
ಮರೆಯಾಗಿವೆ
ಸೂಜಿ ಮೊನೆ ಬೆಳಕು
ಗಾಳಿಗದಷ್ಟೇ ಸಾಕು
ಭೂವ್ಯೋಮ ವ್ಯಾಪಕವಾಗಿ
ಬೆಳೆದು ನಿಂತು–
"ಮೇಲೆ ಕಾಣಿಸುವ
ಈ ದೈತ್ಯ ದೇಹದ
ಮೂಲ,
ಹುಡುಕ ಬಲ್ಲೆಯಾ"–

ಎನ್ನುವುದೊಂದು
ಸವಾಲು!
ಇದರೆತ್ತರ ಗಾತ್ರಗಳನ್ನು
ನೋಡುತ್ತಿದ್ದಂತೆ
ನನ್ನ ಇತಿ, ಮಿತಿ
ಸಾಮರ್ಥ್ಯಗಳು
ಕಣ್ಣು ಬಿಟ್ಟಂತಾಗಿ
ನನ್ನ ಮೇಲೆಯೇ
ಅದರ ತಲೆ!
ಕಾಲಡಿಯಲ್ಲಿ ಮರೆಯಾದ
ಬೇರುಗಳು!!
–ನೆನಪಿನ ಭೂತದ
–ಭೀತಿ!
ಅಲ್ಪತೆಯ ಅರಿವು!
ಹಾಳು ಬೇರುಗಳು
ಇಲ್ಲದ ಜಾಗವೇ ಇಲ್ಲ–
ನಾ ಕಟ್ಟುವ
ಭವನ
ಬಿರುಕು ಬಿಟ್ಟೀತೆಂಬ
ಹೆದರಿಕೆ
ಸೋಲೊಪ್ಪಿಕೊಂಡು
ಸುಮ್ಮಗಾದೆ–
ಯಾವ ವೃಕ್ಷದ ಬೇರು
ಯಾವುದೋ ?
ಸಂದೇಹ!
ನೆಲದೊಳಗೆ ಬೆಸುಗೆ, –
ನಿಸ್ಸಂಶಯ!

# ಬಯಕೆ

ಹೆಪ್ಪುಗಟ್ಟಿದ ಕತ್ತಲ
   ರಾತ್ರಿಗಳಲ್ಲಿ
ಕನಸು ಕಾಣುವುದೆಷ್ಟೋ ಹಿತ!
   ಕಿವಿ ತಮಟೆ
ಗಪ್ಪಳಿಸಿ
   ಬಿರಿವ,
ಸದ್ದು ಗದ್ದಲವೆಲ್ಲಾ
   ಎಲ್ಲೆಲ್ಲೋ
ತಲೆ ಮರೆಸಿ
   ಅವಿತು
ಕೊಂಡು
   ಪ್ರಪಂಚ ಸ್ಮಶಾನ
ಮೌನದಲಿ
   ನಿಶ್ಚೇಷ್ಟವಾಗಿ
ಸುಂದು ಹಿಡಿದು
   ಮಾದಕ ನಿದ್ದೆಯಲಿ
ಮುಕ್ತ ಚೇತಸದಂತೆ
   ನಿರಾಸಕ್ತ
ಮಲಗಿರಲು
   ಮಧುರ ಕನಸು–
ಗಳಿಗೆ
   ಜೋತು ಬಿದ್ದು,
ಅವ್ಯಕ್ತ, ಅವಾಸ್ತವ
   ಅಸ್ಪೃಶ್ಯತೆ
ಸ್ವರ್ಗಸುಖವನ್ನು

ಚಪ್ಪರಿಸಿ
ಚೀಪುವುದರಲ್ಲೇ
ಬದುಕು ಭಾರ
ನಾನು ನೆಲಜೀವಿ–
ನನ್ನಾಸೆ ಕನಸುಗಳ
ಬಳ್ಳಿ–
ಹೂ ಬಿಟ್ಟದ್ದು
ದೂರದ
ಆಕಾಶದಲ್ಲಿ
ಗಲಭೆ, ಘರ್ಷಣೆ
ವಿಪ್ಲವ, ಹೋರಾಟ–
ವಿಲ್ಲದ
ವಿಕಲ, ವಿಕೃತ
ನರಳು, ಸರಳುಗಳಿರಿತದ
ವಾಸ್ತವತೆ
ಯಿಂದ
ದೂರ ದೂರ–
ಈ ಕತ್ತಲ ಗಂಭೀರತೆಯಲ್ಲಿ
ಅನುದ್ಘೋಷಿತ
ಸಮಾಜವಾದ ಸಾರ್ಥಕ!
ಬೆಳಕು ಬಿದ್ದು,
ಎದ್ದು ಕಾಣುವ
ಈ ಅಸಹ್ಯ ವಾಸ್ತವತೆ
ಬಣ್ಣ, ರೂಪ, ಆಕಾರಗಳ
ವಿಷಮತೆ
–ಎಲ್ಲವೂ ಮುಸುಗು ಕತ್ತಲಲಿ
ಕೈ ಕೈ ಮಿಲಾಯಿಸಿ
ಒಂದಾಗಿ ಕರಗುವುದು
ಇಂದು, ನೆನ್ನೆ, ನಾಳೆಗಳ
ಪ್ರಜ್ಞೆ ಬತ್ತಿ
ಹಾಯೆನಿಸಿ

ಹಗುರಾಗಿಸುವ
ಈ ರಾತ್ರಿಗಳು
ಬೆಳಗುಗಳೊಡನೆ
ಸಕುಂಚನ, ವಿಕಸನಕೆ
ಸಮರ್ಥ
ಹೃದಯ ಮೆದುಳುಗಳ
ಚಟುವಟಿಕೆ
ಇರುವಷ್ಟು ಕಾಲ
ಅಜ್ಞ ಮೂಲದಿ ನೋವು
ನಿದ್ದೆ ಸಮಾಧಿಗಿಳಿದಾಗ
ಪರಿವೆಯಿಲ್ಲದ
ನಿಯಂತ್ರಣ!!
ಕಣ್ಣು ಬಿಟ್ಟಿದ್ದಾಗ
ಯಾವುದಕ್ಕೂ ಎಟುಕದ
ಕುಬ್ಜ ಕೈಗಳಿಗೆ
ಕತ್ತಲುಬ್ಬರದಲ್ಲಿ
ರಾತ್ರಿ ಸಮತೆಯಲಿ
ಹರ್ಕ್ಯುಲಿಸ್ ಶಕ್ತಿ!
ಫಾಸ್ಟಸ್ ಬಯಕೆಗೆ
ಪೂರ್ಣತೃಪ್ತಿ!!

# ಡೈವೊರ್ಸ್

ಮುಂಡೆಯಾದ ಮೇಲೆ
ಭಾನುಮತಿಯ ಬಸಿರು ಕಮ್ಮಾರ ಕುಲುಮೆ
ಇದ್ದೊಬ್ಬ ಗಂಡನೂ ಇಲ್ಲದಾದಾಗ
ಐವರಪ್ಪುಗೆಯ ಸುಖದ ದ್ರೌಪದಿಯು
ಉರಿವ ಕಿಚ್ಚು
ಕುರುಭೂಮಿ ಕೆಸರಲ್ಲಿ
ಅಂದದರಮನೆಯೊಂದು
ಮಂದಹಾಸದಿ ನಿಂತು
ಅಣಕಿಸಿತ್ತು.
ಕೊಬ್ಬಿದ ಖಂಡಗಳನ್ನುಬ್ಬಿಸುತ್ತ
ಕಸರತ್ತಿನಲಿ ಮಸ್ತ
ಭೀಮನೆದೆ ಮೆದುಳಲ್ಲಿ
ಬುಳ ಬುಳನೆ ಹರಿವ ಹುಳು–
ಕೌರವನ ಬೀಳಿಗೆ
ಮಿಸೆ ಧ್ವಜ ಹಾರಾಟ
ರಸಿಕ ರಂಡೆ ಗಂಡನಿಗೆ
ನನ್ನವಳ ಮೇಲೆ ಅವನಿಗೆ ಕಣ್ಣು
ತಪ್ಪೇನು?
ಹಣ್ಣು ಚೆನ್ನಿದ್ದಲ್ಲಿ ಕಣ್ಣು ಚುರುಕು
ನ್ಯಾಯದಲಿ, ದ್ರೌಪದಿ
ನನಗೇ ಮಿಸಲು ತುತ್ತು
ಕಾಮಿನೀ ಭಾಮಿನಿಗೆ,
ಕೋರ್ಟು ಹತ್ತಿದರೂ ಸರಿಯೆ ಹಕ್ಕುದಾರನಾಗಿ
ಅಣ್ಣನಲಿ ಪಾಲು–ಪಡೆಯಬೇಕು.
ದ್ರೌಪದಿಗೆ ಗುಟ್ಟಾಗಿ ಹೇಳಬೇಕು

ಮೊದಲೆ ಕಾಳ್ಗಿಚ್ಚು
ಭೀಮ ಬೆಂಬಲಗಾಳಿ ಬೀಸಿದ್ದೆ ತಡ
ಭುಗಿಲೆದ್ದು,
ಉಳಿದವರ ಹಿಜಡಾತನಕೆ
ಹೇಸಿಗೆ ಪಟ್ಟು,
ಮೂಕ ಸಮ್ಮತಿಯಲ್ಲಿ
ಸೋಡ ಚೀಟ ಬರೆದು
ನಡೆದಳಪ್ಪುಗೆಗೆ
ಭೀಮ ಬಾಹುಗಳ ಭದ್ರ–
ಕೋಟೆಯೊಳಗೆ

# ಪರಕೀಯ

ಕಚ್ಚೆಸೀರೆ ಅಮ್ಮನಲ್ಲಿ
ಪ್ಲಗ್ಗು ತಲೆಯ ಅಪ್ಪನಲ್ಲಿ
ನನ್ನ ನೆರಳೂ ಇಲ್ಲ
ಅಮ್ಮನ ದೇಶೀ ನೆಲದಲ್ಲಿ
ಅಪ್ಪ ಬೀಜ ಬಿತ್ತಿದ್ದರೂ
ನಾನು ಬೆಳೆದದ್ದು ಮಾತ್ರ
ಚೆರ್ರಿ ಗಿಡವಾಗಿ
ಜಾಮೂನು ಕ್ಲೇಶದಲಿ
ಪ್ಯಾರಿಸ್ ಪೆಪ್ಪರಿನಂತೆ ಘಾಟು
ಹಬ್ಬ ಹುಣ್ಣಿಮೆಯಲ್ಲಿ
ಕ್ಲಬ್ಬು ಕುಣಿತದ ಬೆರಳು
ಹೆರಳು ನಾಗರ ಕುರುಳು
ಬಾಬ್‌ನ ಪಟ್ಟ ನೆರಳು
ನನ್ನ ಪಾಲಿನ ಮನೆಗೆ ನಾನೇ
ಅಭ್ಯಾಗತ!
ಎಳೆತನದಲ್ಲಿ ಉಣಿಸಿದ ಮೊಲೆ
ಹರಯದಲ್ಲಿ ಅಸಹ್ಯ
ಚಿಗುರುವ ಬೇರುಗಳ ಕಿತ್ತು
ಬೇರೆಲ್ಲೊ ನೆಟ್ಟಾಗ
ಆಳಕ್ಕಿಳಿಯದೆ, ಗಾಳಿಯಲ್ಲಿ
ತಲೆ ತೂಗುತ್ತಿರುವ
ಪೇಪರು ಗಿಡ
ಹುಟ್ಟಿದಾಗ ಮುಚ್ಚಿದ ಕಣ್ಣು
ಬಿಟ್ಟಾಗ ಕಂಡದ್ದು
ವೈನು

ತುಂಡು ಲಂಗ–
ಪಾದ್ರಿ
ಒದ್ದುಕೊಂಡು ಬುದ್ಧಿ,
ಎದ್ದು ಮೇಯ ಬಂದಾಗ
ಪಶ್ಚಿಮದ ಗಾಳಿಯ
ಕಚಗುಳಿಯ ಸುಗ್ಗಿ
ನನಗೆ
ನನ್ನ ನಾಲಗೆಗೆ
ನನ್ನ ರೂಪ ಶಿಲ್ಪಕ್ಕೆ
ಪಶ್ಚಿಮದ ದೀಕ್ಷೆ
ಅಮ್ಮ ಕೊಟ್ಟ ಅನ್ನ
ಅಜೀರ್ಣವಾದಾಗ
ವ್ಹಿಸ್ಕಿ, ಬ್ರಾಂದಿ
ಶಾಂಪೇನಿನ ಕಾವು ಹಿತ
ಅಪ್ಪನ ಅಕ್ಕರೆಯ ಅಂಗಿ
ಸೈಜು ಮೀರುತ್ತೇನೆ,–
ಇಲ್ಲ–
ಸಾಲದಾಗುತ್ತೇನೆ
ನಾಟಿ ಮಣ್ಣೊಳಗೆ
ಕಸಿಯಾದ ನಾನು
ಪರಕೀಯದಸ್ಪೃಶ್ಯತೆಯ ಧಾಳಿಗೆ
ಕುಸಿದು ಕುಳಿತಿದ್ದೇನೆ
ಸ್ವಕೀಯದ ಪಳೆಯುಳಿಕೆ
ಪತ್ತೆ ಹಚ್ಚಿ
ನನ್ನ ಬೆಳೆಸಿದ ನೋವು ನಲಿವಿನ
ಇತಿಹಾಸ ರಚಿಸುವ ಮೊದಲೆ
ಪಶ್ಚಿಮದ ಹಾದರಕ್ಕೆ
ಸೆರಗ ಹಾಸಿ
ಪರಕೀಯತೆಯ
ಸಂಭೋಗಿಸಿದ್ದೆ
ನನ್ನೊಳಗೆ ನಾನೇ ಬಿದ್ದೆ–
ಬಿದ್ದೆ

## ಗಾಂಧಾರಿ

ಕುಂತಿಗೆ
ಮಕ್ಕಳಾದದ್ದಕ್ಕೆ
ಗಾಂಧಾರಿ ಗರ್ಭ ಪಿಂಡಗಳೆಲ್ಲ
ಕುಂಭಗಳಲ್ಲಿ ಕಾವು ಪಡೆದು
ಸಿಡಿದು ಅರಳಿದವು
ದ್ವೇಷದಲಿ ಹೊಸಕಿದದೃಷ್ಟ
ಉಳಿದಿತ್ತು ಗಾಂಧಾರಿಗಷ್ಟೇ
ನೆನಪುಗಳು ಭ್ರಷ್ಟ
ಹುಟ್ಟು ಕುರುಡನ ಮಡದಿ
ಕಟ್ಟಿದಳು ಕಣ್ಣ ಪಟ್ಟಿ
ಹತ್ತಿ ಹಿಡಿದಳು ಕುದುರೆ–
ಆಲೋಚನೆಯ ಗಟ್ಟಿ
'ಕುಂತಿ ಮಾದ್ರಿಯರಲ್ಲಿ
ಒಬ್ಬಳಾದರು ಸಾಕು
ರಸಕೇಳಿಯಾಟದಲಿ
ಹೆಪ್ಪುಗಟ್ಟಿದ ಮೊಸರ ಮೋಹದಲ್ಲಿ
ಜೇನು ಮಾತಿನ ಸವಿಯ
ತುಂಬು ಕಡಲಲ್ಲಿ
ದಣಿವವರೆಗೂ ಈಜಿ
ದಡ ಸೇರ ಬಹುದಿತ್ತು
ಗರಿಗೆದರಿ ಗೂಡಿಂದ ಹೊರಟ
ಹಕ್ಕಿ ಚುಕ್ಕಿ
ಹತ್ತುತ್ತಾ ಹತ್ತುತ್ತಾ
ಹದ್ದಾಗಿ ಇಳಿದಿತ್ತು
ಟೊಂಗೆ ಮುಡಿಗೆ

ಮೊಳೆತಿತ್ತು ನೆರಳು ವಿದುರನ
ಅದರ ತಲೆಯ ಕೆಳಗೆ
ಕಣ್ಣು ಕತ್ತಲಲ್ಲೇ
ಕಸುಕಳೆದು ಮುದಿಯಾದ
ಇವನ ಸ್ನೇಹ
ಮರ್ಯಾದೆ ಲೆಕ್ಕದಲಿ
ಮಾತ್ರ - ಸಹ್ಯ !
ಹುಚ್ಚೆದ್ದ ಬಯಕೆಯಲೆಗಳು
ಹದ್ದಿನ ದಂಡೆಗಳ ದಾಟಿ
ತಡಿಕೆ ಗುಡಿಸಲನು ಅಪ್ಪಳಿಸಿ
ವಿಕಲ !
ವಿಕಲ !!
ನೀರವ ರಾತ್ರಿಗಳ
ನಿರ್ಮಲ ಪರಿಸರದಲ್ಲಿ
ಉನ್ಮತ್ತ ಪ್ರೇಮದಲಿ
ಕೃಷ್ಣ, ಕೃಷ್ಣಾ!
ಉಬ್ಬೆದ್ದ ಹೃದಯಕ್ಕೆ
ನಿಟ್ಟುಸಿರ ತಣ್ಣೀರು
ಗಾಂಧಾರಿಗುಳಿದಿತ್ತು
ಬಿಸಿಯ-ಕಣ್ಣೀರು

# ನೆನಪುಗಳು

ಆಗಮ್ಯ ಆಕಾಶದಲ್ಲಿ
ಅನಿರ್ಧಿಷ್ಟ ದಿಕ್ಕುಗಳನ್ನಳೆದು
ಅಲೆವ ಹಕ್ಕಿಗಳಿಗೆ ಬೋನಿಟ್ಟಂತೆ
ನನ್ನ ನೆನಪುಗಳು

ಅಧಃ ಪಾತಾಳದ ಅರಿಯದ ಹಾದಿಗಳಲ್ಲಿ
ತುಡುಗು ದನಗಳ ಹಾಗೆ
ಅಪ್ಪ ಅಮ್ಮನ ಕಣ್ಣು ತಪ್ಪಿಸಿ
ತೀಟೆ ಕೀಟಲೆಗಳ ಕುದುರೆಯೇರಿ
ಅಪ್ರಬುದ್ಧ ಅಡೊಲಸೆಂಟ್‌ರ
ಅನ್ವೇಷಣೆಗಳ ಅಸಂಭಾವ್ಯತೆಗೆ
ಪುಟ ಕೊಟ್ಟು ಕೆನೆಯುತ್ತವೆ

ಹುಟ್ಟು ಸಾವುಗಳ ಚಕ್ಕಡಿಯಡಿಗೆ
ಭವಾವಳಿಯ ಸರಪಳಿಯ ಕೊಂಡಿ ಕಳಚಿ
ಮಣ್ಣೊಳಗೆ ಹುಟ್ಟಿ ಮೇಲೆ ತೆವಳುವ
ಹುಳುಗಳಿಗಿಂತ 'ಉತ್ತಮ' –
ರೂಪು ರೇಖೆಯ ವಿಕಾಸ ಪರಿಣಾಮಕ್ಕೆ
ಭವ್ಯ ಸ್ಮರಣೆಯಾದಂತೆ
ಭೂಗತ ನೆನಪುಗಳು
ಬುದ್ಬುದಗಳು ಅರಳುತ್ತವೆ

ಕೂಡಿಟ್ಟ ಚಿಲ್ಲರೆ ಕಾಸುಗಳು ಕಲೆತಂತೆ
ಮುಖ ಬೆಲೆಯ ಬೆಲೆಯು ಅಸ್ಪಷ್ಟವಾದಂತೆ
ಎಂದೆಂದಿನ ನೆನಪೋ–
ಒಂದೊಂದಾಗಿ ತೆಗೆದಾಗಲೇ ಬೆಲೆಯ –ಅರಿವು

ಹೂತು ಚಪ್ಪಡಿ ಕಲ್ಲೆಳೆದು
ಗಟ್ಟಿ ಗೋರಿ ಕಟ್ಟಿದರೂ
ಅನುಕೂಲ ಗಾಳಿಗೆ ಹೇಗೋ
ವಾಸನೆ ಹಿಡಿದು ಬದನಿಕೆಯಂತೆ
ಪುಟಿದು ಬೆಳೆಯುತ್ತವೆ

ಅಜ್ಞಾತ ಬೀಜಕ್ಕೆ
ಕೈಕಾಲು ಮೂಡಿ ಒದೆವಂತೆ
ನನ್ನ ನೆನಪುಗಳೆಲ್ಲ
ರಕ್ತ ಪಡೆದು ಬಲಿತು
ಮೆದುಳು ಕೊರೆಕೊರೆದು
ಪ್ರಜ್ಞೆಯನು ಹಿಂಡುತ್ತವೆ.

## ಭಾವನೆಗಳು

ಬುದ್ಧಿ
ಹದ್ದು ಮೀರಿದಾಗ
ನೂರೆಂಟು ಬಾಂಬುಗಳ
ತಲೆ ತಾಕಲಾಟದಲಿ
ಎದ್ದ ಅರಾಜಕ ಭಾವಗಳ
ಇರಿತದಲಿ
ಮನಸು,
ಹುಣ್ಣಿನ ಕಣ್ಣ ಇಂದ್ರ,
ನಿರ್ಗಮನದಭಿವ್ಯಕ್ತಿಗೆ
ಹಾದಿಕಾಣದೆ
ಜಾರಿ ಜೊತೆ
ಸಂವೇದನೆ
ಮರೆತು ಮುಕ್ಕುವ
ವಿಧ್ವಂಸಕ ಕ್ಯಾನಿಬಾಲುಗಳು
ಹೋರಾಟದಬ್ಬರದ
ಉಬ್ಬಿನಲಿ
ಬಲೂನಿನೆದೆ ಭಾರ
ಕಿಷ್ಕಿಂಧೆಯಲ್ಲೊಂದು
ನಾಗರೀಕ ರಾಜ್ಯ
ಸ್ಥಾಪನೆ ಕನಸು
ಪ್ರಪಂಚ ಮಹಾಯುದ್ಧದಲಿ
ಹುಟ್ಟು ಸಾವವರ
ಸಂಖ್ಯೆಗೆಲ್ಲಿ ಲೆಕ್ಕ!
ಈ ನೆಲದೊಳಗೆ
ಗುರುತಿಲ್ಲದ ಕೋಟಿ

ಜೀವಾಣುಗಳು
ಮೊಳೆವುದೆಲ್ಲೋ
ಒಂದು,–
ಇಲ್ಲ ಎರಡು
ಪುರುಷ ಸತ್ವದ ಕಾವು
ದೊರೆತರೇ ಮಾತ್ರ
ಸಿಡಿಯುವುದು
ಸೃಷ್ಟಿ ರೂಪಗಳು
ಕಾಲ ಬರುವುದರೊಳಗೆ
ಕುಪ್ಪಳಿಸಿ ಸಾಯುವುವು
ಹಸಿಯ ಭ್ರೂಣಗಳು
ಬಸಿರಾದರೂ ಬಂಜೆತನವೇ
ಶಾಪ–ಚಿರಂತನ
ಚಿರಂತನ

# ಆಸೆ

ಬಿರುಗಾಳಿಯೆಬ್ಬಿಸಿ
ಕಡಲ ಕಲಕಿ
ಅಲೆಗಳಬ್ಬರ ಉಬ್ಬಿನ ನಡುವೆ
ಈಜಿ ದಡ ಮುಟ್ಟುವಾಸೆ
ದಡ ಮುಟ್ಟಿ ಗೂಟವಾಗಿ
ಅಸಂಖ್ಯ ಉಸಿರು ಸೂತ್ರಗಳೆಳೆಯ
ಬೆರಳ ಸುತ್ತಿ ಜೀಪುವಾಸೆ
ತಲೆತೂಗಿ ಬಯಲೊಳಗೆ
ಸ್ವಚ್ಛಂದ ವಿಹರಿಸುವ
ಹಾರಿ ಆಕಾಶವಳೆವ
ಹಕ್ಕಿ ರೆಕ್ಕೆಯ ಕಡಿದು
ಚಡಪಡಿಸುತ್ತಿರುವ–ಅದಕಂಡು
ಚಪ್ಪಾಳೆಯಿಕ್ಕಿ ಕಿಲಕಿಲಲಿಸುವ
ಮುಗ್ಧ, ಮಗುವಿನಾಸೆ...
ಹೊತ್ತಿದ ಬೆಂಕಿ ಉರಿ ಉರಿದು
ವಿಪರೀತ ಬಿರುಗಾಳಿ ಬೀಸಿ
ಭುಗಿಲೆದ್ದು
ಖಾಂಡವದಂತೆ ಕಂಡುದನ್ನೆಲ್ಲಾ
ಸುಟ್ಟು ತಣಿಯುವಾಸೆ
ನಾಗರ ಕೋಟೆ ನಿರ್ಮಿಸಿ
ನೊಣವೂ ನುಸುಳದಂತಾಗಿಸಿ
ವಿಶೃಂಖಲ ಪ್ರೇತದಂತೆ
ತೃಪ್ತಿ ತೋರುವ ತನಕ ಸುಳಿಯುವಾಸೆ
ಸರಳ ಬೆದರಿಕೆ ಬಂಧದಲಿ
ನ್ಯಾಯ ನೀತಿಗೆ ನೇಣು ಹಾಕಿ

ನೂರು ವಾಗ್ದಾನಗಳ
ಬೆಂಬಲದ ನೆರಳಿನಲಿ
ಸುಳಿದೋಡಿ, ಮೊದಲಿಗೆ
ಗುರಿ ಮುಟ್ಟುವಾಸೆ
ಗಿಟ್ಟಿಸಿಕೊಂಡು ನೆಲದೊಳಗೆ
ನನ್ನೊಂದಿಗೇ ನನ್ನ ಬೇರು ಮೊಳೆಯಿಸಿ
ಹರಡಿ ಹಬ್ಬಿ ವ್ಯಾಪಿಸಿ
ವಿಸ್ತಾರವಾಗಿ
ನನ್ನ ನಂತರವೂ ನನ್ನ ವಿಭವದ
ಹೊಗರ ಚೆಲ್ಲುವ ಚಿಗುರು ಬೇರು
ಭೂಮವಾಗಿ
ಉಳಿಯಬೇಕೆಂಬುದೇ
ಅಂತರಾಳದ ಆಸೆ

# ವಿರಹ

ಮೂಕ ವ್ಯಥೆ
ಕಲಕಿದ ಕಳಕಳಿ ಒಳಗೆ
ರೆಕ್ಕೆ ಬಲಿಯದಸಹಾಯ
ಕುದಿವ ಪಾಯಿಂಟಿಗಿಂತ ಹೆಚ್ಚಿನ ಕಾವು
ಸುಡುವ ಬಿಸಿ ಬಿಸಿ ಬೆಂಕಿ
ಕೈಗೆಟುಕದ್ದಕ್ಕೆ, ವಿರಕ್ತಿ ಮುಸುಕು
ಈಜಲಾಗದ ಆಕಾಶ ಕಡಲಿನಂತರ ನಡುವೆ
ಕತ್ತರಿಸಿದರ್ಧಾಂಗ ನೆನಪ ಹುಣ್ಣು
ಕಣ್ಣತ್ತ ಹಾಯಿಸಿದಾಗ ಕಂಬನಿಗಳುದುರು
ಮೊಡಿಯಾ ಮಂತ್ರ ತಿಳಿದಿದ್ದರೆ
ಡ್ರ್ಯಾಗನ್ ರಥವೇರಿ ಬರುತ್ತಿದ್ದೆ
ಸ್ಮೃತಿಯ ಆಲ್ಬಮ್ಮಿನಲ್ಲಿ ಅಡಗಿರುವ
ನಿನ್ನ ಮುಖ ಚಿತ್ರ
ನೆನಪಿನಂಬುಗಳ ತಿವಿತ ನೋವು ತರಲು
ಪರ ಪರನೆ ಹರಿದು ಆಲ್ಬಮಿನ ಪುಟ
ನಿನ್ನನೆನಪನೆ ಒರೆಸಬೇಕೆಂದರೂ
ನನ್ನೆದೆ ಮಾತ್ರ ಸಿಡಿಯದೊಳಗೇ ಹರಿವ
ಲಾವಾರಸ
ಬೆಂಕಿ ಬೆಟ್ಟ
ವಿರಹದಾರುಣ ಪರಿಣಾಮ
ಪ್ರಪಂಚದದ್ಭುತ ಕಾವ್ಯ
ಮಾನಸಿಕ ಬೆಸುಗೆಯ ತೃಪ್ತಿ ಸಾಧ್ಯವಿದ್ದಿದ್ದರೆ
ಲೋಕ, ಬರೀ ಶೂನ್ಯ
ಉಸಿರುಗಟ್ಟಿ ಸಾಯುವ

ನಿರ್ವಾತ ಪ್ರದೇಶ
ಹೃದಯಗಳ ಕೊಳೆ
ಕಳಚುವುದಕ್ಕೇ ವಿರಹ ಬೆಂಕಿ!
ಮೊಳೆತು ಚಿಗುರುವ ಪ್ರೇಮ
ಎಂದೆಂದೂ ಹಸುರಂತೆ !
ಅಂತೆ ಕಂತೆಗಳ ಕತೆ ಗೆದ್ದಲು
ಬೆಳೆವ ಬಯಕೆಗಳ
ಹಸುರು ಕನಸುಗಳ
ತಲೆ ಕಡಿದು ಹೂತು ಆಳದೊಳಗೆ
ಚಪ್ಪಡಿಕಲ್ಲ ಹಾಸಿ ಕಟ್ಟುವ
ಸಮಾಧಿಯೇ
ವಿರಹ!

# ವೇದನೆ

ಯೂಲಿಸಿಸ್ ಅನುಭವಗಳೆಲ್ಲ
ಏಳು ಸುತ್ತಿನ ಕೋಟೆ
ಮುಚ್ಚಳದೊಳಗೆ
ಕುಳಿತು ಮೊಳೆ
ಬಡಿಸಿಕೊಂಡಿವೆ
ಒಂದು, ಎರಡು, ಮೂರು
ಎಣಿಸುತ್ತಿರುವಷ್ಟರಲ್ಲೇ
ಸಂಖ್ಯೆ ಎಲ್ಲೆಯನ್ನೇ
ಮೀರಿ
ಸಂತಾನ ವೃದ್ಧಿಯಾಗಿ
ಒಳಗೊಳಗೇ
ಒಂದೊಂದಾಗಿ
ನನ್ನದೆನ್ನುವುದನ್ನೆಲ್ಲಾ
ತಿಂದು ಕಾಡುತ್ತ
ಮರಗಟ್ಟಿಸಿ ಪ್ರಜ್ಞೆ ಕೀಳುವ
ವಿದ್ಯುತ್ತಿನ ಚಲನೆ
ಗಾಳಿಯೊತ್ತಡ
ಹೆಚ್ಚು
ತಿದಿಯೊಡೆಯುವುದು
ಸಿದ್ಧ!
ಅಗಸ್ತ್ಯರರಗಿಸಿ ಕೊಂಡಂತೆ
ಇಲ್ವಲ ವಾತಾಪಿಗಳು
ಇಲ್ಲಿ ಅರಗದೆ
ಒಳಗೆ ನಡೆಸಿದ್ದಾರೆ
ಭ್ರಾತೃ ಕಲಹ

ಕೆಂಡವಾಗಿದ್ದು
ಜಾರಗಾಳಿಗೆ ಸಿಡಿದು
ನರ ನರವನ್ನೇ ಸುಟ್ಟು
ಸುಖಿಸುವ
ದೀಪಾವಳಿ!
ಕಲ್ಲು ಕತ್ತರಿಸುವ
ಉಗುರ ಚಾಕು
ನಾಲಿಗೆಯ ಬೇರು ಸಂಶೋಧನೆಗೆ
ಶರಮಂಚಶಯನ
ಅನಿಚ್ಛಾಮರಣಿಗೆ
ಅರ್ಜುನ ಕೊರೆದ
ಬುಗ್ಗೆಯೊಳಗಿಂದ
ವಿಷದ ಜೇನು
ತಿಂಗಳೊಂಬತ್ತು
ತುಂಬುವ ಮುಂಚೆ
ಬೆಳಕು ಕುಡಿಯಲು ತವಕ
ಕಳ್ಳದಾರಿಗೆ ಹವಣು
ಹುಡುಕಾಡಿ ತಡಕಾಡಿ
ಸೂರು ಕೊರೆಯುವವರೆಗೆ
ಚೀತ್ಕಾರ
–ಅ–
ಶಾಂತಿ!

## ಪ್ರೇಯಸಿಗೆ

ಹೆಂಡ
ಬುಂಡೆ
ನೀನು
ನಾನು
–ಇಷ್ಟೇ ಸತ್ಯ
ನಾ ಕುಡಿವ ಹೆಂಡ ಕಡಲಲ್ಲಿ–
ನೀ ಚಿನ್ನ ಮೀನು
ನಿನ್ನ ಪಾರದರ್ಶಕ ಮೈಯೊಳಗೆ
ಹರಿವ ಬೆಳಕೇ ನಾನು
ಸದ್ದಡಗಿ ನಿದ್ದೆಯಲಿ ಬಿದ್ದಾಗ
ರೋಮಾಂಚಗಳ
ಕಳೆ ಕೀಳುತ್ತೇನೆ
ಬೇಲಿ ಮೈಯೊಳಗೆ
ನಿರಾತಂಕ ವಿಹರಿಸುತ್ತೇನೆ
ಮಾದಕ ಮುತ್ತುಗಳ
ದ್ರಾಕ್ಷಿ ಗೊಂಚಲು ನೀನು
ಹಿಂಡಿ ಹೀರಿದ ಹೆಂಡದಮಲು
ಗಾಳಿ ಭಿತ್ತಿಯ ತುಂಬಾ
ಬೆರಳ ಬ್ರಶ್‌ನಿಂದ
ಅಸಲಿ ತನದ ಫೋಸುಗಳ
ಬಿಡಿಸುತ್ತೇನೆ
ಕನ್ನಡಿಯರಮನೆ ಜನಾನ
–ತುಂಬಾ
ನಿನ್ನ ಬಿಂಬ
ತುಟಿ ಮುಗುಳ ಸೆರೆಯೊಳಗೆ
ಹಾವು ಸಿಂಬಿಯ

-ದಿಂಬು-
ರೇಶಿಮೆ ಕೂದಲ ಹೊದಿಕೆ
ನಗ್ನಲಾಲಿ
ಉನ್ಮತ್ತ ಅತ್ತರು ಉಸಿರ ಧೂಪ
ನೆತ್ತಿ ಕುಂಕುಮ ಬೆಂಕಿ
ನಿಡು ಬೆರಳ ಚಿಗುರುಗುರು
ಹುದುಗಿ ತೀರದ ವಂಕಿ
ಜೋಡಿ ಹಕ್ಕಿಯ
ಸೊಂಪಿನಿಂಪು
ನಕ್ಷತ್ರ ಕಣ್ಣಿನಲ್ಲಿ ಬೆಳಕಿನಲೆ ತಂಪು
ನಕ್ಕಾಗ ನನಗೆ,
ಸ್ವರ್ಗ ಸೇಬು
ಅತ್ತಾಗ ಹುರಿಕಿತ್ತ
ಬೇನೆ ಬೇವು
ಬಾ ಬಾರೆ ನನ್ನೆಡೆಗೆ
ನಗ್ನ ಶಿಖಿಯೇ
ನಿನ್ನ ಜ್ವಾಲೆ ನಾಲಗೆಯೊಳಗೆ
ಉರಿ ಉರಿದು
ಬರಿದಾದರೂ
ನಾನಿದ್ದದ್ದು ದಾಖಲೆ
ನೀ ಹಬ್ಬಿ ಕಣ್ಣು ಮಬ್ಬಾಗಿ
ನಿನ್ನ ತಬ್ಬಿದ್ದರೆ
ಹಗ್ಗವೂ ಇಲ್ಲ; ಹಾವೂ ಇಲ್ಲ
ರಕ್ತವೂ ಇಲ್ಲ.
ರಾಶಿ ತೇಜವೂ ಇಲ್ಲ
ಗಿರಗಿರನೆ ತಿರುಗುವ ಬುಗುರಿ ತಲೆ ಸುತ್ತಿ
ಎಂಟರಂತೆ ಹೆಣೆದುಕೊಂಡು
ಕರ್ಪೂರದಂತೆ
ಉರಿದು ಕರಗಿ
ನಾಸ್ತಿಯಾಗೋಣ
ನಾಸ್ತಿಯಲಿ
ಪ್ರೇಮದಸ್ಥಿಗಳ
ಉಳಿಸೋಣ

# ನಿರೀಕ್ಷೆ

ಪ್ರತಿ ದಿನವೂ
ಪ್ರತಿ ಸಲವೂ
ಬಯಸಿ ಕಬಂಧ ಕೈ ಚಾಚಿದರೂ
ದೂರ ದೂರಕೆ ಸರಿಯುವೆ
ದುಶ್ಯಾಸನನು ದ್ರೌಪದಿಯ
–ಸೀರೆ
ಎಳೆದೆಳೆದು ಸೋತಂತೆ
ಗೋಲಿ ಕಣ್ ಸೋಲುವುದು
ಪ್ರೇಮ ಸೆಂಟ್ ಸವರಿದ
ಉತ್ತರವ ಕಾಣದೆ
ಅನುತ್ತರ ಮೌನ–
ನೂರು ಭೇತಾಳಗಳ ಭೀತಿ
–ಹುಟ್ಟಿಸಿದೆ
ಅಗಲಿದ್ದರೂ ದೂರ
ನೆಟ್ಟ ಪ್ರೇಮದ ಕಂಬ!
ಭದ್ರ ಭರವಸೆಯ
ತಳಪಾಯ ಸಡಿಲಿದಂತಿದೆ

ದೇಹವೆರಡು
ಆತ್ಮ ಒಂದೇ ಎನುವ
ಸ್ಥೂಲ ವಿವರಣೆ ಬೇಡ
ನಿನ್ನ ಆತ್ಮವನ್ನಾದರೂ ಕಳಿಸು
ನನ್ನದರೊಂದಿಗೆ
ಸ್ನೇಹದಲಿ ತಿರುಗಾಡಿ
ಸುತ್ತಿಬರಲಿ

ನಾನಿಲ್ಲದ ನೆನಪು
ನಿನ್ನೆದೆಯ ಕದ ತಟ್ಟಿ
ನನ್ನೆಡೆಗೆ ಕಳುಹಿಸುವುದೆಂದು ಕೊಂಡಿದ್ದೆ
ಚಿಕ್ಕೆಯಾದರೂ
ಚಂದ್ರನಾದರೂ
ಕತ್ತಲಾದರೂ
ಮೋಡವಾದರೂ

ರಾಯಭಾರವ ವಹಿಸಿ ಬರುವುದೆಂದೆಣಿಸಿದ್ದೆ
ನನ್ನ ಬದುಕು ಸಾವಿನ ಸುದ್ದಿ
ಬೇಡವೆನಿಸಿರುವಾಗ
ಮದುವೆ ಮಂಟಪದಲ್ಲಿ ನುಡಿದ
ಪ್ರಮಾಣಗಳ ಸಾಕ್ಷಿಯೇಕೆ?

ಮನಸು ಬೋಳಾಗಿರಲು
ಹೊರಗೆ ಗದ್ದಲವಿರಲು
ಪುರೋಹಿತನ ಮಂತ್ರ ಘೋಷದೊಳ್ಳೇಗೋ
ಸುತ್ತಿ ಬಂದೆವು ಜೊತೆಗೆ
ಯಂತ್ರ ಜಡದಂತೆ

ದ್ರಾಕ್ಷಿ ಗೊಂಚಲು ಕನಸು
ಪಾತಾಳದಿಂದೆದ್ದು ನಿಮ್ಮ ಮರದೊಡಲಿಗೆ
ಸುತ್ತಿ ಬಳಸಿತ್ತು
ಒಣಮರ–ಬೇರುಸಡಿಲು
ಜೀವರಸ ನರಗಳಲಿ
ಹರಿಯುತಿಲ್ಲ
ನಿಮ್ಮ ಕಣ್ಣುಗಳಲ್ಲಿ ನನ್ನ ಗೊಂಬೆಯೆ ಇಲ್ಲ
ನಿಸ್ಸಾರ ನಿರ್ಲಿಪ್ತ ಗೋಲಗಳು–
ಮಾತ್ರ
ಸುತ್ತುತಿವೆ
ಬೆದಕುತಿವೆ

ಕಾಣಸಿಗದೇನನ್ನೋ!
ಇಬ್ಬರಸ್ತಿತ್ವವೂ ಒಂದೇ ಅನಿಸಿದೆ ನನಗೆ
ಅದೃಶ್ಯ ನಗೆಯೊಂದರಣಕ
ಲೋಕ ಸಿದ್ಧಾಂತದಂತೆ
ಒಂದೆ ಆಗಿದ್ದರೆ ನಾವು–
ಆಕ್ಯುಪಂಕ್ಚರ್ ಬೇನೆ ತಿಳಿಯುತ್ತಿತ್ತು
ಸಿಡಿದ ಮನಸಿನ ಹೋಳು ಕಾಣುತ್ತಿತ್ತು
ಕಡಲು ಕಲಕಿದ ಬಾಧೆ
ವಿರಹ ದಹಿಸಿದ ಉರಿ–ತಟ್ಟುತಿತ್ತು

ನೆಮ್ಮದಿಯ ನೆರಳಲ್ಲಿ ತಣ್ಣಗೆ ಕುಳಿತಿರಲು
ನನ್ನ ಈ ನಿರೀಕ್ಷೆಗೆ
ಕೈಕಾಲು ಮೂಡುವುದೇ?
ಈಜಿ ದಡ ಮುಟ್ಟುವುದೇ?
ಹೂ ಹೊಡೆದು
ಅರಳು
ವು
ದೇ?

# ಈಗಷ್ಟೇ

ಈಗಷ್ಟೇ,
ಅಂದುಕೊಂಡೆ ರೀ
ವೈಕಿಂಗಿಗಿಂತ
ಪರಿಣಾಮಕಾರಿಯಾಗಿ
ನನ್ನಲ್ಲಿಗೆ ಬರುತ್ತೀರಿ
ಎಂದು

ಪ್ರಣಯದ
ಮೊದಲ ದಿನಗಳಲ್ಲಿ
ಕವಿಯಾಗಿ
ಸ್ಯಾಕ್ರೀನ್‌ಗಿಂತ
ಸಿಹಿಯಾಗಿ
ಮಾತಾಡಿ

ನನ್ನೊಳಗೆಲ್ಲಾ
ರೋಮಾಂಚದ
ಬುದ್ಬುದಗಳ
ಎಬ್ಬಿಸಿದ್ದಿರಿ
ಬಿಸಿಲ ತಂಪಲಿ ನಡೆದು
ಬೋಳು ಮರ
ಕೆಳಗೆ
ಕುಳಿತು

ಹಸಿರು ಕನಸು
–ಗಳ ಕಟ್ಟುತ್ತಿದ್ದ ನನ್ನ

ಮೇಲೆ
ಗುಬ್ಬಿ ಹಿಕ್ಕೆ ಬಿದ್ದಾಗ
ಗಾಭರಿಯಿಂದ ಚೀರಿದಾಗ
ಕಟ್ಟುತ್ತಿದ್ದ
ಆಸೆಗೋಪುರ
ಬಿದ್ದಂತಾಗಿ
ಭಯವಾದಾಗ

ನಗೆ ಮಿಂಚು ಸುಳಿದು
ಭಯವೇಕೆ
ನನ್ನ ಬಾಹು ಕೋಟೆಯಲಿ
ನೀ ಭದ್ರ
ರಾಜಕುಮಾರಿ!

–ಎಂದು
ಸನಿಹಕೆ ಸರಿದು
ಹಿತವಾಗಿಸಿದ್ದು
ಈಗಷ್ಟೇ ನೆನಪಿಗೆ
ಬಂದಿತ್ತು!

ನೋಡಿ,
ಎಲ್ಲ ಪ್ರೇಮಿಗಳಂತೆ
ಮದುವೆ
ಮಕ್ಕಳು
ಅನ್ನುವ ಭ್ರಮೆಗೆ
ನಾವು ಬೀಳ
ಬಾರದೆಂದಾಗ
ಓಯು ಮೊನ್
ಪ್ಲೆಟಾನಿಕ್ ಲೊವ್!?
–ಎಂದು ಹುಸಿಯಾಗಿ
ಚಪ್ಪರಿಸಿದ್ದು–

ನಿದ್ದೆ ಕಣ್ಣಲ್ಲೇ ಎದ್ದು
ಚುಕ್ಕಿಗಳೆಣಿಸಿದ್ದು
ಚಂದ್ರಲೋಕಕ್ಕೇ
ಹೋಗಿ ಬಂದ
ಕನಸುಗಳನ್ನು
ಹೇಳಿಕೊಂಡು
ಪೆದ್ದು ಪೆದ್ದಾಗಿ
ನಕ್ಕು

ಬೆಪ್ಪಾಗಿ–
ನಾವು ನಕ್ಕಿದ್ದೇಕೆ?
–ಎಂದು
ಪ್ರಶ್ನಿಸಿ ಕೊಂಡದ್ದು
ದೃಶ್ಯ ರೂಪವಾಗಿ
ಈಗಷ್ಟೇ
ಮಿಡುಕಾಡುತಿರಲು
ನಿಮ್ಮನ್ನು

ಹೇಗಾದರು
ಕರೆಯಬೇಕೆಂದು
ವಾಸ್ತವ
ಮರೆತು
ಬಾ–
ಯಿ
ಬಿಟ್ಟಿದ್ದೇ–
ಕಣ್ಣು ಕುರುಡಿಸುವ
ಆರ್ಕ ಬೆಳಕಾಗಿ ಬಂದಿದ್ದೀರಿ

# ಇನಿಯನಿಗೊಂದು ಕಿವಿಮಾತು

ನೀವು ನಾನೂ ಕೊಟ್ಟ
ಪ್ರೇಮದ ಮೊತ್ತ ಎಫ್.ಡಿ. ಯಲ್ಲಿ
ಹಾಕೋಣ
ಬೆಳೆಬೆಳೆದು ಬಡ್ಡಿ ಕೂಡಿಸಿಕೊಂಡು
ಊದಿದ್ದರೆ
ಬೆಳ್ಳಿ ಕೂದಲಾದಾಗ
ಬ್ರಾ ಒಳಗೆ ಬತ್ತಿದಾಗ
ಮಂಜು ಅನುಭವದಲ್ಲಿ
ರಕ್ತ ಹೆಪ್ಪಾದಾಗ
ಉಪಯೋಗಿಸೋಣ
ಧರ್ಮೇಚ ಅರ್ಥೇಚ ಕಾಮೇಚ–
ಎಂದು ಹೇಳಿಸಿ
ಮಂತ್ರ ತಂತಿಯಲಿ
ಬಿಗಿದಿದ್ದಾರೆಂದುಕೊಳ್ಳಬೇಡಿ
ನೀವು ಚಂದ್ರ–ನಾನು ಬೆಳಕು
ನೀವು ಹೂವು–ನಾನು ಗಂಧ
ನೀವು ವಸ್ತು–ನಾನು ನೆರಳು–
ಎಂದು ಪರಾವಲಂಬಿಗಳಾಗೋದು ಬೇಡ
ಗಂಡ ಹೆಂಡತಿ–ಮಿತ್ರರೆಂದು
ಪ್ರತಿವಾದಿಸೋಣ
ಹೆಣೆದ ಮಾತ್ರಕ್ಕೆ ನೂಲು ಎಳೆಗಳು ಒಂದೇ?
ನನ್ನ ಹಡಗನು ನಾನೇ ನಡೆಸುತ್ತೇನೆ
ಕಣ್ಣೊಳಗೆ ಊದಿದ ಕನಸುಗಳನ್ನೆಲ್ಲ
ಬಿತ್ತಿ ಆಸೆ ಭರವಸೆ ಗೊಬ್ಬರ ಹಾಕಿ
ಬೆಳೆಸುತ್ತಿದ್ದೇನೆ

ಅಗತ್ಯಕ್ಕಷ್ಟು ಹಣ್ಣು ಬಿಟ್ಟರೆ ಆಯ್ತು
ತುಟಿಗೊತ್ತಿದ ಮುದ್ರೆ ನಾಣ್ಯಗಳನೆಲ್ಲ
ಆಯ್ದು ಸಂಚಯಿಸಿ
ಮೈದಾಸ ಬುದ್ಧಿವಂತಿಕೆಯಲಿ
ಪಾತಾಳ ಕೋಣೆಯಲಿ
ಹುದುಗಿಟ್ಟಿದ್ದೇನೆ
ಬಳಸಿದ ಬಾಹು ಬಳ್ಳಿ–ಸಿಡುಕಿನ
ಮುಳ್ಳು ಜಾಲಿ–
ಮುಪ್ಪು ಭೂತವ ಬೆದರಿಸಿ–ಕಟ್ಟಿ ಹಾಕಲು
ಅಟ್ಟದ ಮೇಲೆ ಒಟ್ಟಿ ಹಾಕಿದ್ದೇನೆ
ಬೇಸರಾದರೆ ಹೇಳಿ–
ಶಿಲೆಯಹಲ್ಯೆಯಾಗುತ್ತೇನೆ
ಮುಪ್ಪು ನೆರಳೂ ಸುಳಿಯದ
ಅಪ್ಸರೆಯಾಗುಳಿಯುತ್ತೇನೆ
'ವೃಷಭ' ವೈರಾಗ್ಯ ನೆತ್ತಿಹತ್ತಿದರೆ
ಭವಿಷ್ಯದ ಬಂದೋಬಸ್ತಿಗೆ
ನೀವಿರುವಾಗಲೇ ನನಗೊಂದು
ಪಿಕಾಸೋ ಶೈಲಿಯ ಗೋರಿ
ನಮ್ಮ ವೀಕ್ಷಣೆಯಲ್ಲೇ
ಕಟ್ಟಿಸೋಣ
ನಾಳೆಗಳ ಗೊತ್ತುಗುರಿಯಿಲ್ಲವಾಗಿ –
ಈಗಲೇ ಭದ್ರಬೇಲಿಯನೊಂದು ನೆಟ್ಟಿಕೊಳ್ಳೋಣ

## ಅವ್ಯಕ್ತ ಕೊರಗು

ಅವರ ಬಿಟ್ಟು ಇವರ ಬಿಟ್ಟು
ಇವರ್‍ಯಾರು?
ಅಣಬೆಗಳ ನಡುವೆ ತುಂಬೆ ಸಂಜೀವಿನಿ
ಸೆರೆಯ ನಾಲಗೆ ಬಾಯೊಳಗೆ ಚಡಪಡಿಕೆ
ನುಂಗಲಾರದ ತುತ್ತು
ಸೋತ ಕೈಕಾಲು
ತೆರೆದ ಬಾಗಿಲಾದರೂ ಬೆಳಕು ಬರದು
ಇತಿಹಾಸ ಪುಟಗಳಲಿ ಮಾತ್ರವೇ ಹೆಸರು
ಉಸಿರೆತ್ತಿದರೆ ಬಿಸಿಗಾಳಿ ಸೋಂಕಿದರೆ
ಸರಳು ಪಂಜರ ಬಂಧ
ಪುಷ್ಪ ಬೀಜಗಳ ಸಾವು
ರೋಗ ಸೋಂಕು
ಒಂದು ಕೈ ಎತ್ತರಕೆ ಗಾಳಿಯಲಿ ತೇಲುತ್ತಿದೆ
ಮುಗ್ಧ ಜನತೆಯ ಬುದ್ಧಿ
ಮಂತ್ರ ಸಂಮೋಹಿತ
ಅಜ್ಞ ಜನತೆಯ ಮತ ಅವಿರೋಧ ಸ್ವೀಕಾರ
ರಾಮರಾಜ್ಯ ಕಲ್ಪನೆಯಲಿ ಸುಖದ ಹುಡುಕಾಟ
ನಮಗೇನು ಕೊರತೆ? ಬಿಳಿ ಹಾಳೆ ಮೇಲೆ
ಧಾರಾಳ ವ್ಯವಸ್ಥೆ!
ದಿನಕೊಂದು ಮುಖವಾಡ
ಧರಿಸುವವರ್‍ಯಾರೋ ಕಾಣಬೇಕು
ಸರ್ಕರಾಮದಂತೆ ತಲೆ ತಿರುಗುತ್ತಲೆ ಇರಬೇಕು
ಯಾವ ಕೋನದಿ ನೋಡಿದರು
ಕಂಡದ್ದೇ ಸತ್ಯ
ಭೂಕಂಪ ಭೀತಿ

ಹೊಗೆಯಾಡದೆಯೆ ಬೆಂಕಿ ಭುಗಿಲು
ಅದೃಶ್ಯ ಪದಗತಿಯಡಿಯಲ್ಲಿ
ನುಚ್ಚು ನೂರು!
ವೈವಿಧ್ಯ ಕಾಡಿನಲಿ ಏಕತಾನ
ಗುಣ ಗುಣಿಸುತ್ತಿರುವ–ಒಂದೇ
ಜಾತಿ ಸಂತಾನ!
ಕುಣಿಸುವ ಕೈ ಎಡೆಗೆ
ಸಾವಿರ ಕ್ಯಾಮರಾ ಕಣ್ಣುಗಳು
ಬೆರಲ ಸಂಕೇತದಲಿ
ಉತ್ತು ಬೈಟುಗಳು
ಮೇಷ್ಟ್ರು ಹೇಳಿದ್ದನ್ನೇ ಹೇಳದಿದ್ದರೆ ಹೇಗೆ
ತೊದಲಿದರೆ ಛಡಿಯೇಟು ಸಿದ್ಧ–
ತಪ್ಪು ನೆಪ್ಪನು ಹುಡುಕಿ ಕಲಕುವ ಧೈರ್ಯ
ಯೆಂಟೆದೆಯಪ್ಪನಿಗೂ ಉಂಟೆ ಈಗ?
ಗರಡಿಯಲಿ ತೇಯ್ದ ಜಟ್ಟಿಗಳೆ ಮಂಗಮಾಯ
ಗೆದ್ದೆತ್ತಿನ ಬಾಲಕ್ಕೆ ಜೋತು
ಬೀಳುವುದೇ ಕ್ಷೇಮ!
ಸತ್ತು ಹೂತವರು, –ಸ್ವರ್ಗ ಕಂಡವರು
ನೆಲಸಮದ ಸ್ಕೇಲಿಗೆ ಸಿಗಲೇ ಬೇಕು
ಗಾಂಡೀವವೂ ಈಗ ನಿಷ್ಫಲ
ಅರ್ಜುನನ ಕೈಯೊಳಗೆ
ಚಿತ್ರಾಂಗದೆಯ ಗಂಡುಗಾಡಿಗೆ ಸೆಡೆತ ಕೈ
ನಿಶ್ಶೇಷ್ವ ಶಾಪ!
ಉಳಿದವರುಸಾಬರಿ ನಮಗ್ಯಾಕೆ?
ನಾವು ಉಳಿದರೆ, ಉಸಿರಿದರೆ,
–ನಮ್ಮದೆಷ್ಟೋ ಪುಣ್ಯ
ಮೆದುಳು ಕೊರೆಯುತ್ತಿದ್ದರೂ
ಬಿಸಿರಕ್ತ ಹರಿಯುತ್ತಿದ್ದರೂ
ಭಂಗ ಪಡಿಸಲು ಇಚ್ಛಿಸದ ಕರ್ಣ ಧೈರ್ಯ!
ಗುಟ್ಟುಗಳು ಗುಟ್ಟಾಗಿ
ಒಟ್ಟಾಗಿ ಮೊಟ್ಟುತ್ತಿದ್ದರೂ

ಮೂಲ ವ್ಯಾಸವೆಂಬುದರ ಗೊತ್ತುಗುರಿಯಿಲ್ಲ
'ಕುರಿಗಳು ಸಾರ್ ನಾವ್ ಕುರಿಗಳು
–ಎಂಬುವ ಮಾತು ಸತ್ಯ!
ನಮ್ಮೆದೆಗೆ ಬಡಿದಿದೆ ರಾಹು ಭೀತಿ
ಸವಕಲು,–ಸಾವನಪ್ಪಿದರೂ
ನಿಲ್ಲುವ ತಾಣವಿಲ್ಲ!
ನಾಲಗೆಯು ಹೊರಗೆ
ಇಣುಕುವುದಿಲ್ಲ!
ಪಾತಾಳ ಗುಹೆಯೊಳಗೆ
ಮಂತ್ರದಾಲೋಚನೆ
ಮಣ್ಣಿಗತ್ತುವುದು ವಾಸನೆ, – ಸಾಧ್ಯವಿಲ್ಲ!
ಒತ್ತಿದ ವಾಮನ ಕಾಲೆತ್ತಿದರೆ
ಬಲಿಯಿಂದ· ತಿಳಿಯಬಹುದು
ಅವತಾರ ಚಕ್ರ ಮತ್ತೆ ತಿರುಗದ
ಹೊರತು
ಬಲಿಯ ಬರುವಿಕೆಯ
ಆಸೆಯಿಲ್ಲ
ಕಾಯ್ದು ಕೇಳುವವರಿಗೂ
ತಾಳ್ಮೆಯಿಲ್ಲ.

# ಅವಳ ಕಥೆ

ನಿದ್ದೆ ಗದ್ದೆಯ
ಕೆಸರಿನಲ್ಲಿ
ಗೊರಕೆ ಕೊಯ್ಯುವ
ಮುದ್ದನಿಗೆ ಕನಸು
ಅಮ್ಮನಿಗೆ ಬೇಸರ
ಗಂಡು ಸಂತತಿ ಸಹವಾಸಕ್ಕೆ
ವಿಶ್ರಾಂತಿ ಕೋರಿದಳು
ಮಗಳು ರಾಜಕುಮಾರಿ
ಒಂದಷ್ಟು ಕಾಲ
ಇರಲಿ–
ಎಂದು ಹಾರಿದಳು
ಅಮ್ಮನನಿಸಿಕೆ ಸರಿಯೆ
ಗಂಡು ಹೆಜ್ಜೆಯ ಭಾರ
ಎದೆ ಬೇನೆ
ನೋವಿನೊತ್ತಡ
ಪುಪ್ಪುಸದೊಳಗೆ
ರಕ್ತಚಾಲನೆಯ ದಿಕ್ಕು
ತಿರುಗಿಸಲೇ ಬೇಕು.
ನಿಮಿಷ ನಿರ್ಧಾರದಲಿ
ಕಸೆಗಚ್ಚೆ ಪೋಸಿನಲಿ
ರಂಗಕ್ಕಿಳಿದೇ
ಇಳಿದಳು
ನರಳು ಕೇಕೆಗಳೆಷ್ಟೋ
ಕೇಳಿದ್ದೂ ನೆನೆಸಿದಳು
ಪಂಜು ಕಣ್ಣಿನ ಬೆಳಕಲ್ಲಿ

ನೆಲದನಗೆ ನೋವು ಬಾವು
–ಗಳ ನೋಡಿದಳು
ಗಾಳಿ ಬೆಳಕುಗಳಿಲ್ಲ
ಉಸಿರು ಗೋಜಲು ಗುಂಪು
ಅರೆಕ್ಷಣದ ಅಪ್ಪಣೆಗೆ
ಧಾರಾಳ ಬೆಳಕು ಹೊನಲು
ಕೃತಜ್ಞತೆಯ ಗಾಳಿ
ದಟ್ಟಯಿಸಿದ
ಕುಪ್ಪೆ ಕಸರಾಶಿಗೆ
ಡೈನಾಮೈಟು
ಹೂತ ಹೆಣಗಳ
ನರಳು ವಾಸನೆ ಹಿಡಿದು
ಅಗೆಸಿದಳು
ತೆಗೆಸಿದಳು
ಹಂದರಗಳಸಂಖ್ಯ!
ಚಿಕಿತ್ಸೆ ಭರವಸೆಯ
ಅಮೃತ ಸಿಂಪಡಿಕೆ
ರಕ್ತ ಮಾಂಸದ ಮುಕ್ತ
ಶವಗಳೊಳು
ಸಂಚಲನ ಕುರುಹು
ಕತ್ತಲೊಳಗಜ್ಞಾತ
ಶಪಿತ ಆಗಸದೊಳಗೂ
ಅರಳು ಬೆಳಕು
ಬಂಧ ನಿರ್ಬಂಧ ಬಯಲೊಳಗೆ
ಸ್ವಚ್ಛಂದ ಸೊಗಡು
ಹಳ್ಳ ದಿಣ್ಣೆಗಳೆದೆಯ
ಸವರಿ ಸಮಗೊಳಿಸಿದಳು
ಹಣ್ಣುಮರ ಆಸರೆಗೆ
ಕೊಬ್ಬಿರುವ ವ್ಯಾರಾಸೈಟುಗಳಿಗೆ
ಕಿಚ್ಚಿಟ್ಟು ಉರಿಸಿದಳು
ಲಂಟಾನ ಬುಡಕಿತ್ತು

ಹೊಗರು ಗಂಧದ
ಚಿಲುಮೆ ಚಿಮ್ಮಿಸಿದಳು
ಚಿಗುರುಗಳ ತಲೆ ಮೆಟ್ಟಿ
ಮುಗಿಲು ಮೂಸುವ
ಕಾಮಿಗಳೆದೆಗೆ
ತಣ್ಣನೆಯ ಮಂಜೆರೆದು
ಚಪ್ಪರಿಸಿದಳು
ಉಫೇ! ಉಫೇ! ಉಫೇ
–ಹರ್ಷದುದ್ಘೋಷದೊಳಗೂ
ಅಪಸ್ವರವ ಕೇಳಿದಳು
ದೂರ ಮೂಲೆಯಲೆಲ್ಲೊ
ಹೊಗೆಯಿಲ್ಲದಾ ಕಿಚ್ಚು
ಉರಿವುದರ ವಾಸನೆಯ
–ಹೀರಿದಳು
ಜ್ವಾಲೆ ಕನ್ನಡಿಯೊಳಗೆ
ತಣ್ಣ ಮೊಸೆಗಳೆಲ್ಲ
ರಾಹು ಬಿಂಬವ
ಕಾಣುವುದ ಕಂಡು
ತೆಳ್ಳನೆಯ ನಗೆಯ ಬೀರಿದಳು
ಕೀಲು ಸಡಿಲಿದ ಕುರ್ಚಿ
ಜಡಿದು ಹಿಡಿದಳು ಭದ್ರ!
ಒಬ್ಬಳೇ ಒಮ್ಮೊಮ್ಮೆ
ಕೂತು ಆಲೋಚಿಸುತ್ತಾಳೆ
ಅಮ್ಮ ಆರಾಮಿದ್ದಾಳೆ
–ಎದ್ದಾಗ ಅಚ್ಚರಿಯಾಗಿಸಬೇಕು
ಬೇನೆ ದೂರಿಲ್ಲದೆ
ಹಾಯೆನಿಸಬೇಕು
ಮುಳ್ಳು ಕಂಬಿಗಳೆದೆಯೊಳಗಿಂದ
ಗಂಧ ಗಾಳಿಯು ಹೊರಟು
ಘಮ್ಮೆನಿಸಬೇಕು
ಕಣ್ಣು ಹೊರಳಿಸಿದಲ್ಲಿ

ನಗೆ ಮೊಗ್ಗೆ ಗೊಂಚಲು
–ಅರಳಿ
ಅವಳೊಡಲು ಪುಲಕದಲಿ
ಮಿಿಯಬೇಕು
ಮಣ್ಣು ನೆಲ
ನಕ್ಷತ್ರ ಬಾನು
ಬೆಸೆದು ಬುಸುಗುಟ್ಟುವುದ
ಕೇಳಬೇಕು
ಹೆಣ್ಣು ಹೆತ್ತದ್ದಕ್ಕಿದ್ದ
ಅಸಮಾಧಾನ
ಗಂಡು ಸಂತತಿ ಪಡೆದ ಹರ್ಷ
ತಿರುಗಾಗ ಬೇಕು!
–ಎಂದುಕೊಂಡೆದ್ದಾಗ
ಹಗುರಾಗಿ, ತೇಲುತಿರುವಂತೆ
ಅನಿಸಿತ್ತು!
ಕೈ ತುಂಬ
ಬೆಳಕಿನೆಳೆಗಳಿದ್ದಂಗೆ
ಅರಿವಿತ್ತು
ಒಮ್ಮೆಲೆಯೇ
ಕಾಲು ನೆಲಕಿತ್ತು
ಏರುತೇರುತ ಮೇಲೆ
ಆಕಾಶದಲಿ
ಕರಗಿದಳು
ನೀಲಿಯಾಗಿ!!
ಮುದ್ದ ಎದ್ದೇಳೀಗ,
ದಿನ ನಿನ್ನದೆಂದಾಗ,
ಜಗ್ಗನೆದ್ದು ನೋಡುತ್ತಾನೆ
ಸಸ್ಯಶಾಮಲೆ ಪೃಥ್ವಿ
ಜೇನು ಮಾದಕ ಗಾಳಿ
ಚಿಕ್ಕೆ ನಗೆಯಾಕಾಶ
ಹಾಲು ಹಳ್ಳಗಳು!

ಇಷ್ಟಕ್ಕೂ ಕನಸಿನಲ್ಲಿ ಕಂಡ
ರಾಜಕುಮಾರಿ?!
–ನೆನಪು ಬುಳ ಬುಳ ಹರಿಯೆ
ಅವಳೆಲ್ಲಿ?
ಅವಳೆಲ್ಲಿ?
ಒತ್ತೊತ್ತರಿಸಿ
ಸುಳಿವ ಪ್ರಶ್ನೆಗೆ
–ದೂರದಲಿ
ಅಸ್ಪಷ್ಟ ಗೆಜ್ಜೆ ಸಪ್ಪಳ
–ಉತ್ತರ

# ನಮಗೇನಿದೆ ಕೊರತೆ?

ವಿಶ್ವದಲಿ ಸು-ಭಿಕ್ಷರು ನಾವು
ಮಂತ್ರಿಗಳು ಸು-ಪುಷ್ಟ
ಹೊಟ್ಟೆಗಿಂತಲೂ ಕುರುಡೇ?
ಗೋದಾಮದ ಬೀಟು
ಮೂಷಕರ ನೋಡಿದರೆ ಸಾಲದೆ?
ಆಹಾರ ಸಮಸ್ಯೆ? – ಯಾರು ನಂಬುತ್ತಾರೆ
ಕಾಳಿಲ್ಲದಿದ್ದರೆ ಕಡಿಮೆಯಾಗುತ್ತಿರಲಿಲ್ಲವೇ
ನಮ್ಮ ರಾಜಕಾರಣಿಗಳು!
ನಮಗಾಗೇ ಕಾಲುವೆ ತೋಡಿಸುತ್ತಾರೆ
ನೆಲ ಕೊಡಿಸುತ್ತಾರೆ
ಬೀಜ ಹೊಂದಿಸುತ್ತಾರೆ
ಮಣ್ಣೊಳಗೆ ಬೆವರು ಕಲೆಸುವುದಷ್ಟೇ
ನಮ್ಮ ಕೆಲಸ
ಇಷ್ಟಕೂ – ಕೊಳ್ಳುವರು ಶುಭ್ರ
ಫಸಲು – ಅಷ್ಟೇ?
ಅಷ್ಟಾದರೂ ನಾವು
ಉಪಕಾರ ಮಾಡಬೇಡವೆ!
ನಿರುದ್ಯೋಗ – ಸಮಸ್ಯೆ ಎನುವಿರಾ!
ಅವರ ವಲಯದ ತ್ರಿಜ್ಯ ತ್ರಿಜ್ಯಕ್ಕೂ
ಸಂತಾನ-ಸಂತಾನಕ್ಕೂ
ಬಿಡುವಿಲ್ಲದ ಉದ್ಯೋಗ
ತುಂಬಿ ಚೆಲ್ಲುವ ಜೇಬು ವೇತನ !
ಯಾರೊಪ್ಪುತ್ತಾರೆ ನಿರುದ್ಯೋಗ!
ನೆರಳುವಾಸಕ್ಕೆ ಮಯ ಭವನಗಳು

ಒಂದೊಂದರೊಳಗೂ
ಇಂದ್ರನಂದನ ಮರಿಗಳು
ಬೇಸರಾದರೆ ವಿಲಾಸಕ್ಕೆ ಟಿ.ವಿ., ಗ್ರಾಮಾಫೋನ್
ಚಟಕ್ಕೆ ಪರದೆಯೊಳಗೇ ಪ್ರತ್ಯಕ್ಷ
ಅಪ್ಸರೆಯರು.
ಹಿತ್ತಲಲಿ ನೆಟ್ಟೆಲುಬು ಫಲಬಿಟ್ಟಿದೆ
ನಿಟ್ಟುಸಿರು ಗಂಟಲು ಹಿಸುಕಿ ನೆಮ್ಮದಿಯ
ಸೋಸಿದ್ದಾರೆ
ಕಾಲು ಕಂಬಗಳ ನೆಟ್ಟು ತಲೆಯಾಧಾರಗಳ
ಮೇಲೆ
ಪ್ರಗತಿ ಸೇತುವೆ ಕಟ್ಟಿದ್ದಾರೆ
ಇಷ್ಟರಲ್ಲೇ ಗ್ರಹಗಳ ಮೇಲೆ ದಂಡೆತ್ತಿ
ತಿಜೋರಿಗಳ ಸೂರೆ ಸುರಿಸುತ್ತಾರೆ
ಕಡಲು ಕಡಲೇ ಇರಲು ನೀರ ದಾಹವೇ?
ಪ್ರತಿಷ್ಠಿತ ಗೌಸಿನ ಹುಳುಕಿಗೆ ಪ್ರಮೋಷನ್
ಕೊಡುತ್ತೇವೆ
ಪ್ಲಾಸ್ಟಿಕ್ ಸರ್ಜರಿಯ ತೊನ್ನಿಗೆ
ಶ್ವೇತರಾಣಿಯ ಪಟ್ಟ ಸಿಂಗರಿಸುತ್ತೇವೆ
ತ್ರಿವಿಕ್ರಮ ಸೌಧಗಳ ಭೂಮತೆಯಲ್ಲಿ
ಝಗರಝಗಿಸಿ ಕಣ್ಣ ಕುರುಡಿಸುವ
ನಿಯಾನ್ ಲೈಟುಗಳ ಬೆಳಕಲ್ಲಿ
ಪ್ರದರ್ಶಿನೀ ವಸ್ತುಗಳ
Wonder land ಒಳಗೆ
ಅಲೈಸಿನಂತೆ ಪರಿಭ್ರಮಿಸುತ್ತೇವೆ
ಮೋಟರ್ ಸೈಕಲ್ ಗಾಡಿ ವ್ಯಾನುಗಳ
ವಿವಿಧ ಶ್ರುತಿ ಮೊಳಗಲಿ
ಮಂತ್ರ ಸ್ಥಗಿತ ಮೂಕರಾಗುತ್ತೇವೆ
ಅದ್ಭುತ ಕೃತಕ ಪರಿಸರದ ಕಣ್ ಕಟ್ಟಿನಲಿ
ಕೊರತೆ ಬೇನೆಯ ಬೆನ್ನು
ಸಿಡಿದು ಸಹಸ್ರ ಹೋಳಾದರೆ

ಬಾಯ ಬಾವಿಯ ಜೊಲ್ಲ ನೀರಲಿ
ನಾಲಗೆ ಗಿರಿಗಿಟ್ಟಲೆ ಈಜುತ್ತದೆ
ಮಳೆ ಮೋಡಗಳು ಹಾದು ಹೋಗಿರುವಾಗ
ಮಳೆಯಿಲ್ಲೆಂದು ಯಾವ ಖಾತ್ರಿ?
ಮಳೆ ಇಲ್ಲದಿದ್ದರೂ ಮಳೆ ನೆರಳಾದರೂ
ಇರುವಾಗ ಕೊರತೆಯಾಪಾದನೆಯೇ?

# ಅದಲು – ಬದಲು

ಸಿಲುಬೆಗಿಟ್ಟ ನಾಲಗೆ ಹುಣ್ಣು
ಮಾದು
ಲೊಚ ಲೊಚ ಸವಿಯಲಿ
ಸುಳಿದಾಡುತಿದೆ
ವರ್ಷಗಟ್ಟಲೆ 'ಥೂ' ಕರಿಸಿಬಿಟ್ಟ
ಬಂದೀಖಾನೆ– ಕಾಚಗಳು
ನಿರ್ಮಲಿನೀಕರಣ ಗಡಿಬಿಡಿ
ತುರ್ತು ತುರ್ತಾಗಗೆದ
ಗೋರಿ ಗುಂಡಾರಗಳೊಳಗೆ
ಬುಳ ಬುಳ ತೆವಳಿ ಮುಲುಗುವ
ಸಾಕ್ಷಿ ಜೀವಗಳು!
ದುರ್ಭೇದ್ಯ ಕೋಟೆ ಬಾಗಿಲ ಸಿಡಿಸಿ
ನುಗ್ಗಿದಾಗ
ಕಂಡದ್ದು ಹಲ್ಲೆ!
ಹುಲ್ಲೆಗಳ ಮೇಧ!
ಮೂಗು, ಬಾಯಿ
ಕಣ್ಣು ರಂಧ್ರಗಳ
ಹಂದರದಿಂದ ಹೊರಟ
ಬಿಸಿಗಾಳಿ!
ಬಡಪಾಯಿ ದ್ರೌಪದಿಯರಮನೆ ತುಂಬ
ಕೀಚಕ ಕೋಟಿ!
ಭೀಮಬಲ ರೆಟ್ಟೆಗಳೊಳಗೆ
ಭಾರ ಸರಪಳಿ
ಸೈರಂಧ್ರಿ ಹಾಸಭಾಸಕೆ
ಅನಾಯಾಸ

ಮಹಿಷಿ ಪಟ್ಟ!
ಸಾವಿರ ಸ್ಯಾಮ್‌ಸನ್ನರ
ಸಾಮೂಹಿಕ ಮುಷ್ಟಿ ಪ್ರಯೋಗ!
ಕಿರುಗುಟ್ಟಿ ಕದ ಬಿಟ್ಟಾಗ
ಬೆದರಿ ಬೋಳಾದ ಗದ್ದುಗೆ:
ಹತ್ತುವವರಿಗೆ ಹತ್ತು ಮಾತಿನ ಸ್ಪರ್ಧೆ
ಮಾಗಿದ್ದರೂ ತೊಟ್ಟು ಕಳಚದ
ಹಣ್ಣಿಗೇ ಜಯಕಾರ!
ಅಜ್ಜನಲಿ ಮೊಮ್ಮಕ್ಕಳ
ಭವಿಷ್ಯದ ಕನಸು
ಸಹರಾದೊಳಗೂ ಜೀವಗತಿ!
ಬಳಸಿ ಬಂಧಿಸಿದ್ದ ಮಂತ್ರ ಕಟ್ಟು
ಯಾವ ಪ್ರತಿ ಮಂತ್ರದಲೊ ಕಳಚಿ ಬಿತ್ತು
ತೆರೆದಾಕಾಶದೊಳಗೆ
ಸಾಲು ಹಕ್ಕಿ!
ಹಳೆಯದಾದರೂ ಅನುಭವ
ಹೊಸತು ರೋಮಾಂಚ!
ತೆರೆ ಸರಿದು
ಬಣ್ಣ ಬೆಳಕಳಿದು
ಬೆಳ್ಳಿಯ ದೀಪದ ನೆರಳಲ್ಲಿ
ಅದಲು ಬದಲು!

# ವಸ್ತು – ಸ್ಥಿತಿ

ರಸಿಕೆ ಬೊಬ್ಬೆ ನಯವಾದರೂ
ಕಲೆ, ಕೊಳೆತದ್ದರ ಕುರುಹು ಚಿರ!
ಮೈಯೊಳಗೆ ಕುಂದದ ಅಂದವಿದ್ದಾಗ
ಕ್ಲಿಯೋಪಾತ್ರ ಹೆಲೆನ್‌ರ ಸಮಾಧಿ
ನಕ್ಕ ಚುಕ್ಕೆಗಳೆಲ್ಲ ಪಾತಿ ಮಾಡಿಟ್ಟ
ನೆಲದ ಗಿಡದೊಳಗೆ ಬಿರಿವ ಮೊಗ್ಗು
ಸೂಜಿಗಲ್ಲಿನ ಕಣ್ಣೊಳಗೆ
ಕೋಟಿ ಸೆರೆ, – ಬೊಂಬೆ ಜೀವಗ್ಯಾಂಗು
ಏರಲು – ಹೆಣ ಮೆಟ್ಟಿಲೇ ಭದ್ರ
ಸಾರಿಸಲು ಗ್ಯಾಲನ್ ರಕ್ತ ಶುಭ್ರ
ತೆವಳು ಹುಳುಗಳ ತುಳಿದು ಶಿಖರಾರೋಹಣ
ನೆಲದ ಮೇಲಿದ್ದಾಗ ಭ್ರಾತೃ ಸಮತೆ
ಎತ್ತರದ ನೆತ್ತಿ ಕಣ್ಣಿಗೆ ಇಂದ್ರ ಬಿಲ್ಲು
ಕೆಳಗೆ ಬುಳ ಬುಳ ಹರಿವ ಹುಳು ಕಡಲ ಗುಲ್ಲು
ಪ್ರಳಯ ಬಿರುಗಾಳಿಯಲೂ
ಸರಳು ಸೆರೆ ಕತ್ತಲಲ್ಲೂ ಹುಣ್ಣಿಮೆಯ ಪ್ರಸರ
ಗಟ್ಟಿ ತಳ ಭ್ರಾಂತಿಯಲಿ ಒದ್ದ
ಪೆದ್ದನಿಗೆ ಶಾಸ್ತಿ
ಮೂಕ ಗಾಳಿಯ ಸುದ್ದಿ; ನಾಲಗೆ ಸದ್ದು ಸತ್ತಿತ್ತು
ಹದ್ದುಗಳಿಗೂ ಆಕಾಶದಲ್ಲಿ ಅವಕಾಶವೆಲ್ಲಿತ್ತು?
ರೆಂಬೆ ಕೊಂಬೆಗಳಿಗೆ ಜೋತುಬಿದ್ದ
ಹಕ್ಕಿಗಳೆಲ್ಲ
'ಕೀಂ' ಗುಡುವ ಮರಿಗಳಿಗೆ
ಗುಲಾಮ ಶಿಸ್ತಿನ ಮೊದಲ ಪಾಟಠಕ್ಕೆ
ಕೊಕ್ಕು ಸೀಳಿತ್ತು

ಹಣ್ಣು ಕಾಯದ ಬೀಜ ಉಗುಳಿದ
ಬರಡು ಮರಗಳಿಗೆ ಅವಾರ್ಡಬೋರ್ಡು
ಕೆಸರ ಗುಂಡಿಯ ಮೇಲೆ ತಿಳಿನೀರ ಪದರ
ಬಾಯಾರಿ ಇಳಿದಲ್ಲಿ ದುರ್ಯೋಧನನ
ಮುಖಭಂಗ
ಬೋಳು ತಲೆ ಕಂಡಾಗೆಲ್ಲ ಗಂಡನೊಡನಿದ್ದ
ವಿಲಾಸ ವೈಭವ ನೆನಪು
ನನಗೆ ಸಾಟಿಯಿಲ್ಲೆಂದು ಕುಣಿದ ಸೂಳೆಯ
ಕಾಲು ಮುರಿದಾಗ ಸೋಲುಂಟೆಂಬುದರ
ಅರಿವು ಮದ್ದು
ದಿಗ್ವಿಜಯದಹಂಕಾರದ ಅರ್ಜುನನಿಗೂ
ದತ್ತೂರಿ ಸೋಲು
ಬಕಾಸುರ ಹೊಟ್ಟೆಯೂ – ಮಿತಿ ಮೀರಿದರೆ
ಸೀಳು ಸೀಳು.

# ಗಾಂಧೀಜಿ

ದಟ್ಟ ಹೊಲಸು ವಾಸನೆಯೊಳಗೆ
ಗಂಧ ಹೆಸರಿನ ಘಾಟು ಕಡಿಮೆ
ಮೂವತ್ತಾದರೂ ನೀ ಹಡೆದ
ರಾಮ ರಾಜ್ಯದ ಕೂಸು
ತೆವಳುವುದು ಬಿಟ್ಟಿಲ್ಲ
ಕಾಲು ಬಲಿತಿಲ್ಲ
ಊನಾಂಗ ಹೋಗಿಲ್ಲ
ಅವಸರದಲ್ಲಿ ಹೆತ್ತದ್ದಕ್ಕೇ
ತಾರು ಮಾರಾದ ಗತಿ, ಗೋಳು,
ಮುಂದೆಯೂ ತೊಡೆ ಬಲಿತು
ಬೆಳೆಯುತ್ತಾನೆಂಬ ನಂಬಿಕೆಯಿಲ್ಲ
ಉಸಿರಿಂದ ಉಳಿದರೆ ಮಾತ್ರವೇ
ನಿನ್ನ ಹೆಸರು!
ನೀ ಕೊಟ್ಟ ಬಿಳಿಯ ಟೋಪಿಗಳೆಲ್ಲ
ಬಳಸಿ ಬಳಸಿ ಬಣ್ಣವಳಿದು
ಶುಭ್ರಗೊಳಿಸುವ ಶ್ರಮಕ್ಕೆ
ಕಪ್ಪು ಬಣ್ಣ ಹಾಕಿಸಿ ಬಿಟ್ಟಿದ್ದೇವೆ
ಟೋಪಿಗೂ ಕಪ್ಪು
ನಿನ್ನ ಹೆಸರಿಗೂ ಕಪ್ಪು
ವ್ಯವಹಾರ ಜ್ಞಾನವಿಲ್ಲದೆ ಅಳುವೆಯಾದರೆ
ನಿಜವಾಗಿ ನೀನೊಬ್ಬ ಬೆಪ್ಪು!
ಭೀಮ ಬಕಾಸುರರಿಗಾಗಿ
ಉಪವಾಸವಿದ್ದೆ
ಇವರ ಸುತ್ತಳತೆಗೆ ಹೆದರಿ
ಬತ್ತಲಿದ್ದೆ

ಸ್ಪರ್ಧೆಯಲ್ಲಿ ಗೆದ್ದ ನಿನ್ನ
ವಧುವಿಗೆ ಇವರದೇ ವರಮಾಲೆ
ನೀ ಗೆದ್ದೆ-
ಹಂಚಿಕೊಂಡರು ಇವರು
ಬಳುವಳಿಯ ಭವನ, ಬೊಕ್ಕಸ ಬಿಟ್ಟು
ಭಿಕಾರಿಯಾಗುಳಿದೆ
ಇವರ ಬೊಜ್ಜು ಸೊಂಪಿಗೆ
ಬಯಸಿ – ನೀ ಬಡಕಲಾದೆ
ಎದ್ದ ಬಿರುಗಾಳಿಗೆ ಹಾಯಿ ಇಳಿಸಿ
ಅದ್ಭುತ ಕನಸುಗಳನ್ನು ದಡ
ಮುಟ್ಟಿಸಿದ ಕುಶಲಿ;
ಕಲಿತಿದ್ದಾರೆ –
ಈಗ ದೋಣಿಯಾಟ!
ಅವರವರ ದಡ ಅವರೆ ಕಾಣುತ್ತಾರೆ
ಆಸ್ತಿ ಹಂಚಿಕೆಯಲ್ಲಿ
ಅಡ್ಡಿಯಾಗುತ್ತೀಯೆಂದೇ ನಿನ್ನ
ಗಡೀ ಪಾರು ಮಾಡಿದ್ದಾರೆ
ಇದ್ದರೆ ಇನ್ನಷ್ಟು ಗುಡಿಸುವ
ಪೊರಕೆಯಾಗುತ್ತಿದ್ದೆ!
ನಡೆದರೆ ಜೊಳ್ಳು ತೂರುವ
ಬಿರುಗಾಳಿಯಾಗುತ್ತಿದ್ದೆ
ಎಂದೇ –
ಗುಂಡಿಟ್ಟು ಉಸಿರ ಬಂಧಿಸಿದ್ದಾರೆ
ನೀನಿದ್ದರೆ ಈಗ
ಅಭೂತ ಕೇರಿಯ ಸರದಾರನಾಗಿ
ನೇಮಕವಾಗುತ್ತಿದ್ದೆ
ಗೌರವಸ್ಥ ರಾಜಕಾರಣಿಗಳ !
ಗುಲಾಮನಾಗಿರುತ್ತಿದ್ದೆ
ಭಾರತದ ಬಡತನದ ಪ್ರತೀಕವಾಗಿ
ಶಾಶ್ವತವಾಗುಳಿಯಬೇಕೆಂದೇ
ಶ್ರೀಮಂತನಾಗುವವರೆಗೂ ಬಿಡಲಿಲ್ಲ

ಇದ್ದಾಗಲೇ ಬೇಡವೆನಿಸಿದ್ದ ನಮಗೆ
ಇಲ್ಲದಿರುವಾಗ ಬೇಕೆಂದು ಬೇಡುವುದುಂಟೆ?
ನಿನಗಿಂತ ನಿನ್ನ ಭಾವ ಚಿತ್ರವೇ ಸಾಕು
ನಿರುಪದ್ರವಿಯಾಗಿ
ನಮ್ಮ ಸ –
ಕು –
ಕರ್ಮಗಳಿಗೆ ಸಾಕ್ಷಿಯಾಗಿರುತ್ತದೆ
ನಿನ್ನ ಹುಟ್ಟು ಹಬ್ಬಕ್ಕೆ
– ತಿಥಿಗೆ
ಒಂದೆರಡು ವಿಶೇಷ ರಜೆ ಸಿಕ್ಕುತ್ತಲ್ಲಾ
ಅದಕ್ಕಾದರೂ ಇರಲಿ – ಇತಿಹಾಸ ಪುಟಗಳಲ್ಲಿ ನಿನ್ನ ಹೆಸರು
ಯಾರಿಗೂ
ಬೇಡ, ನಿನ್ನ ನೆನಪು
ನಮ್ಮ ನಾಡಿನ 'ಮಹಾತ್ಮ'
ಯಾರೆಂದು ಹೇಳಲಿಕ್ಕಿರಲಿ
ಎರಡಕ್ಷರ – 'ಗಾಂಧಿ'
ತೊದಲಿ – ನುಡಿದು
ನಿತ್ಯವಾಗುವುದಾಗ
ಬಾಯಿಪಾಠ

## ಏನು ಹೇಳಲಿ ಗೆಳೆಯ?

ಕ್ಷಾಮ ಸಂವತ್ಸರದ ಕರಿನೆರಳು
ಹೆಡೆಬಿಚ್ಚಿ ಘೂತ್ಕರಿಸೆ
ಕ್ಷೇಮ ಪರ್ವದ ಬೆಳ್ಳಿಗೆರೆಗಳ
ಚಿತ್ರ ಬರೆಯಲೆಲ್ಲಿ?
ಋತು ಋತುಗಳು ಅರಳಿ ಉರುಳಿದರೂ
ಬದಲಾಗಲಿಲ್ಲ ಸ್ಥಿತಿಯು
ಕೊನೆಸಾಗಲಿಲ್ಲ ಗತಿಯು,
ದಿನಪತ್ರಿಕೆ ವಾರಪತ್ರಿಕೆಯ
ಕಲಮು ಕಲಮುಗಳಲ್ಲಿ
ಸಾವಿರ ಸಾವಿರದ ಸಾವುಗಳ ಸೂತಕ
ನೋವು ನಂಜನ್ನೇ ನುಡಿವುದೊಂದು ಜಾತಕ
ಆಕಾಶವನ್ನೇ ಹಿಡಿವ ಆಸೆಯಲಿ
ಆಧಾರಕ್ಕೆ ಅಟಮಟಿಸಿ
ನಿಂತ ನೆಲವಾದರೂ ಸರಿಯದಿರಲೆಂದು

ಕಚ್ಚಿ ಹಿಡಿದರು ಕೊನೆಗೆ
ಬಾಯಿತುತ್ತುಗಳು
ಅಷ್ಟರಲಿ ಆಕಾಶವಾಣಿಯ ಸುದ್ದಿ
ದೂರದಲಿ ಜ್ವಾಲಾಮುಖಿಯ ಸಿಡಿತಕ್ಕೆ
ನರ–ನಗರ–ಬೂದಿ ಬೂದಿ
ಹೆಣ ಬಣವೆ ತೋರಣ ಬೀದಿ ಬೀದಿ
ಶ್ರಾದ್ಧಕ್ಕು ಸಾಕಷ್ಟು ಮಂದಿ
ಸಾವು ರಕ್ಕಸನಿಂದ ಉಳಿಯಲಿಲ್ಲ
ಉಳಿಸದಂತೆ ಉಂಡರೂ ದಣಿಯಲಿಲ್ಲ
ಹಸಿರುಗೀತಕೆ ಅರಸಿ

ಕಾಳಸುದ್ದಿ ಸರಪಳಿ ಹಿಡಿದು
ಸಾಗುವುದರೊಳಗೆ ಸೂರ್ಯೋದಯ
ಆದರೂ ಅಂಗಳದಲ್ಲಿ ಅರಳಲಿಲ್ಲ ತಾವರೆ
ಹಿಡಿವ ಬಟ್ಟಲ ತುಂಬ
ಕುಡಿವ ಬಟ್ಟಲ ತುಂಬ
ಕಹಿಯ ಪಾನ
ಕಾದ ಮನಸಿಗೆ ಕುಡಿವ ನೀರು ಮಂಜು
ಆಪಾದಮಸ್ತಕ
ಸಣ್ಣಗೊಡೆದ ಕಂಪನದ ಮೊಗ್ಗು
ಹೀಗಿರಲುನಿನ್ನೊಡನೆ
ನುಡಿಯಲೇನಿದೆ ಗೆಳೆಯ?
ಹಸಿದು ಬಂದವರಿಗೆ
ಅಶನವೀಯಲಿ ಬೇಕು
ಹಸಿವೇ ತತ್ತರಿಸಿ ತಡವರಿಸಿರಲು
ತರಲೆಲ್ಲಿ ತಣಿಸುವ ಉಣಿಸು?
ಅತಿಥಿ ಅಭ್ಯಾಗತರು
ನನಗೂ ಪ್ರಿಯವೇ!?
ಆದರೆ ಹೊಕ್ಕುಳ ಮಕ್ಕಳ ಪಿಶಾಚ ಪೀಡೆ
ಮುಗಿವವರೆಗವರ ಕ್ಷೇಮದ
ಭೀತಿಯಲಿ ಬಂದಿ ನಾನು
ರೆಪ್ಪೆ ಹಚ್ಚಿದರುಸಾಕು
ಭೂತ ಕುಣಿತ ಭಣಿತಗಳ ಕೋಲಾಹಲ
ಅಂತರಾಳದ ಮಥನ
ಹಾಲಾಹಲ
ಚಿತ್ರ ಮಂಚದ ಮೇಲೆ
ಅಶರೀರ ಭಾವಗಳು
ನರಳಿಸುವ ಕನಸುಗಳು
ಹೇಳಿಕೊಳ್ಳಲು ಹೆಮ್ಮೆಯಲಿ
ಅರಸುತ್ತಿದ್ದೇನೆ ಆಸೆದುರ್ಬೀನು ಹಚ್ಚಿ
ಇತ್ತೀಚೆಗೆ ಹೆಚ್ಚಿರುವ
ಹಗಲು ದರೋಡೆಯ ಭೀಕರ ಸುದ್ದಿಗಳು

ನಿನಗೆ ತಲುಪಿರಬೇಕು!! ಹೌದಲ್ಲವೆ?
ಭದ್ರತೆಯ ತಂತ್ರಜ್ಞಾನ ಮಂತ್ರಜ್ಞಾನವೇ
ಅಭದ್ರತೆಯ ಭೀತಿಯಲಿ ಉಸಿರಾಡಿದೆ
ಪಟ್ಟಕ್ಕೆ ಪದವಿಗೆ ನಿತ್ಯ ಕುರುಕ್ಷೇತ್ರ
ಬೆನ್ನಲ್ಲೇ ಬಿರಿವ ಕರಿನೆರಳು
ಚುನಾವಣೆಯ ಅಬ್ಬರಕೆ
ಬೊಬ್ಬೆ ಭಾಷಣದ ಸುರಿಮಳೆಗೆ
ನೆಮ್ಮದಿಯ ಕೊಳವೇ ರಾಡಿ ರಾಡಿ
ರಾಮರೆಟ್ಟೆಯ ಬಲಕೆ ಬಂದ ಮುಪ್ಪು
ರಾವಣರ ಗೆಲುವಿಗೆ ಸಂಜೀವಿನಿ
ಬಂದವರುಹೇಗೋ ಬಂದರು
ಅಂತು ಸಾಗಿದೆ ಪಯಣ ದಿಕ್ಕು ಮರೆತು
ಹಾಳು ಪುರಾಣವ ಕೇಳಿ
ಬೇಸರವೇ ಗೆಳೆಯ?
ಆದರೂ ಹೇಳುತ್ತೇನೆ ಕೇಳು
ಮೊನ್ನೆ ಮುದುಕನ ಹುಟ್ಟುಹಬ್ಬಕೆ
ರಾಜ್ಯಕ್ಕೆ ರಜೆಯ ಘೋಷಣೆ
ಮರೆತವನ,
ಅಜ್ಞಾತದಲಿ ಆರಾಮ ಇದ್ದವನ
ಭಾವಚಿತ್ರಕ್ಕೆ ಹತ್ತಿದ್ದ
ಗೆದ್ದಲುಹುತ್ತಗಳ ಅಗೆದು ತೆಗೆದು
ಹೂ ಹಸಿರು ತೋರಣದ ಸಿಂಗಾರ
ಭಾರಿ ಭರ್ಜರಿ ಸಜ್ಜು
ರಾಮನಿರಲಿಲ್ಲವಾದರೂ
ರಾಮನಾಮದನುರಣನ
ಚಂದ್ರಲೋಕದಲೂ ಕದವ ತಟ್ಟಿತ್ತು.
ಹಾಗೇs...
ಅದೇ ತಿಂಗಳಲ್ಲಿ ಅಮ್ಮನದ್ದೂರಿ
ಶ್ರಾದ್ಧದ ಕಹಳೆ
ಮತ್ತವಳದೇ ಹುಟ್ಟು ಹಬ್ಬ
ಅಲ್ಲಲ್ಲಿ ಗೈಮೆಗಳ ಪುರಾಣ ಪುಣ್ಯಸ್ತವನ

ಇವಳ ಕಥನದ ಕಾವ್ಯದೊಳಗೆ
'ಅಕ್ಕರವನೊಂದ ಕೇಳ್ದರಿಗೆ'
ಮನೋರಥಗಳ ಮಂಜರಿ ಮಾಲೆ
ಸೊಗಡಿನ ಕುದುರೆಗಳು
ದಿಲ್ಲಿಯರಮನೆ ತಲುಪಿ ತಟ್ಟಬಹುದು
ಬಿಗಿದ ಬಾಗಿಲು ಭದ್ರ
ಅಲ್ಲಾವುದ್ದೀನನ ಅದ್ಭುತ ದೀಪದ
ಕುಡಿಯಾದರೂ ದೊರೆಯಬಹುದು.
... ಮಾ ಫಲೇಷು ಕದಾಚನ
ಎಲ್ಲಿಂದಲೋ ತೇಲಿ ಬಂದ
ದನಿಯ ಹಡಗು
ಹೊತ್ತು ಸಾಗುವುದೇನು
ದಡದವರೆಗು?
ಸಾಕೆನುವೆಯೇನು ಈ ಕಾಡು ಕವನ
ಆದರೂ ಹಾಡುವೆನು ತುಡಿವೆದೆಯ ಗಾನ
ಇಷ್ಟಾದರೂ ನೋಡು
ನನ್ನ...
ನನ್ನ ಗಂಡನ
ನನ್ನ ಮಕ್ಕಳ
ಸುದ್ದಿ ಹಾಡಲು ಇಲ್ಲ
ಹೇಳಲೂ ಇಲ್ಲ
ಹೇಳಬಯಸಿದರೂ
ಹೇಳಲೆಂತವರ ತಾಯಿಗ್ಗಂಡತನ
ಮಾನಕ್ಕೆ ಹೇಸದ ಭಂಡತನ
ಗಂಡನ ವಿಚಾರವೇ?
ಬೆಳಗಿಂದ ಬೈಗಿನವರೆಗೆ
ಕಿರಿಕಿರಿಯ ಕಂಪೆ
ಮನೆಯೊಂದು ಮುಕ್ಕಾದ ಹಾಳುಕೊಂಪೆ
ನಮ್ಮಿಬ್ಬರ ನಡುವೆ ಹರಿವುದಿಲ್ಲ
(ಹಾಲಿದ್ದರಲ್ಲವೆ ಹರಿವ ಸಮೃದ್ಧಿ?)
ದಿಕ್ಕುಗಳು ಎಂದೂ ಕೂಡುವುದಿಲ್ಲ.

ಮರಳು ದಂಡೆಗಳಲ್ಲಿ
ಮನೆಕಟ್ಟಿ
ಕಡಲೆದೆಯ ಮೇಲಿಂದೇರಿ ಬರುವ
ಒಂದೊಂದು ಅಲೆಯನೆಣಿಸುತ್ತಾ
ಅವು ಅಪ್ಪಳಿಸಿ ಅಳಿಸುವ
ಅಪಘಾತಕ್ಕೆ ಹಾದಿ ಕಾಯುತ್ತ
ಕಾಣುತ್ತಿದ್ದೇವೆ ಸಾವಿನಲಿ
ಮುಕ್ತಿ ಸಫಲತೆಯ
ಹರಿವ ನೀರಿನ ಬದುಕು ವೇಗಕ್ಕೆ
ಹೆಜ್ಜೆ ಹಾಕದ, ಉಳಿದ ವಿಫಲತೆಯು
ಹೀಗೆಲ್ಲ ಬರೆದದ್ದಕ್ಕೆ
ಬೇಸರಿಸದರ್ಥವನ್ನಾದರೂ
ಹುಡುಕಿದರೆ ಕಾಣುತ್ತೀಯೆ
ಉರಿವ ಕಿಚ್ಚಿನ ಘಾಟು'
'ನನ್ನ' 'ನಿನ್ನ'... 'ಅವನ'
ಬಿಗಿದ ಗೋಜಲು ಗಂಟು
ಸಾಕಾಯಿತಿನ್ನು
ಬರುತ್ತೇನೆ ಗೆಳೆಯ
ಬರುತ್ತೇನೆ
ಇನ್ನೊಮ್ಮೆ ನೀ ಕೇಳುವ ಪ್ರಶ್ನೆಗೇನು ಹೇಳಲಿ ಗೆಳೆಯ?

# ರಾಮಾ ನೀ ಬರಬೇಕು

ರಾಮಾ ನೀ ಬರಬೇಕು
ದಟ್ಟ ಕಾಡು
ದಂಡಕಾರಣ್ಯ
ಕುರುಡು ಕತ್ತಲು ಮೂಸೆ
ಮಿಂಚುವುದಿಲ್ಲ ತಪ್ಪಿಯೂ
ಎಳೆ ಮಿಂಚಿನಾಸೆ
ದಾರಿಗಳು ತಪ್ಪಿನ ಲೆಕ್ಕ
ಅಲೆಯುತ್ತಿದ್ದೇವೆ
ಕರಿಕಾದ ಎದೆಬತ್ತಿಗಳ ಹೊತ್ತಿಸಿ
– ಹಿಡಿದು
ದಣಿದ ಬೆಳಕನ್ನೆ
ಕತ್ತಲಿಗೊಪ್ಪಿಸಿಕೊಂಡು
ಶತಪಥಿಸಿ ಸೋತಿದ್ದೇವೆ
ಜೋಮು ಹತ್ತಿದ ಬೆರಳ
ನೆಟಿಕೆ ಮುರಿದು
ಸುಂದು ಬಿಡಿಸುತ್ತಿದ್ದೇವೆ
ನರಳುವ ಗಾಳಿಪಿಸುಗುಟ್ಟಿದ
ಕತೆಯ ವಾಸನೆಗಳ ಬೆನ್ನು ಹತ್ತಿ
ಹಿರಿದಾದ ಪಡೆಯೊಂದು
ಮುತ್ತಿ ಬಂದಿದೆ ನಮ್ಮ
ಕಾಮರೂಪಿಗಳವರು
ಕದ್ದು ವೇಷವ ಮರೆಸುತ್ತಾರೆ
ನಮ್ಮ ನಮ್ಮೊಳಗೇ ಬೆರೆತು
ನಂಜು ನೈವೇದ್ಯಕ್ಕಿಡುತ್ತಾರೆ
ನಾಲಗೆಯ ಸೀಳಿ ನಂಬಿಕೆ

ಬೆನ್ನಿಗೆ ಶೂಲವಿಟ್ಟು
ಸಂತಾಪದಲಿ ಸಣ್ಣಗೆ
ಕಣ್ಣೀರ ಕೋಡಿ ಹರಿಸಿ
ಕಡಲುಬ್ಬಿಸಿ ಉಸಿರೊತ್ತಿ
ನೀರು ಕುಡಿಸಿ – ಮುಳುಗಿಸಿ
ಕಪ್ಪು ವಸ್ತ್ರಗಳೊಳಗೆ ಖುಷಿಪಟ್ಟು
ಗೋರಿ ನೆಲಗಳ ಅಗೆದು
ಶ್ರದ್ಧಾಂಜಲಿಯಿಂದಲೇ
ಗುಡಿಸಿ ಸಾರಿಸುತ್ತಾರೆ
ನಮ್ಮಡಿಯಿಂದ ಹಾದಿಗಳ ಸೋಸಿ
ತಲೆಯ ಚಪ್ಪರ ನೆರಳ
ಕೊರಳ ಕತ್ತರಿಸುತ್ತಾರೆ
ಬದುಕಿರುವಂದೇ
ನಮ್ಮ ಗೋರಿಗಳ ಗಡಿಯ
ಗುಟ್ಟಾಗಿ ಗುರುತಿಸಿ
ಬೇಲಿಗಳ ಕಟ್ಟುತ್ತಾರೆ
ನಮ್ಮದೇ ಮುಖವಾಡಗಳಲ್ಲಿ
ಕಳುವಾಗುತ್ತಿದ್ದೇವೆ ನಾವು
ನಾಳೆ 'ನಾವೆ'ನ್ನುವುದು
ನೆಲದ ಪೊರೆ
ದಂಡಕಾರಣ್ಯದ
ದರಿದ್ರ ಗುಹೆ
ಹಿಮದ ಮರೆ – ಯೊಳಗೆ
ಕರಗಿ ಉಳಿಯುವುದೊಂದು
ಪಳಿಯುಳಿಕೆಯಾಗಿ
ಕಾಣಬಾರದ ನಿನ್ನ ಗುರಿ
– ನೀನು
ಕೇಳ ಬರುವುದೆ ನಮ್ಮ
ಅಳಲು ಭೀತಿಯ ಗೀತ?
ನಮ್ಮ ನೋವಿನ ಬಸಿರು
ಹಣ್ಣಾಗಿ ಸಿಡಿಯಲಿದೆ

ಲಯದ ಬೀಜ
ಬೂಜುಗಟ್ಟಿದ ನಿನ್ನ
ಕೋದಂಡವನ್ನೊಮ್ಮೆ
ಠೇಂಕರಿಸಿ –
ಬೆಂಕಿ ಬಾಣವನೊಮ್ಮೆ
ಹೂಡಿ ಬಾ ಬೇಗ
ಬೂದಿ ಜೀವನದ
ಅಂತರಾಳದಲಾಗ
ಚಿಮ್ಮಿ ಹೊಮ್ಮಿತೇನೋ
ಜೀವಗಂಗೆ –
ಜೀವಗಂಗೆ

# ಶಂತನು ಕಂಡ ಸತ್ಯವತಿಯ

ಹೊಲಸು ವಾಸನೆ ಮೈಯೊಳಗಿಂದ
ಎದ್ದ ಗಂಧದ ಹೊಗೆ ಪ್ರಭಾವಳಿಯ
ಹಿನ್ನೆಲೆಯಲ್ಲಿ
ನಗುವ ನೆಲ ಬಳ್ಳಿ
ಅರಳಿ ನಿಂತ ಮರದ ತಲೆ ತುಂಬ
ಸೊಡರು ಹೂವಿನ ಹೊಗರು
ಗಾಜು ನೀರಿನ ಗಂಗೆಯಂಗದಲಿ
ರೋಮಾಂಚನದ ಅಲೆಯುಬ್ಬರ
ತುಟಿಯ ನಗೆ ಮೇಲೊಂದು
ಮಿಂಚಿನ ಸಂಚು
ಪಿಸು ಮಾತಿನಲಲೆವ ತೊದಲು ಗಾಳಿ
ಹೂಬಳ್ಳಿ ಹಕ್ಕಿ ಕೊರಲಿನ ದನಿಗೆ
ಪ್ರಣಯದೊಂದು ಮುತ್ತಿನ ನತ್ತು
ನುಣ್ಣನೆದೆಯ ರಂಗದ ಮೇಲೆ
ನಡೆದಿತ್ತು ನಿಸರ್ಗದ ರಾಸಲೀಲೆ
ಕಂದರದಾಳದಿಂದೆದ್ದ ರತಿ ಪುರುಷರ
ಕೊರಲಿಂದ ಹರಿದ ಜೇನುಗಾನದ ಸೆಲೆಗೆ
ಎದೆಯ ಭಾವಗಳೆದ್ದು ಮಿಡಿದಿತ್ತು
ನೂಪುರದ ಸದ್ದು

ಟೊಂಗೆ ಟೊಂಗೆಯೊಳಗೂ
ಅರಳಿತ್ತು ವಿರಹ ಗೀತದ ಗುಚ್ಛ
ಬರತ ಮನ ಹೊರಳಿ ನರಳಿ ನಡೆದಂತೆ
ಸಂಜೀವಿನಿಯ ತಂಪು ತುಂತುರಿಗೆ
ಕೋಟಿ ಕಾಮನೆ ಕೆರಳಿ ಜೀವ ಪಡೆದು

ಬುಳ ಬುಳನೆ ಹರಿದಾಗ
ಮಧುರ ಬೇನೆ
ಹೆಜ್ಜೆ ಹೆಜ್ಜೆಗೂ ಕನಸುಗಳ
ಬಿತ್ತುತ್ತ ನಡೆದ
ಶಂತನು ತನುವಿನಲಿ
ಕುದಿವ ಕಾವಿಗೆ
'ಕಾಮಿ' ತಾರ್ಥಗಳೆಲ್ಲ ಕರಗಿ
ಹರಿದು –
ಬತ್ತಿದ ನೆನಪು
ಜಗ್ಗೆಂದು ಉರಿದು ಬೆಳಗಿ
ಶೂನ್ಯವೃತ್ತದ ಒಳಗೆ
ಪರಿಭ್ರಮಿಸಿ ಸಿಡಿದಾಗ
ಮೂಕ ನೋವು
ಅಮ್ಮನಾಗಬೇಕಾಗಿದ್ದ 'ಅವಳು'
ಒತ್ತರಿಸಿ
ಬಂಧಗಳ ಗಡಿದಾಟಿ ಹರಿವ
ಮಮತೆ ಹಾಲಿಗೆ
ಕೀವು ಹಿಂಡಿ
ಹೊಡೆದ ಕುಡಿಗಳ ಹೊಸಕಿ
ಕುಕ್ಕಿದ ಕಾಠಿನ್ಯಕ್ಕೆ
ಕದಡದ 'ಕಾಮಿ' ಮನಸಿನಲೂ
ಚಿಗುರಿದ ಪಾಪದರಿವಿಗೆ
ಉಳಿದದ್ದು
ವಂಶದುದ್ಧಾರಕ್ಕೆ
ಒಂದು ಜೀವ
ಒಂದು ಭಾವ
ತೆರೆಯಿತಂದೇ ಅವನ
ವಿರಹದೆದೆ ಕದ ಕಿಟಕಿ
ಸತ್ತ ಪ್ರಣಯದ ಗೋರಿಯಾಳದೊಳಗಿಂದ
ಎದ್ದ ಹೆಣ್ಣ ರೂಪದು ಮೈಯ
–ಪಡೆದು

ಗಂಗೆಯಂಚಿನ ಕುಟಿಯ
ಒಳಗೆ ಹೊರಗೆ ಚಾಚಿತ್ತು
ಬೆಳಕು ಸೆಳಕು
ಒಡಲ ಗಂಧವು ಒಗೆದು
ಮುಗಿಲ ಮೂಗಿನ ತನಕ
ಮುಗುಳು ಕಣ್ಣಿನ ದೀಪ
ದಳವ ಬಿಡಿಸಿತ್ತು
ಹರಿವ ಹಾವಿನ ಬಂಧವೂ
ಸೊದೆಯ ಸವಿಯುಣಿಸಿತ್ತು
ಜೊಲ್ಲು ನಾಲಗೆ ಮನಸು
ತಣಿದು ಚಪ್ಪರಿಸಿತ್ತು
ಸುಳಿದಂತೆ ತಂಗಾಳಿ
ಒಡಲ ಮಾಂಸಕೆ ಕಿಚ್ಚು ಹತ್ತಿ
ಕಳೆದುಕೊಂಡ 'ಅವಳ' ನುಭವ
ಧುತ್ತೆಂದು ಹೊತ್ತಿ
ಕಚಗುಳಿಯಿಟ್ಟು
ವಿದುರ ವೈರಾಗ್ಯದ ಬೇಲಿ
– ಹಾರಿ
ಹೊರಗೆದ್ದು ಬಂದ
ಹೂಗಂಧ ಗಾಳಿಯ ಬೆನ್ನೇರಿ
ಹೊರಟಿತ್ತು
ಶಂತನು 'ತನು' ಅರಸುತ್ತಾ
ಅರಸುತ್ತಾ
ಸುಖದ ಬುತ್ತಿ

## ಉಗಾದಿ ಪುರುಷನಿಗೆ

ನಗೆಯ ಮುಕ್ಕಿ
ಮುಗುಳ ಕುಕ್ಕಿ
ಬಂದೆಯೇನ ಇಂದು?
ಚೆಲ್ಲಿ ಹರುಷ
ವರುಷ ವರುಷ
ಹೊಸತು ಹೊಗರು
ಹಣ್ಣು ಹೂವು ಕಾಯಿ
ತಂದು ತಣಿಸಿ
ಉಣಿಸಿ ಉಣಿಸಿ
ಹಸಿವು ಮರೆಸಿ
ತೀವಿದೊಲುಮೆ ಮಾತನುಡಿಸಿ
ಕಣ್ಣು ತುಂಬೆ ಬರದೆ ಈಗ
ಬಂದೆಯೇನು ಸೊರಗಿ ಕರಗಿ?
ನೋವು ನಿನ್ನ ಸೋಂಕದೆಂದು
ಮುಪ್ಪು ಸಾವು ಇಲ್ಲವೆಂದು
ಲೆಕ್ಕ ಹಾಕಿ ಒಲಿದೆ ನಿನ್ನ
ಯಾವಾತ್ಮ ಸಾಕ್ಷಿಗೆ ಹೆದರಿ
ಭರವಸೆಗೆ ಬೆದರಿ
ಇಂತೇಕೆ ಕರಗುತಿಹೆ?
ಜೀವ ದ್ರವ ಬತ್ತಿಸಿಹೆ?
ಉತ್ಸಾಹ ಸಂಭ್ರಮದ
ತೂಗು ತೆಂಗುಯ್ಯಾಲೆ
ಚಂದ್ರಿಕೆಯ ಶಯ್ಯೆಯಲಿ
ಹಾಯಿ ಜೋಗುಳ ಹಾಡಿ
ಅಮ್ಮನಕ್ಕರೆಯ ಅಪ್ಪುಗೆಯ

ಹಿತದ ಸೊಗಗಳನೆಲ್ಲ
ಸವಿವ ನೀನು
ಸ್ವಸ್ಥ ಮೋಹಕ ರೂಪ
ಹೊತ್ತು
ಹೂಕಂಪಂತೆ ಹಗುರಾಗಿ
ನಮ್ಮ ಬಾಳಿನ 'ಭೂತ'
–ದೆದೆಯೊಳಗೆ ಹುದುಗಿಟ್ಟು
ಕಾಮನ ಬಿಲ್ಲ ಕನಸುಗಳ
ಬಿಡಿಸುತ್ತಾ
ಮಧುರ ದನಿಗಾಳಿಯಲೆಗಳ
ಮೀsssಟಿಕೊಂಡು
ಮೋಜಾಗಿ ಮುದವಾಗಿ
ಸೊಗವಾಗಿ ಸೊದೆಯಾಗಿ
ಬರುವೆಯೆಂದೇ ನೀನು
ಹಾದಿ ಕಾಯುತಲಿದ್ದ
ಹುತ್ತ ಕಣ್ಣುಗಳೇಕೆ?
ಬತ್ತಿದಾಸೆಗಳೇಕೆ?
ಚೆಂದುಟಿಯಸೇತುವೆಯ
ಮೇಲೆ
ಸಾವು ಭೀತಿಯ ನೆರಳು
ಕದಡಿ ಬೆಚ್ಚಿದೆ ಮೊಗವು
ಕವಿದ ಮೋಡಗಳೆದೆಯ ಸೀಳಿ
ಮಿಂಚ ತಂದು
ನನ್ನ ಮನೆಯಂಗಳದಿ
ಪಾತಿ ಮಾಡಿದ ಭವಿಷ್ಯಕ್ಕೆ
ಆಸೆ ಗೊಬ್ಬರವಿಟ್ಟು
ಹುಲುಸಾಗಿ ಬೆಳೆಸುವೆಯೆಂದೇs
ನಿರಾಶೆಯಿರಿತಗಳ
ಬೇಸರದ ಬಲು ಸೆಡಕುಗಳ
– ನುಂಗಿ
ತಣ್ಣsಗೆ

ವರುಷದಿಂದಲೂ ಕಾದೆ
ಕಾಯುತ್ತಲೇs ಇದ್ದೆ
ಹೋದ ವರುಷದ 'ಕನಸುಗಳ'
ಜೋಪಾನವೆಂದಿರಿಸಿ
ಕಚಗುಳಿಯಿಟ್ಟು
ಬರುವವರೆಗೂ ನಗುತಿರೆಂದು
ಸಂಜೀವಿನಿ ಗುಳಿಗೆ ಕುಡಿಸಿ
ಹೋದವನು ಇಂದೇಕೆ?
– ಹೀಗೇಕೆ?
ಅಸ್ವಸ್ಥ ಬಂದೆ?
ಉಪ್ಪು ಕಡಲಿನ ಕೊಡವ
ತುಂಬಿ ತಂದೆ?
ಸಂತಾಪ ವೇಷಗಳ
ಉಟ್ಟು ನಿಂದೆ?

## ಗೊಮ್ಮಟವನ್ನು ಕಂಡಾಗ

ಹಕ್ಕಿ ಕೂಗನು ಏರಿ
ಆಕಾಶ ಬಯಲೊಳಗೆ
ಅಂಡಲೆದು ದಣಿದ ಸೂರ್ಯನ
– ಮೋರೆ
ಕೆಂಪು ಪಿಚಕಾರಿ ಬಣ್ಣ ಪರದೆ
– ಹಿನ್ನೆಲೆಗೆ ನಿಂತ
ಗೊಮ್ಮಟನ ಎದೆ ಭಾವ
ತುಟಿಯ ಕೋಲ್ಮಿಂಚು
ಮೇರೆ ಮೀರಿದ ಅಳತೆ
ಗಾತ್ರಕ್ಕೆ ಮೂಡಿದ
ಮೈಯ ಮೋಹಕ ಮಾಟ
ಮನದೊಳಗೆ ಕಚಗುಳಿ
ನಗ್ನ ಜೀವ ಭಾವಗಳ
ಪ್ರತಿಮಿಸುತ
ಭೂಮ 'ಪುರುಷತ್ವ'ಕ್ಕೆ
ಕತೆಯಾಗುತ
ಕನವರಿಸಿ ಕೆರಳುವ
ಕಾಮಗಳ ವಿಪ್ಲವಕೆ
ನಿರ್ವೇದ ಭಾವದಲಿ
ನಗೆಯಾಡುತ
ನನ್ನೊಳಗೆ ಕುಳಿತ
ಕಳ್ಳ ಖದೀಮರಪರಾಧಗಳ
ಬಟಾಬಯಲು ಮಾಡಿ
ನಿಂತಲ್ಲೇ ನೀರಾಗಿ
ನೆಲದಾಳದೆದೆಯಲ್ಲಿ

ನೆಲೆಗೆ ಸರಿದೆ.
ಅಸ್ವಸ್ಥ ಚಿತ್ತದಲಿ
ಅನುರಣಿತ ಭೀತಿಯಲಿ
ಹುತ್ತದಲಿ ಹೊಕ್ಕ ಹಾವ –
ಕೊಲೆಯತ್ನದಲಿ
ತೀರ್ಥ ಪ್ರಸಾದದ ಪುಣ್ಯಕೂ
ಕೈ ಚಾಚಿದೆ
ಮೆಟ್ಟಿಲು ಮೆಟ್ಟಲಲ್ಲೂ
ಗೊಮ್ಮಟನ ಕನಸನೆಮ್ಮಿ
ರಾಗಕ್ಕೆ ಕಿಚ್ಚಿಟ್ಟು
ಕಾವಿ ಭಾವಗಳ ತೊಟ್ಟು
ಹೊರಟ ಜೀವದ
ಸರಸಿನೊಳಗೂ
ಬಿರುಗಾಳಿಯಲೆ ಕೆರಳಿ
ಕೆದರಿದ ಕೆಸರ ಜಿಗುಟಿಗೆ
ಜಾರಿ ಬಿದ್ದವಳೆದ್ದು
ನವಿಲು ಕುಣಿದ
ನಾಚಿಕೆಯ ನೀಟಾಗಿ
ಸಂವರಿಸಿದೆ

ಹೆಜ್ಜೆ ಹೆಜ್ಜೆಯು ಸೋತು
ಸಾವ ನೋವಿನಲಿ ನರಳಿ
ಮುಗಿಯಲಿಲ್ಲವನಿಗೆ
ಮನವು ಅರಳಿ
ನುಡಿಸಲಿಲ್ಲವನ ಕೀರುತಿ
ನನ್ನೆದೆಯ ಮುರಳಿ
ರಾಜಭೋಗದ ಕಡಲೊಳಗೆ
ಕಾಮಿನಿಯ ಸಂಗ ಸುಖ ನೌಕೆಯಲಿ
ವಿಹಾರ ವೈಭವವೊದ್ದು
ಭಗವಂತನಾಗಬೇಕೆಂದು
ಬೆತ್ತಲೆಯ ಹೊದ್ದು

ಬೆಟ್ಟದಲಿ ಸೆರೆಯಾಗಿ
ಬೆಳಕಿನಲಿ ಮರೆಯಾಗಿ
ನಿಂತುದಕೆ ನಾ ಕೊಟ್ಟೆ
ಶ್ರದ್ಧಾಂಜಲಿ ರಾಧೆ ಭಾವಕೆ ಸಂದವಳು
ಕೃಷ್ಣ ರಾಸವನೊಲದೆ
ಕಸುಗಾಯ ಕಹಿ –
ವೈರಾಗ್ಯ ವಿಸ್ತರಕೆ
ಉಳಿಯಲಾರದೆ ಉಳಿದು
ನಮೆದ ಕಾಲ ಕೀಲನು ತಬ್ಬಿ
ನಡೆಯುತ್ತ
ಇಳಿಯುತ್ತ
ಗೊಮ್ಮಟನ ನೆತ್ತಿಯೆತ್ತರದಿಂದ
ಸಿಡಿದು ನೆಲ ಬೇರಿಗೆ
ನಂಟು ಬಿದ್ದೆ
ಅಂಟು ಬಿದ್ದೆ
ಕತ್ತಲು ಕವಿದ
ಕಣ್ಣಂಚಿನಲ್ಲೇ
ಸಾಗ ಬೇಕಾದ ದೂರ
ಸೇರಬೇಕಾದ ತೀರಗಳ
ಮೊಗೆ ಮೊಗೆದು
ಅಳೆದೆ ಅಳೆಯುತ್ತಲೇ
ಉಳಿದೆ

# ಮದುವೆ ಮಾಡಿದರೋ ನನಗೆ

ಮದುವೆ ಮಾಡಿದರೋ ನನಗೆ
ಮದುವೆ ಮಾಡಿದರು
ಕಂಡಿರದ ಕಾಮನಿಗೆ
ಕನಸಿನಾ ರಾಮನಿಗೆ
ಭಂಡನಲ್ಲದ ಭೀಮನಿಗೆ
ಕರೆದೆನ್ನ ಕೊಟ್ಟು ಮಾಡಿದರೊ ಮದುವೆ

ಮದುವೆ ಮಂಟಪದೊಳಗೆ
ಮೊಲ್ಲೆ ಮುಗಿಲ ಚಪ್ಪರವಿಕ್ಕಿ
ರಸಿಕ ರಸ ಮಂಚಗಳ ಬಿಡಿಸಿ
ಮುರಿದ ಮನ ಭಾವಗಳ ಗುಡಿಸಿ
ರಸಗುಲ್ಲ ರಾಗಗಳ ತುತ್ತೂರಿ ನುಡಿಸಿ
ಅನುದಿನವು
ಅನುಕ್ಷಣವು
'ಅವನು' 'ಅವನು' – ಎಂದು
ತುಡಿಸಿದ ತುಂಟ ಮದುಮಗನ ತಂದು
ಮದುವೆ ಮಾಡಿದರೋ ನನಗೆ !!

ಮೂರು ದಿನ ಮಳೆ ಮೋಡವಿಲ್ಲ
ಹಗಲು ರಾತ್ರಿಗಳಲ್ಲೊ
ತೊಳೆದಂತೆ ಹೊಳೆವ
ಕನ್ನಡಿಯಾಕಾಶ ಸರಸಿ
ನಡುವೆ ನಗುನಗುತಿರುವ
ಚಂದ್ರ ತಾವರೆ ಕೆಂಪು
ಅಂಗಳದ ಮಂಗಳ ರಂಗ ಮಂಚದ ಮೇಲೆ

ಕುಣಿವ ಕಿನ್ನರ ನಾಟ್ಯ
ಗೀತ ಕಂಪು

ಇಂಥ ಕನಸಿನಲೋಕ
ಅಂಗೈಲಿ ಇಳಿಸಿದ
ಇನಿಯನೊಲುಮೆಯಲಿ ಬಿಗಿದು
ಮದುವೆ ಮಾಡಿದರೋ

ಒಂದೆರಡು ಮೂರು...
ಸಂಖ್ಯೆಗಳ ಸರಿದಂತೆ
ದಿನಗಳೂ ದಣಿದಂತೆ
ವರುಷಗಳು ಮಣಿದಂತೆ
ಋತುಮಾನದೊಳಗೆ ತಿರುಗು ಮುರುಗು
ಮಾತುಮಾತಿಗೆ ಸಿಟ್ಟು ಸೆಡವಿನ ಸಿಡಿಲು

ಮೌನ ಮಂಜಿನ ಚೂರಿ ಇರಿತ ನೋಟ
ಅವನ ಆವೇಶದಬ್ಬರಕೆ
ಎದೆ ನಡುಗಿ ದನಿಯಡಗಿ
ಕಪ್ಪು ಕಣ್ಣಿನ ಮೋಡದಲಿ
ಮಳೆಯೊಡೆದು
ಧುಮುಕುವುದು ಜೋಗ ಜಲಪಾತ

ಮುನಿಸು ಮುಂದಾಗಿ
ದುರ್ಬೀನು ಹಚ್ಚಿ
ಮೊಸರೂಟದಲಿ ಕಲ್ಲು ಹೆಕ್ಕಿ ತೆಗೆವ
ಸರದಾರ ಧೀಮಂತನಿಗೆ
ಮದುವೆ ಮಾಡಿದರೋ ನನ್ನ
ಚಳಿಯೊಳಗೆ ಬಿಸಿಲಾಗಿ
ಬಿಸಿಲೊಳಗೆ ಮಂಜಾಗಿ
ಸಂಜೆಯಲಿ ನಂಜಾಗಿ
ಹಾಲೊಳಗೆ ಹುಳಿಯಾಗಿ

ಬೆರೆತು ಬೆರೆಯದ ದಂಡೆಗಳು ಎರಡಾಗಿ
ಹರಿವ ಬದುಕಿನ ಬಣ್ಣಗಳನೆಣಿಸುತ್ತಾ
ನಾನಿರುವ ದಿಕ್ಕ ಮರೆತು
ದಕ್ಕದಂತರದಲ್ಲಿ ನಿಂತು ನಡೆವನ
–ತಂದು
ಮದುವೆ ಮಾಡಿದರೋ ನನಗೆ
ಗಂಡೆಂಬ ಗರುವಂಗೆ
ಕೆಂಡದೊಲೆ ಉರಿವಂಗೆ
ಹೆಂಡತಿಯೆಂದರೆ – ಹೆಡೆಯುಡಿದ ಹಾವಂಗೆ
ಇರಬೇಕಂತ ಸಾರುವಂಗೆ

ಸ್ತ್ರೀ ಮುಕ್ತಿ ಸ್ತ್ರೀಯುಕ್ತಿ
ಸಲ್ಲದೆಂದೆನುವಂಗೆ
ಪತಿಭಕ್ತಿ ಪರಮಾರ್ಥ ಬೋಧಿಪಂಗೆ
ಸರಸದಲಿ ಸಂಗವನು
ಬಯಸಿ ಬಂದವಳಿಂಗೆ
ವಿರಸದಲಿ ಬಿರುಸಾಗಿ ಬಿಗಿದು
ಮಲಗಿ ಮುಸುಕೊದ್ದವಂಗೆ
ಮದುವೆ ಮಾಡಿದರೋ ನನಗೆ
ಮದುವೆ ಮಾಡಿದರೋ ॥
ಸಾವಸಾಗರದೊಳಗೆ
ಭೀತಿ ಭೂತದ ಅಲೆಗೆ
ಢೀ ಡಿಕ್ಕಿ ಹೊಡೆದೆಲ್ಲೊ ದಿಕ್ಕು ತಪ್ಪುವ ಗಳಿಗೆ
ಕಣ್ಣು ಮಿಟುಕಿಸಿ ಕರೆದು
ದಂಡೆ ತೋರುವುದಿದುವೆ –
ಎಂದೆನುತ ಕಿಸಕೆನಲು
ಸಾವಿರದ ಸಾಗರ ದೀಪದೆದೆಯೊಳಗೆ

ಮಿಂಚಿನೇರಿನ ಜಗುಲಿಯಲಿ
ಕಲ್ಲರಳಿ ಕೂತವಗೆ ಮದುವೆ ಮಾಡಿದರೋ ॥

# ಅಮೀಬ

ರಾತ್ರಿ ಹಗಲುಗಳೆಷ್ಟೋ
ಬೆನ್ನಹಿಂದೆ ಭೂಗತವಾದಾಗ
ಎದ್ದು ನೋಡುತ್ತೇನೆ
ಹಂದರದ ಆಧಾರ ಕಳೆದ ನಾನು
– ಅಮೀಬ

ನನ್ನ ಅಮೀಬತನಕ್ಕೆ
ನಾನೆಷ್ಟೋ ಖುಷಿಪಟ್ಟು
ಕಾಮಾಂಗಿಯಗಿ
ಪ್ರಪಂಚದ ಪ್ರಜ್ಞೆಗಳಷ್ಟಕ್ಕೂ
ನನ್ನೆದೆಯ ಮಿಡಿದೆ
ನನ್ನದೆಲ್ಲವ ನುಡಿದೆ
ಹಮ್ಮು ಬಿಮ್ಮುಗಳಿಲ್ಲದ
– ಗಾಂಧಾರಿಗಿಂತಲೂ
– ಮೀರಿದ
ಅಕ್ಷಯ ಶ್ರೀಮಾತೆ ನಾನು !!
'ಭಾರತ' ಕಲಹಗಳ ಹುಟ್ಟು ಹಾಕಿದ
ದುಷ್ಟ ದುರ್ಯೋಧನನಿಗಾಗಿ
ಹುಟ್ಟಿದನೊಬ್ಬನೇ ಕೃಷ್ಣ
'ಒಳ'ಗಿಲ್ಲದ ನನ್ನೊಳಗಿನ ಬಯಕೆ
ಬಳ್ಳಿ ಚಿಗುರೊಡೆದರೆ ಸಾಕು
ಕೋಟಿ ಕೃಷ್ಣರಾದರೂ
ಕೌರವರಾದರೂ
ಜಗಜಗಿಸಿ ಅರಳಿ ತೊನೆಯುತ್ತಾರೆ
ಒಮ್ಮೆ ಹೀಗಿ ಒಮ್ಮೆ ಹಾಗೆ

ಸೊಗವ – ನುಟ್ಟು
ಮೊಗವ ತೊಟ್ಟು
ಬುದ್ಧಿ ಬಲೆಗೆ ಸಿಲುಕದುಳಿದು
'ಕಾಮರೂಪಿ' ಕನಸನೇ
ನನಸುಗೊಳಿಸುವೆ
ನಾನೆ ಗಂಡು
ನಾನೇ ಹೆಣ್ಣು
ನನ್ನೊಳಗೇ ಗಂಡು ಹೆಣ್ಣು
ನಾನು ದ್ವೈತ
ನಾನದ್ವೈತ
ದ್ವೈತಾದ್ವೈತದ ವಾದಾಮೋದಕೆ
ನಾನೇ ದರ್ಶನವು
ದಿವ್ಯ – ದರ್ಶನವು

# ಮಂಡೂಕೋಪನಿಷತ್ತು

ಓ ಮಾರುತ ಬಾರೈ ಮಳೆಯ ತರುತ
ಬತ್ತಿದ ಹೊಳೆಗಳ ಬಾಡಿದ ಗಿಡಗಳ
ಕುಂದಿದ ಮನಗಳ ಹಿಗ್ಗಿ ಸುತಾऽऽ
ಸೊಕ್ಕಿಸುತಾऽऽ
ಬಂಜೆ ನೆಲಗಳ ಬಸಿರ ಹಲಗಲು
ಮಂಜಿನೆದೆಗಳಲಿ ಬಿಸುಪನಿಳಿಸಲು
ಅಳಿವ ಸೃಷ್ಟಿಯನುಳಿಸಿ ಬೆಳೆಸಲು
ಬಾ ನಿನ್ನ ವೈಭವದ ಮೊಳಗಿನಬ್ಬರದೊಳಗೆ –
ಕಾऽದು ಕೂತಿದ್ದೇವೆ
ಕಾಮಿತಾರ್ಥಗಳ ಪಟ್ಟು ಬರೆದು –
ಧನ್ಯರಾಗುತ್ತೇವೆ
ನಿನಗೆ ಬರೆದು
– ಎಂದು
ಕರೆಕರೆದು ಬೇಡಿ ಹಾಡಿದ
ಪರ್ಜನ್ಯ ಮಂತ್ರೋದ್ಘೋಷಕ್ಕೆ
ಮನದೊಳಗೆ ಮಳೆ ಮರುಗಿ
ಉಧೋ ಉಧೋ ನಾದದಬ್ಬರದಲ್ಲಿ
ಧುಮ್ಮಿಕ್ಕಿ –
ಉಕ್ಕಿ –
ಸೊಕ್ಕೇರಿ
ಮರೆದ ಕೆರೆ ಕೊಳದಡಿಯಲ್ಲಿ
ನಡೆದಿತ್ತು ನಾಲ್ಕು ದಿಕ್ಕಿಗೆ
ಸಂಭ್ರಮದಿ ಸಂತೆ ಕೂಡಿದ

ಮಂಡೂಕ ಮೇಳ
ಟರ್‍ರರರ ಟರ್‍ರರರ ಉಲಿವ ರಾಗಕ್ಕೆ
ನುಡಿ ನುಡಿದು ನರ್ತಿಸಿತು
ಗೆಜ್ಜೆ ತಾಳ
ಬತ್ತಿ ಬರವಾದ ಕೆರೆಗಳ
ವಾಸಕ್ಕೆ ಬೇಸತ್ತ
ಮಂಡೂಕ ತಂಡ
ಇದ್ದಲ್ಲಿ ಇರದೆ
ನಿಂತಲ್ಲಿ ನಿಲದೆ
ಚಡಪಡಿಸಿ – ಗುಡುಗುಡಿಸಿ
ಕುಪ್ಪಳಿಸಲಾಗದಸಹಾಯಕತೆಗೆ
ಹಳ ಹಳಿಸಿ
ಬಾಲವಲ್ಲದ ಬಾಲವನ್ನೇ
ಪಟಪಟಿಸಿ
ಲಟಲಟಿಸಿ
ಹಲ್ಲು ಮಸೆದು
ಕೆಚ್ಚು ಕೆರಳಿ
ರೆಪ್ಪೆಯಿಲ್ಲದ ಕಣ್ಣುಗಳ ಮೀಟಿ
ಆಕಾಶದ ಗೂಟಕ್ಕೆ ಬಿಗಿದು
ಮರುತ ಮಂತ್ರೋಚ್ಚಾರ –
ನಿದ್ರಾಸಮಾಧಿ ಮುದ್ರೆಗೆ ಮಣಿದು
ಸುರಿವ ಮಳೆಯ ಸುಗ್ಗಿಗೆ ಹಿಗ್ಗಿ –
ಕೆರೆಯಿಂದ ಕೆರೆಗೆ ಹಾರುವ
ಕಸರತ್ತುಗಳು ಮರುಕಳಿಸುತ್ತವೆ
ಹಿಂದಿಗಿಂತ –
ಇಂದಿನ ಮಳೆಯ ಉರುಬಿಗೆ
ಮತ್ತೇರಿ
ಸೊಕ್ಕಿದ
ಲಕ್ಷೋಪಲಕ್ಷ ಕೆರೆಗಳೆದೆ ತೆರೆದು
ಕರೆದಾಗ
ಕಾದು ಕಾಯಿಟ್ಟು ಕಣ್ಣು ಹಣ್ಣಾಗಿ

ರಸಕವಳ ಕನಸುಗಳು ನೀರೂರಿ
ಊಡಿಸಿದ
ಆಡಿಸಿದ ನೆನಪುಗಳು
ಕಳೆದ ಕತೆಯಾಗಿ
ಹಳಸಲು ಹಾಡಾಗಿ
ಒಂದರ ಹಿಂದೊಂದರಂತೆ
ಕೆನೆಕೆನೆದು ಕುಪ್ಪಳಿಸಿ
"ಈ ಕೆರೆಗೆ,
ಗ್ರೀಷ್ಮದ ಕಾಟವಿಲ್ಲ" ಎಂಬ
ಭ್ರಮೆಯ ಹಲ್ಲಣದ ಭಾರಕ್ಕೆ
ಬಳಲದೆಯೆ
ಬೆಂದೆದೆಗಳಿಗೆ
ತಂಪನರಸುತ್ತ
ಸಾಗುತ್ತವೆ ದಂಡು ದಂಡು
ಪಠಿಸುತ್ತವೆ ಪರ್ಜನ್ಯ ಮಂತ್ರಗಳ ಮತ್ತೆ ಮತ್ತೆ
ಬತ್ತಿದ ಕೆರೆಗಳಸ್ಥಿ ಪಂಜರದೊಳಗೆ
ರಕ್ತ ಮಾಂಸಗಳೊಡೆದು
ಸಜಲದುಬ್ಬರ
ಕಲನಾದ ಗೀತಕ್ಕೆ
ಮನವ ತೆರೆದು
ಬಿಸಿಲಭೀತಿಯಲೂ
ಹೊಳೆವುದೆಲ್ಲೊ
ತಂಪಿನ ಕಿರಣ
ಬದುಕು ತಟ್ಟುವುದಲ್ಲಿ
ಸುಖದ ಅನುರಣನ

## ಅಕ್ಟೋಬರ್ ೩೧

ಇಂದು ಸೊಕ್ಕಿದ ಸೂರ್ಯನೆದೆಯಲ್ಲೂ
ಹೆಪ್ಪುಗಟ್ಟಿತ್ತು ಕೆಂಪು
ತಿಳಿಯಾಗಸದ ತುಂಬ ಅಸ್ಪಷ್ಟ ಅವಾಂತರಗಳ
ಸಂಚಾರದೋಟ
ಸಾಗಿತ್ತು ರಭಸದಲಿ
ದಣಿವು ಮರೆತು
ಮೌನದಾ ಕಡಲೊಳಗೆ?
ದಾವಾಗ್ನಿ ಹಡಗು
ಅನಿಷ್ಟ ಸರಕಿನ ಭಾರ
ಅಪ್ಪಳಿಸಬಹುದು
ಯಾವ ದಡಕೋ
ಅಭಯ ಹಸ್ತದ ಅಸ್ತಮಾನಕ್ಕೆ
ಬೆದರು ಕಂಗಳ ತುಂಬ ಶ್ರದ್ಧಾಂಜಲಿ
ಕಲಸುಮೇಲಾದ ದಿಕ್ಕೊಳಗೆ
ದಿಕ್ಕನರಸುವ ದುರ್ಬಲ ನೋಟ
ಮುಳುಗಿ ಮುಕ್ಕುಳಿಸುವ ಬಿರುಗಾಳಿಯಲ್ಲೂ
ದಂಡೆ ಮುಟ್ಟಿಸಿದವಳ ಜಾಣವೇಷದ ಮೋಡಿಗೆ
ಮಾರಿಕೊಂಡ ಮನಸು
ಊರು ಗೋಲಾದದ್ದು ಅವಳ ಕನಸು
'ಇದ್ದಾಗ ಇದ್ದಾಂಗ ಅನಿಸಲೇ ಇಲ್ಲ!'
ಬಿದ್ದಾಗ ಬೇಕೆನುವ ಬಯಕೆ ಕುದುರೆ
ಉರಿಗಣ್ಣು ಬೆಂಕಿ ನಾಲಗೆಯೊಡಲಲ್ಲಿ
ಕರುಣೆ ಸೆಲೆ ತಂಪಿನಲಿ ತೇಲಿದವರೆಷ್ಟು ಮಂದಿ?
ಚೂರಿಮಾತಿನ ತಿವಿತಕ್ಕೆ ತಡಬಡಿಸಿ
ಮುರಿದು ಬಿದ್ದವರೆದೆಯ 'ಮರು'ವಲ್ಲಿ

ಒಡೆದಿತ್ತು ನೋವಿನಂಕುರ ನೂರು
ಹೂವೊಡಲ ತಳದಲ್ಲಿ
ಶಿಲೆಯ ಮನಸು
ಮನೆಮಂದಿ ಮಕ್ಕಳಾಸೆದಾರಗಳೆಲ್ಲ
ಇವಳುಡುವ ಸೀರೆ ನೂಲು
ಹೆಗಲ ಭಾರಕ್ಕೆ ಜಗ್ಗದಿವಳ ಕಾಲು
ಸರಿದಲ್ಲಿ ಸೆಟೆದು ನಿಲ್ಲುವುದಲ್ಲಿ
ಮೈಲಿಗಲ್ಲು
ವಿಸ್ತಾರ ಕಡಲ ಪಾತಳಿ ಮೇಲೆ
ಅನಿರ್ಬಾಧ ಚಲಿಸುವುದಿವಳ
ನಿರ್ಭೀತ ಹಡಗು
ಬಂಡೆಯಾಗೊಮ್ಮೊಮ್ಮೆ
ಚಂಡಮಾರುತದೆದೆಗೆ
ಒದೆವಾಗಲೆಲ್ಲ
ಹೊಗರುಗಟ್ಟುವುದಾಗ ಬೆರಗು
ಬೆರಗು
ಹೆಜ್ಜೆಯೂರಿದ್ದಲ್ಲೇ
ನೆಟ್ಟು ನಕ್ಕವಳಿವಳು
ವಿಜಯದ ಪತಾಕೆ
ದಣಿದ ಜೀವಗಳೆದೆಗೆ
ಮಂತ್ರ ಸಂಜೀವಿನಿಯ
ಮಣ ಮಣಿಸಿದವಳು
ರಕ್ತ ಬೀಜಾಸುರರೂ
ರಕ್ತ ಕಾರಿ ಸಾಯುವುದಕ್ಕೆ
ಮಹಿಷಮರ್ಧಿನಿವೇಷ
ಕಟ್ಟಿ ಕುಣಿದವಳು
ಕೋಟಿ ಮಕ್ಕಳ ತಾಯಿ
ಕೂಳೆ ಬಿದ್ದವರನ್ನು
ಮರೆತದ್ದೂಽಽ ನಿಜ
ತರಿದದ್ದೂಽ ನಿಜ
ಹಿತ್ತಲ ಬೇಲಿಯೊಳಗೇ ಬೆಳೆದು

ಮುಳ್ಳು ಗಿಡಗಳ ಮೇದು
ಭಟ್ಟಂಗಿ ಭಾವದಲಿ
ಬಾಗಿಲಲಿ ಕೈಮುಗಿದು
ಕಾದವರ ಕರೆದು
'ಬಾಲ್ಕನಿಯ ಬಂಧು' ಪಟ್ಟವಕಟ್ಟಿ
ಸವತಿ ಸಮಭಾವದಕ್ಕರೆ
ಸಕ್ಕರೆಯ ಸವರಿದರೂ
ಕರಗಿತ್ತು ಕಲ್ಲು
ಮುರಿದಿತ್ತು ಮುಳ್ಳು
ದೂರ ಮೂಲೆಗಳಲ್ಲೂ
ಬೇಕು ಬೇಕೆನಿಸಿತ್ತು
ಇವಳ ಜೀವ
ಇವಳ ಭಾವ
ದಿಕ್ಕುಗಳು ಬಿಕ್ಕಿದವು
ದಾರಿಗಳು ತಪ್ಪಿದವು
ಮಾಸಿದ ಬೀದಿಗಳಲ್ಲಿ
ತಬ್ಬಲಿ ಜೀವಗಳಲ್ಲಿ
ಶೂನ್ಯ ಕನಸುಗಳೊಡೆದು
ನಾಳಿನರ್ಥಗಳ ಅರಸುತ್ತಾ
ಸಾಗಿತ್ತು ಗಳಿಗೆ
–ಗಳಿಗೆ

## ವಚನಗಳು

೧

ಕಾಯ ಕಂದಿದರೇನು?
ಮೈಯಿ ಮುದುಡಿದರೇನು?
ಮನಸು ಮುನಿದರು ಏನು?
ಕನಸು ಕುಸಿದರು ಏನು?

ಉಣದೆ ಉಪವಾಸವಿದ್ದರೇನು?
ಉಡದೆ ಬತ್ತಲಿದ್ದರೂ ಏನು?
ಗಾಣದೆತ್ತೋಲು ದುಡಿದು
ದಣಿದು ಸವೆದರು ಏನು?
ಮನೆಯ..
ಮನೆಯೊಡೆಯನ ಚಿಂತೆ ಭಾರಕ್ಕೆ
ಹೆಗಲುಡಿದು ಹೆಣವಾಗಿ
ಮಣ್ಣೊಳಗೆ ಮರೆಯಾಗಿ
ನನಗೆ ನಾನೇ 'ಬರ'ವಾಗಿ ಏನಾದರೇನು?
ಕಾಸಿಲ್ಲದೂಳಿಗದ
ನೊಗ ಭಾರ ಹೊರುವನಕ
'ನಾನು' 'ನನ್ನದು' ಚಿಂತೆ
ಕಾಡುವುದಿಲ್ಲಯ್ಯ ಇವಗೆ

೨

ನಿಂದೆನಯ್ಯಾ ನೊಂದೆನಯ್ಯಾ
ಹಿಂದುದೆಲ್ಲವ ಕಳೆದು ದಿವಾಳಿಯಾಗಿ
ಆಪತ್ತಿಗೊಂದಿಷ್ಟು ಹರುಷವನ್ನು ಇಡದೆ

ಸಂತಸದ ಬೆಟ್ಟಗಳ ನೆಡುವನೆನ್ನೊಳಗೆಂದು
ನೆಚ್ಚಿ ಮೆಚ್ಚಿ ಬಂದೆನಯ್ಯಾ
ಬಂದಿವನ ಬಾಳ ತುಂಬಿರಲೆಂದು
ಕೂಡಿ ಕುಣಿದೆನಯ್ಯಾ
ಹರಯವೇ ಜಾರುವ ಮುನ್ನ
ಅಗಿದಗಿದೂ ನಂಜನಷ್ಟೂ ನಂಜಿಕೊಂಡು
–ಉಂಡೆನಯ್ಯಾ
ಅಪ್ಪ ಅಮ್ಮರ ಭೀತಿ ಬೇಲಿಯೊಳಗೇ ಇದ್ದು
ಇದ್ದುದಷ್ಟನ್ನೂ ಕಳೆದುಕೊಟ್ಟು
ಸ್ವಚ್ಛಂದ ವೈಹಾಳಿ ರೋಮಾಂಚದನುಭವಕೆ
ಚಿಗರೆಯೊಲು ಎಗರುತಲಿಬಂದೆನಯ್ಯಾ

ಬಂದಿವನ ತೆಕ್ಕೆ ಬಂದಿಯಾಗಿ
ತೆಕ್ಕೆಯೇ ರೆಕ್ಕೆಗಳ ಕತ್ತರಿಯಾಗಿ
ಬಯಲೇ ಭದ್ರ ಪಂಜರವಾಗಿ
ಪಂಜರದ ಸರಳ ಭದ್ರತೆಗೆ
ಹದ್ದು ಗಣ್ಣಿನ ಕಾವಲ ಸೀಮೆಯೊಳಗೆ
ಮಿಡಿ ಮಿಡಿವ ಎದೆಯ ದುಗುಡದ ಬಿಸಿಗೆ
ಕರ ಕರಗಿ ಕನಸಿನಂತೇ ಅಳಿವ
ನಾಸ್ತಿಸ್ಥಿತಿ ನಾನಾಗಿ ಉಳಿದೆನಯ್ಯಾ!!

# ನನ್ನ ಹುಡುಗ

ಚಿಗುರು ಮೀಸೆ ಬಟ್ಟ ತಲೆಯ
ನನ್ನ ಹುಡುಗನ ಪ್ರೀತಿ
ಅಪ್ಪಿಕೊಂಡರೆ ಮೆತ್ತಿ ಕೊಳುವ
ಬೆಕ್ಕಿನ ರೀತಿ

ನೆರೆಯವರನ್ನು ಪ್ರೀತಿಸು
ನಿನ್ನ ಶತ್ರುವನ್ನು ಪ್ರೀತಿಸು
– ಕ್ರಿಸ್ತನಂತರ್ವಾಣಿಗೊಲಿದು
ಮಾರ್ದನಿಸಿ
ಒಂದೊಂದು ಜೀವದ ಹುಟ್ಟೊಳಗೂ
ಹುಡುಕುವ ದಿವ್ಯದರ್ಶನ
ಪೂತ ಚೇತನ,
ನನ್ನಾದರ್ಶ ಆಕಾಂಕ್ಷೆ ಗುಡಿಸಲ ಮೇಲೆ
ಸುಳಿಗಾಳಿಗೂ
ಕುಳಿರ್ಗಾಳಿಗೂ ಇವ –
ರೆಕ್ಕೆ ಬಡಿಯುವ ಕೇತನ
ಕಲ್ಲು – ಮಣ್ಣು – ಕಣ್ಣು – ಹೆಣ್ಣು
ಹಾವು – ಹೂವು – ಬೇವು – ಮಾವು
ಗಾಳಿ ಗೂಳಿ – ಹುಲಿ – ಕಲಿ
– ಹೀಗೆಷ್ಟೋ ಒಳಗೊಂಡ
ಅವನ ಪ್ರೀತಿಯ ವೃತ್ತ
ಹಿರಿದಾಗ
ಬಿರಿದಾಗ
ಅಂದವಾದರೂ
ಅಪರೂಪಕ್ಕೆ ಬೆಳೆದ

ದಟ್ಟ ಪೊದರಿನ ಗಡ್ಡದಾಕಾಶದೊಳಗೆ
ವಿದ್ಯುದಾಲಿಂಗನದ ರೋಮಾಂಚ
-ಮಿಂಚುಗಳು
ಕೆನೆಯುತ್ತವೆ
ತೊನೆಯುತ್ತವೆ
ಕಾರ್ಲ್‌ಮಾರ್ಕ್ಸ್‌ನ 'ಕ್ಯಾಪಿಟಲ್' ಮೇಲೆ
ಬುದ್ಧಿ ಕಸರತ್ತುಗಳ ತೋರಿ
ಗಳಿಸಿದ ಲಾಭವನ್ನೇ ಹಂಚ
ಹೊರಡುತ್ತಾನೆ
ಬಳಲುತ್ತಾನೆ

ಕಮ್ಯೂನಿಸಂ ಸೋಷಿಲಿಸಂ
ಫ್ಯಾಸಿಸಂ ನಾಜಿಜಂಗಳ
ನಡುಗಡ್ಡೆಗಳಲ್ಲಿ ಸಂಚರಿಸಿ
ಸಮಾಜೇತಿಹಾಸದ ಕಡಲಲ್ಲಿ
ಡುಬುಕಿ ಹೊಡೆದು

ಸೂತ್ರ ಮುತ್ತುಗಳ ಹೆಕ್ಕಿ ತೆಗೆದು
ಒಂಟಿಯಾಗಿ-
ಗಂಟು ಬಿದ್ದಾಗ
ಹೆಗಲಕೊಕ್ಕೆಯ ಇಳಿದ
ಬಗಲ ಚೀಲದೊಳಗಿಂದ
ತಡಕಿ ಹುಡುಕಿ
ತೆಗೆ ತೆಗೆದು ಪೋಣಿಸಿ
ಪ್ರೀತಿಗೆಂದು
ನೀತಿಗೆಂದು
-ಅದೆ ಅವನ ವರಮಾಲೆಯೆಂದು
ನುಡಿಯುತ್ತಾನೆ
- ನನ್ನ ಹುಡುಗ

***

ನೆಲ ತಾಕದ ಕನಸುಗಳ
ದುಂಬಿ ಕುದುರೆಗಳೇರಿ

ಓಡುವ ರಭಸಕ್ಕೆ
ಹಿಗ್ಗಾಮುಗ್ಗಾಗಿ
ಗಿರಕಿ ಹೊಡೆದು
ಉರುಳುವ ಚೀತ್ಕಾರಕ್ಕೆ
ಮರಳಿ ಮಣ್ಣೊಳಗೆ
ಉಸಿರ ಅರಸುತ್ತಾನೆ
ಹಸಿದ ಕಂಗಳ ಬಸಿದ ಹೆಂಗಳ
ತೊಗಲು ಜೀವಿಗಳ
ಸೋರಿಹೋದ ಆಸೆ ಹಣತೆಗಳಲ್ಲಿ
ಹೊಸ ಬತ್ತಿಗಳ ಹೊಸೆದು ಉರಿಸುತ್ತಾನೆ
– ಕಲಿತ ಇಸಮುಗಳ ರಸಹಿಂಡಿ
ರಸಕವಳ ಕನಸುಗಳ
ಕಾಮಧನು ಮೋಹಗಳ
ಉಸಿರ ತೊಟ್ಟಿಲಲಿಟ್ಟು
ತೂಗಿ ಹಾಡುತ್ತಾನೆ
ನನ್ನ ನೆಚ್ಚಿನ ಹುಡುಗ
ಮೆಚ್ಚಿನ ಹುಡುಗ
ಲೆಕ್ಕವಿಲ್ಲದ ಕೋಟಿ
ನನ್ನ ಬಂಧುಗಳೆದೆಯ
ಗುಡಿಯ ಗೋಪುರವಾಗಿ
'ನಾ ಮೆರೆಯಬೇಕೆಂದು'
ಬದುಕು ಬರಿ ಬಯಲೊಳಗೆ
ಬಾಡದ
'ಜೀವಗಂಗೆ'ಯ ಪೂರ ನಾನಾಗಬೇಕೆಂದು
ನುಡಿನುಡಿಯುತ್ತಲೇ
ನನ್ನೊಳಗೇಽ
ನನ್ನ ಕನಸು –
ಮನಸುಗಳ ಕೊಚ್ಚಿ
ಕರ ಕರಗಿ
ಲಯವಾಗುತ್ತಾನೆ;
ಲಕ್ಷ್ಯವೇ ತಾನಾಗುತ್ತಾನೆ
– ನನ್ನ ಹುಡುಗ

# ಒಮ್ಮೊಮ್ಮೆ ಹೀಗಾಗುತ್ತಾನೆ

ತಡೆರಹಿತ 'ಬಿಜಿ'ನೆಸ್‌ನ ನಡುವೆ
ಹಗಲು ರಾತ್ರಿಗಳಲ್ಲಿ
ಎಂದಾದರೊಮ್ಮೆ ಬಿಡುವು ಬಾಗಿಲು ಬಡಿದಾಗ
ಭೂಮಿಯಿಂದಾಕಾಶಕ್ಕೆ
ಜಿಗಿದು
ಪ್ರೇಮ ಪ್ರಣಯಗಳ
ಸರಸಿಯ ತಡಕಾಡಿ
ಕೈಕಾಲು ಬಡಿದು
ತೇಲುವ ಇವನೊಳಗೆ
ಕೊನರುವುದು
ಕವಿತೆ ಹಾಡುವ ಕೆಚ್ಚು
ಕಾವ್ಯ ಕೋಶಗಳ ಭೂತಗನ್ನಡಿಗಿಕ್ಕಿ
ಅಲ್ಲೊಂದು ಇಲ್ಲೊಂದು
ಸರಸರನೆ ಹರಿದು
ಹುತ್ತ ಸೇರುವ ಪದಕೀಟಗಳ
ಹೆಕ್ಕಿ
ಗಾಳಿಯಲ್ಲಿ ತೇಲಿಬರುವ
ಬಣ್ಣ ಗರಿಗಳ ನೂರೆಂಟು
ಶಬ್ದಗಳ
ಶಬ್ದ ಚಿತ್ರಗಳ
ತ್ರಾಸವಿಲ್ಲದೆಯೆ
ಪ್ರಾಸದ ಗೆಜ್ಜೆಕಟ್ಟಿ
ಕುಣಿಸುತ್ತಾನೆ ನನಗೊಂದು –
ಕವಿತೆ
ಇಂದು ವದನೆ

ಕುಂದರದನೆ
ನಡೆವ ನಿನ್ನಡಿಯ ಧೂಳಿಪಟವಾಗದೆ
ದೂರದಲಿ ಸಂಕ್ಷೇಮ ಸುಖಿಯಾಗದೆ
ನೀನಿಲ್ಲದೆ ನಿಟ್ಟುಸಿರಿಟ್ಟ ರಾತ್ರಿಗಳ
ಲೆಕ್ಕ ಕೊಡಲೇನು ನಿನಗೆ?
ಎದ್ದಾಗ ಬಳೆ ಸದ್ದಾಗದೆ
ದೊಡ್ಡ ಸುದ್ದಿಯ ಮಾಡುತ್ತಲೇ
ಕದ್ದು ಕಾಫಿ ಕುಡಿದು
ಗೆದ್ದಲು ಹತ್ತಿದ
ಜೋಲು ಮುಖದ
ಜೂಲು ನಾಯಿಯಂತೆ
ಹಿಂಬದಿಯ ಸೆರಗ ಹಿಡಿದೇ
ಸುತ್ತಿಕೊಂಡು
ಸುತ್ತಾಡುತ್ತಲೇ ತೆಕ್ಕೆ ಹಾಕಿಕೊಂಡದ್ದ
ಹಾಡಲೇನೆ ನಿನಗೆ
ದೊಡ್ಡ ದನಿಯೊಳಗೆ?
ಮುದ್ದಿಗೊಮ್ಮೆ 'ಮರಿಯಾನೆ' ನೀನೆಂದಾಗ
ಮೂರು ತಿಂಗಳು ಮುನಿದು
ತವರಿನಲಿ ತಲೆ ಮರೆಸಿಕೊಂಡವಳು
ಮುಂದಿನ ಮನೆಯ ಮೀನಾಕ್ಷಿ ಮುಡಿಯಲ್ಲಿ
'ನಮ್ಮ' ಮನೆಯಂಗಳದ
'ಮಲ್ಲೆ' ದಂಡೆಯ ಕಂಡು
ಕೆಂಡವಾಗಿ
ಕೆರಳಿ
ನರಳಿ
ನೋಟದೀಟಿಗಳೆಸೆದು
ಹಿಮದ ಚಳಿಯಲ್ಲೂ
ಬೆವರಿಸಿದ ಬಲ್ಮೆ
ನೆನಪ ಗುಹೆಯೊಳಗಿಹುದು ಇನ್ನೂ ಽಽ ಭದ್ರ
ಬಿರು ಬಿಸಿಲಾಗು
ಬೆಂಕಿಯಾಗು

ಮೈಯ್ಯಡಿಯ ಮೆತ್ತನೆ ಹಾಸು
ಬೆಂಕಿ ಮುಳ್ಳಾಗಿ
ಹೊನಲು ಕವಲಾಗಿ ಸೀಳುತ್ತದೆ
ಭೂತ ಬೇನೆಯ ಗುದ್ದು
ನೆನಪಾಗಿ –
ಬೆಳಕು ಕಣ್ಣು ಮುಚ್ಚುತ್ತದೆ
ಬಿರಿದರಳುಮುದುಡಿ
ಮುಗುಳಾಗುತ್ತದೆ
ತುಟಿಯ ರಂಗಿಳಿದು
– ಅಳಿದು
ಬಿಳಿ ಜಿರಲೆಗಳಾಗುತ್ತವೆ
ಬಣ್ಣದಾಲೋಚನೆಯ
ಚಿಟ್ಟೆ ರೆಕ್ಕೆಗಳುರಿದು
ಎದ್ದಂತೆಯೇ ಬಿದ್ದು
ಸಾವಿನೂಟದ ವ್ಯಂಜನವಾಗುತ್ತವೆ
ನಿಟ್ಟುಸಿರಿನಾಲಂಬಕ್ಕೆ ಅಂಟಿಕೊಂಡ
ಜೀವಕ್ಕೆ ಫಕ್ಕನೆ ಮಿಂಚಿ
ದಾರಿ ಮಾಡುತ್ತದೆ
ನಾಳೆ ನನ್ನ ಹಾಸಿಗೆ ಖಾಲಿ
ತೆರೆದ ಕಿಟಕಿಗೆ ತೆರೆ ಬೀಳುತ್ತದೆ
ನನ್ನ ಪಾಲಿನ ಕಪ್ಪು ರಾತ್ರಿಗಳ
– ಬಸಿರಿಂದ
ಬೆಳಕು ಬೆಸಲಾಗಿ ಹರಿವಂತೆ
ಮತ್ತೆ ತುಂಬುತ್ತದೆ
'ನನ್ನ' ಹಾಸಿಗೆ ಮಂಚ
ನಾನುಂಡ ಸೊಗಸಿನೂಟಕೆ
– ಬಂದ ಅತಿಥಿಗಳು
ನನ್ನಂತೆಯೇ ಮರಳುತ್ತಾರೆ
ಮತ್ತಿಲ್ಲಿ ಬಾರದ ಆಸೆ ಹೊತ್ತು
ನನ್ನ ಕಿಟಕಿಯ ಸ್ನೇಹದ
ನೆನಪನುತ್ತು

ನನ್ನೊಂಟಿತನದ ಭೀತಿ ಬೇಸರದಲ್ಲಿ
ನೂರೆಂಟು ನೋಟಗಳ
ಕಥೆಯ ನುಡಿದು
ಕನಸು ತಿನಿಸುಗಳ
ಸವಿಯನಿತ್ತು
ಆಸೆ ಮಂದಾರಗಳ
ಗಂಧ ಪರಿಮಳವಿತ್ತು
ನನ್ನಾಸರೆಗೆ ನಿಂತ
– ಕಿಟಕಿ
ಸ್ನೇಹದಲಿ ನಕ್ಕು
ನವಿರಾಗಿ ಕೈಬೀಸಿ
'ಹೋಗಿ ಬಾ' 'ಹೋಗಿ' ಬಾ
ಹೋಗದಿರು ಬರಲೆಂದು –
– ಎಂದುಸಿರಿ
ತುಂಟಾಟದಲಿ ಕುಟುಕುತ್ತದೆ
ಕವಾಟ ರೆಪ್ಪೆಗಳ ಮಿಟುಕುತ್ತದೆ

# ತಬ್ಬಲಿ

೧

ಅಂಟು ಪ್ಲಾಸೆಂಟ ಮೈ
ಅರೆತೆರೆದ ತುಟಿಗಳಿಗೆ
ಹಾಲು ಹಿತ ಹತ್ತುವಲ್ಲೇ
ಸಿಡಿಲ ಚೂರಿಯ ಇರಿತ
ಹಸಿ ಹಸುಳೆ ಕೊರಳಿಗೆ ನಂಜು ನೇಣು
ರೆಕ್ಕೆ ಬಲಿಯುವ ಮುನ್ನ
ಬಿರುಗಾಳಿಯಾಟದಲಿ
ಬಂಡೆಗಪ್ಪಳಿಸದೇ ಬಿದ್ದ
'ವೈಶಂಪಾಯನ'
ಹಾರೀತ ಬರವಿಗೆ
ಹಾದಿ ಕಾದು – ಕಾಽಽದು
ಕನಸು ಕಾಯನೆ ಕಚ್ಚಿ
ತೆವಳುತಲೆ – ಉಳಿದ
ಆಕಾಶ – ಅಗಲವೆಂದು
ಅಪ್ಪ –
ನುಡಿದ ನೆನಪು
ಕತ್ತಲೆಯ ಜೋಗುಳದಿ
ಕಾಮನ ಬಿಲ್ಲ ಗುಟುಕರಿಸಿ
ಕವಿದ ಕುರುಡನೆ ಮರೆತು
ಉಸಿರಾಡಿದ
ಕಾಸು ಕವಡೆಯನೊಂದಿಲ್ಲದೆ
ಬಿಟ್ಟಿ ಬೀಳುವ ಮಳೆಯ
ಹನಿಗಳೌದಾರ್ಯದಿ
ಗಾಳಿಯಾಟದಿ ಸುಖದಿ

ಬಲಿತು
ಕಲಿಯಿತು ರೆಕ್ಕೆ ಬಾನ ಬಡಿದು
ವಿಸ್ತಾರ ರಸ್ತೆಗಳ
ಭೂಮಿ ಬಯಲಿನ ಶೋಧ
ಸಾಗಿತ್ತು ಹಡಗೊಂದು ಕೊಲಂಬಸ್ಸನ

೨

ಶಿಸ್ತು ಬೇಲಿಯ ದಾಟಿ
ಸ್ವಚ್ಛಂದ ವೈಹಾಳಿ
ಲೆಕ್ಕವಿಲ್ಲದ ಪಾಠ
ಬಾಯಿಪಾಠ
ಕಲಿತ ಕಲೆಗಳು ಎಲ್ಲ
ಮಿದುಳ ಕೋಶದಲೆಲ್ಲೊ
ಭದ್ರ ಬಂದಿ
ಹೆಜ್ಜೆ ಹೆಜ್ಜೆಗು ಎದ್ದ
ಅನುಭವದ ದಂಡುಗಳ
ಆತ್ಮರಕ್ಷಣೆಗುಳಿಸಿ
ಕಂಡವರ – ಗದ್ದೆ ತೋಟಗಳಲ್ಲಿ
ಲಫಂಗ ಹೋರಿ
ಬಿದ್ದ – ಉಂಡೆ – ಬಾಸುಂಡೆಗಳು
ಬಾರುಕೋಲಿನ ನೋವು
ಕೆರಳಿತ್ತು
ಕೆಣಕಿತ್ತು
– 'ಗಂಡು' ತನವ
ಬಂಡಾಯ ದಂಡಾಯಗಳಲ್ಲಿ
'ಬದುಕು ಕ್ಷೇಮ' –
ನೀತಿ – ಸಿದ್ಧಾಂತದ
ಅನುರಣನತಾನಕ್ಕೆ
'ತಬ್ಬಲಿ' ಗಾನಕ್ಕೆ
ಮನವುಮಿಡಿದಿತ್ತು –
ಮೌನವೇ ನುಡಿದಿತ್ತು
ಅಸ್ತು – ಅಸ್ತು

# ಮುಕ್ತ ಕಾಮಿ

ತಣ್ಣೀರ ತೊರೆ
ತಪ್ತ ಮನಸಿಗೆ ತಂಪು
ಸಾವಿನಾಚೆಗಿನ
ಸದ್ಗತಿಯ ಕಾಮಿಗಳು
ಮೃತ್ತಿಕೆಯ ಮುಗ್ಧ ನಂಬಿಕೆಯಲ್ಲಿ
ಚಕ್ರಸುಳಿ ಆಸೆ ಬೊಗಸೆಗಳಲ್ಲಿ
ಅಪೌರುಷೇಯದ
ಅವತರಣ ತಪಸು !
ನಗ್ನ ಜೀವದ ಹೊದಿಕೆಯಾಚೆಯ
ಅದೃಶ್ಯ ಆತ್ಮಗಳ
ಸಂತೃಪ್ತಿ ಬಯಕೆ
ತೀರಾಸೀನ ಭಟ್ಟ ಪೌರೋಹಿತ್ಯ
– ಮಾಧ್ಯಮದನೂಲೇಣಿಯೇರಿ
ನರಳು ನರಕದ ನೆಲೆಗೆ
– ಲಗ್ಗೆ ಹತ್ತಿ
ದಿಗ್ವಿಜಯ ದುಂದುಭಿಯ
ಧ್ವಜವನೆಟ್ಟು
ಇಂದ್ರ ಸಮ್ಮತದತ್ತ
ಸ್ವರ್ಗಪೀಠದೆಡೆ ನಡೆದಿತ್ತು
ಆರೋಹಣ
ಸಿನ್ನು ಮೊಟ್ಟೆಗಳೊಡೆದು
ಗಂಗೆಯಲಿ ಬಿದ್ದಂತೆ
ಕರ್ಣ ಸಂತಾನದ ಸೃಷ್ಟಿ ಸಂತೆ
ಮಂತ್ರ ಘೋಷಾಕ್ಷತೆಯಲಿ ಮುಳುಗಿ ಮೂರಾಗಿ
ಮುಕ್ತಿ ಕನಸಿನ ಹಡಗು
– ದಂಡೆದೂರ
ಹೊತ್ತ ಸರಕಿನ ಹೊಲಸು
– ಮಂಗಮಾಯ!!

## ಕುಬ್ಜೆ

ಮಣ್ಣು ಮುಸುಕಿನ ಮೂಲೆ
ತೇಲಿ ತೆವಳುವ ಹುಳುವು
ಬೆಳ್ಳಿ ಬಂಗಾರ ಕನಸುಗಳ
ಬಳ್ಳಿ ಮಾಡ
ನೆಲದ ಪದರದ ಕಿಟಕಿ
ಆಚೆಗೂ ಹಬ್ಬಿರುವ
ಆಕಾಶಕೇರಲು – ಬಯಕೆ ಏಣಿ
ಕೋಟಿ ಹುಟ್ಟನು ದಾಟಿ
ಬೆನ್ನಲ್ಲೆ ಬಂದ
ನಿಟ್ಟುಸಿರ ಸೂರ್ಯನ ಮೋರೆ ಪರಚಿ
ಬತ್ತಲು ಕತ್ತಲ ಕೈದಿ ಬದುಕಿನ ಕಾಲು
ಕೀವುಗಟ್ಟಿದ ಬಾವು
ಕುತ ಕುತನೆ ಕುದಿವ ಬಗೆಯ ನೋವು
ಬೆನ್ನ ನೊತ್ತಿದ 'ಭೂತ' ಭಾರಕ್ಕೆ
ಹೂತ ಉಸಿರು
ಚಕ್ರ ಸಾಗದು ಮುಂದೆ
ಬರಿಯ ಕೆಸರು
ಉಪ್ಪು ನೀರಿನ ಕುಂಟೆ
ಕಡಲಾಗಿ ಕೊಚ್ಚಿದ್ದ ನಗೆಯ ನಾವೆ
ತೇಲುತ್ತ ತೇಲುತ್ತ
ದಂಡೆ ಬಂಡೆಗೆ ಬಡಿವ ಭೀತಿ ನೆರಳು
ಉರಿಯನುಂಡರು ಸುಡದೆ
ಉಸಿರಾಟ ಲೀಲೆಯಲಿ ಉಳಿದಿತ್ತು ಕರುಳು
ಕೊರೆವ ಆಸೆಯ ಕೀಟ
ಅಂಗುಲಂಗುಲವಳಿದು

ಮಣ್ಣ ಪದರವು ತಪ್ಪಿ
ಕೆಳಗೆ ಬಿತ್ತು
ಗಗನ ಚುಂಬನಕಾಗಿ
ಸ್ಪರ್ಧೆಯೋಟದಲೀಗ
ದೊರೆತದ್ದು ಬಹುಮಾನ
ಗಾಳಿ ಮಣ್ಣು
ಅಸ್ವಸ್ಥ ಚಿತ್ತ – ಹುಣ್ಣು ಕಣ್ಣಿನ ಮೈಯಿ
ಹೆಜ್ಜೆ ಇಡಲೆಡೆಯಿಲ್ಲ
ಗಾಳಿ ಹಡಗಿನ ಪಯಣ
ಅಂಡಲೆವ ದಣಿವು
ಅಂಕೆಯಿಲ್ಲದ ಸೊನ್ನೆ
ಇಂದಿಲ್ಲ ಮುಂದಿಲ್ಲ
ಇಲ್ಲ ನೆನ್ನೆ
ಚಾಚಲಾಗದ ಕೈಯಿ
ಬೆಳೆಯಲಾಗದ ಬಾಳು
ಹುಟ್ಟು ಹಾಕಲಿಕಿಷ್ಟು ತಾಕತ್ತು ಬೇಕು
ಸಿಗುವುದಾದರೆ ಇಷ್ಟು ಮೂಲಿಕೆಯ
ರಸ ಸಾಕು
ಹುಟ್ಟು ಶಾಪದ ಕುಬ್ಜೆ
ಬೆಳೆದ ಗೂನು
ಇಷ್ಟು ಸಾಲದ್ದಕ್ಕೆ ಗಂಧ ತೇಯುವ ಕರ್ಮ
ಗಂಧ ತೇಯುತ್ತ – ತೇಯುತ್ತ
ಕೊನರಿತ್ತು ಬಾಳಿನಲಿ
ಗಂಧ ಕ್ಷಾಮ
ಕೃಷ್ಣ ಬರವಿನ ಆಸೆ – ಊರುಗೋಲು
ಯುಗ ಯುಗದ ಒಡಲಲ್ಲಿ
ಬೆರೆತ ನಿಟ್ಟುಸಿರಲ್ಲಿ
ಯಾಚನೆಯ ಮೊರೆಗೆ
ಕರಗಿ – ಕೃಷ್ಣ
ಹೊನಲಾಗಿ – ಬೆಳಕಾಗಿ
ಕರುಣೆಯಾ ಕಡಲಾಗಿ

ಹೆಳವ ಮನದರಮನೆಗೆ
ಕುಬ್ಜತೆಯ ಕಳೆವುದಕೆ
ನಡೆದು ಬರಲಿ
ಮುಗಿಲುಗಳ ಮರೆಯಿಂದ
ಹರಿದು ಬರಲಿ
ಕೊಳೆತು ನಾರುವ ಬದುಕು
ತಿಳಿಯಾಗಿ
ಪಾರದರ್ಶಕವಾಗಿ
ಅರಳಿ ಬರಲದರೊಳಗೆ
ಕೆಂಪು ಪ್ರಾಣದ ಕಮಲ
ಅದುವೆ ಕೃಷ್ಣನ ಪಾದ
ಸ್ಪರ್ಷ ಚುಂಬನದಿಂದ
ಧನ್ಯವಾಗುತ ಮುಕ್ತಿ
ಶಿಖರದಾ ಹಣೆಯೊಳಗೆ
ಕಣ್ಣ ಬೆಳಗಲಿ ಒಂದು
– ಬೆಳ್ಳಿ
ಚುಕ್ಕಿಯಾಗಿ
ಕೃಷ್ಣ ಪ್ರೇಮದ ರೆಕ್ಕೆಗಳ
– ಹತ್ತೊಂದು
ಹಾರುವಾSS
ಹಕ್ಕಿಯಾಗಿ

## ಮೃಗಜಲ

ಹೂಬಿಟ್ಟ ಗೊಂಚಲು ನೆಲದ ಮೇಲೆ
ಬೂದಿಯಾಕಾಶದೊಳಗೊಂದು
ಬೆಳಕು ತೇರು
ಮರಳುಗಾಡಿನ ಹಾದಿಹಾದಿಯಲೂ
ಗಂಗೆಯಮುನೆಯರ ಮಂದಹಾಸ
ಹಾಲು ಹಣ್ಣಿನ ಸುಗ್ಗಿ ಸರಬರಾಜು
ಗ್ರೀಷ್ಮದುರಿಯಡಿಯಲ್ಲೂ
ತಣ್ಣನೆಯ ನೆರಳ ಕೊಡೆ
ಸೀದ ಕೊಂಬೆಗಳಲ್ಲು ಹಸಿರು ಹಬ್ಬ
ಮೋಡದೋಡನು ಮೀಟಿ
ಪಯಣ ಹರಿದಂತೆಲ್ಲ
ಮಧು ಕುಂಭ ಸಾಲು
ಇದ್ದಕ್ಕಿದ್ದಂತವತರಣ
ಅಪ್ಸರೆಯ ಮೇಳ
ಉದ್ದಕ್ಕೂ ನುಡಿವ ನೂಪುರದನುಣ್ಪು
ಅಗರು ಚಂದನ ಕಂಪು ತಂಪು
ಬಾನಾಚೆ ನುಡಿವ ಕೋಗಿಲೆಯ ಇಂಪು
ನನ್ನ ಬದುಕಿನ ಹಾಡೆ ನನಗೆ ಪೆಂಪು
ದೂರ ಬೆಟ್ಟದ ನೀಲ ನವಿರಿನ ಮೇಲೆ
ಮೆರೆವ ಮುಗಿಲಂಚಿಗೆ ಬೆಳ್ಳಿ ಕಾಪಿನ ಹೊಳಪು
ಹೆಜ್ಜೆಯಡಿ ತೆರೆದಿರುವ ಪ್ರಪಾತದ ಭೀತಿಯ ಮರೆಸಿ
ಹಾಸಿತ್ತು ದಟ್ಟನೆಯ ಹಸುರು ಹಾಸು
ಕೈ ಚಾಚಿದಲ್ಲೆಲ್ಲ ಸೇಬು ದಾಳಿಂಬೆ
ಜೊಲ್ಲು ನಾಲಗೆಗೀಗ ಸವಿವ ಕನಸು
ಬಾರೆಂದು ಬೇಡದ

ಬಕಾಸುರ ಬಯಕೆ ಬಾಗಿಲು ತೆರೆದು
ಕಂಡದ್ದು ಕಬಳಿಸುವ
ಆತುರಕೆ
ಕಾತರಕೆ
ಹತ್ತಿದ್ದು
ಮೆತ್ತಿದ್ದು
ಕೊನೆಗೆ ದೊರೆತದ್ದೆಲ್ಲ
ಬಯಲ ಬೆಳಕು
ಬೆಳಕ ಕುದುರೆಯ ಸೆಳಕು

## ನೀಲಾಂಜನೆಗೆ

ಏರು ತಗ್ಗಿಲ್ಲದ ನುಣ್ಣನೆಯ
ನೆಲದೆದೆಯಾಳದಿಂದ
ಹೊಮ್ಮಿತ್ತು ಅಲೆ ಅಲೆಯ ಗೆಜ್ಜೆ ಗಾನ
ನೂರು ಸ್ವರ್ಗಕ್ಕೆ ಹಚ್ಚು ಕಿಚ್ಚೆಂಬಂತೆ
ಸಾಗಿತ್ತು ಸಾಗಿತ್ತು ಸಾವಿರ ಭಂಗಿಗಳಲ್ಲಿ
ಪದಗತಿಯ ಮೇಳ
ನುಡಿದಿತ್ತು ಹಿನ್ನೆಲೆಗೆ ತಕ್ಕಂತೆ ತಾಳ
ಪಾರದರ್ಶಕ ಮೈಯೊಳಗೆ
ಬೆಳಕಾಗಿ ಹರಿದವರು
ಅವಳ ಆ ಜೇನ್ನಗೆಯ ಸುಳಿಯಲ್ಲಿ
ಸಿಕ್ಕವರು
ಸಿಕ್ಕು ಸುಕ್ಕಾದವರು
ಮರಮರಳಿ ಮರುಹುಟ್ಟು
ಬಯಕೆ ಬಂದಿಗಳು
ಯಕ್ಷ ಲೋಕಗಳೆಲ್ಲ
ಇಳಿದಿಳಿಯೆ
ಚಿಮ್ಮಿ ಸಿಡಿಯುವ ನೋವು
ಮಂಗಮಾಯ!!
ಮಂಜು ದೇಹಗಳಲ್ಲಿ
ಕಿಡಿ ಹೊತ್ತು ಕೊನರುವುದು
ಬೆಂಕಿ ಹೂವು
ಎದೆಯ ಭಾರವು ಕರಗಿ
ಹುಮ್ಮಸದ ಗರಿ ಮೂಡಿ
ಮುಗಿಲಾಚೆ ಮೋದಕೆ ಲಗ್ಗೆ ಮನಸು
ಅವಳು ಬಿತ್ತಿದ ಬೀಜ ಕಾಮವು ಸಿಡಿದು

ನಾಳೆಗೆ
ನಾಳೆ – ನಾಳೆಗಳಿಗೆ
ಗೊಂಚಲು ಗೊಂಚಲು ಹಣ್ಣಾಗಿ
ನನಗೆ – ನನ್ನವರಿಗೆ
ಉಳಿವಳೆಂದೇ ಉಳಿದ
ಅವನ ಒಳ – ಪಟದೊಳಗೆ
ಅವಳೇ ಇಲ್ಲ
ಜಗವ ತೂಗಿದ ನೋಟ
ಮನವ ನಾಡಿದ ಆಟ
ಬಳಕು ಬಳ್ಳಿಯ ಮಾಟ
ಕಾಮಿ ಹಕ್ಕಿಗಳಲೆವ ಬಾನ ತೋಟ
ಬೆಳಕ ಛೇಡಿಸಿ
ಬೆಳಕಾದ ಇವಳ – ಹೆಡೆಯ ಮೇಲೂ
ಚಾಚಿತ್ತು ಕರಿ ನೆರಳು ಸಾಲು ಸಾಲು !!!
ಅದೃಶ್ಯ ಲೋಕದ ಅಡವಿ ಬೇಡನ ಲೀಲೆ
ಕ್ರೂರ ಬಾಯಿಗೆ ತುತ್ತು – ಈ ರನ್ನ ಬಾಲೆ

## ವಿರಹ

ಶಬ್ದ ಮೀರಿದ ನಿಶ್ಯಬ್ಧ
ನೋವಿನ ಇರಿತ
ಕುದಿವ ಬಿಂದು ಮೀರಿದ ಕಾವು
ಕಾಣದುರಿವ ಹುಣ್ಣಿನ ಕಣ್ಣು
ಕೆಂಡ – ಕುಂಡ
ಮುತ್ತಿ ಮುಸುಕಿದ ಭಾವ
ಬೆತ್ತಲಾದನುಭಾವ
ಕೈ ಹಿಡಿದು
ಒಡನಡೆದು
ಮನ ಮಿಡಿದು
ಮೈ ತುಂಬಾ ಮೊಗ್ಗು ಬಿಡಿಸಿದ
ಕಚಗುಳಿಯ ನೆನಪುಗಳು
ಕ್ಷೀರ ಸವಿಗಳನೊರಸಿ
ಕ್ಷಾರ ಸವಿಗಳನುಳಿಸಿ
ಕಾಡುವುದು
ಆಡುವುದು – ಕಣ್ಣು ಮುಚ್ಚಾಲೆ
ಒಮ್ಮೆ ಕಂಡವನ ಮುಖ
ಎದೆಯ ಆಲ್ಬಮಿನಲ್ಲಿ
ಬಂಧಿಸುವ ಸಿರಿ ಬಯಕೆ
ಬಿಗಿ ಬಿಗಿದು ಬಗಿದಷ್ಟು
ಲಾವಾರಸ
ಗಾಳಿ ಸುಳಿಯದು
ತಂಪು ಹರಿಯದು
ಕುಸುಮ ಕಂಪದು ಕೆರಳದು
ಚಿಗುರು ಮೊಗ್ಗೆಯು ಅರಳದು

ನಿಂತ ನೆಲವೆಲ್ಲ ಉರಿವ ನಾಲಗೆಯಾಗಿ
ಹರಿವ ಮೋಡವ ತಡೆದು
ಹನಿಗಳೆರಡರ ಭಿಕ್ಷೆ
ಬೇಡುತುಳಿವುದೇ sss
ವಿರಹ ನಕ್ಷೆ
ಅದುವೆ ಶಿಕ್ಷೆ

# ದೀಪಾವಳಿ

ಲೆಕ್ಕವಿಲ್ಲದ ಲಕ್ಷ
ನಕ್ಷತ್ರ ದೀಪಗಳ ತಂಪು ಬೆಳಕಿನಲಿ
ಒಳಗೊಳಗೆ ನೂರಾರು
ಸಿಡಿಮದ್ದು ಸ್ಫೋಟ
ಸುರ ಸುರ ಬತ್ತಿ
ಸರ ಸರ ಉರಿವ ಬೂದಿ ಮನಸು
ಕರಿಯ ಕತ್ತಲ ಅಜ್ಞಾತ ಲೋಕದೆದೆಯಾಳದಲಿ
ಜಿಗಿದೊಡೆವ ರಾಕೆಟ್ಟು
ಬಯಕೆ ಕ್ಷಿಪಣಿ
ಹೊತ್ತಿ ಬೆಳಗುವ ಬತ್ತಿ ಕಣ್ಣುಗಳಲ್ಲಿ
ಬತ್ತಲಾರದ ಗಂಗೆ-ಯಮುನೆ
ಭೂಮಿ ಬಸಿರಿನ ಸಂದುಗಳ
ಸಮಾಧಿಯೊಳಗಿದ್ದ
ನರಕನೆಚ್ಚರಕಿಷ್ಟು
ಅಬ್ಬರ – ಉಬ್ಬರದುತ್ಸಾಹ ಚಿನಕುರಳಿ
ಸಿಡಿವ ಗುಂಡಿನ ಸದ್ದು ಮರಳಿ ಮರಳಿ
ಚಿಗಿವ ಹೂ ಸದ್ದಿನುಲ್ಲಾಸ
ಹೊಸ ರತ್ನಕಂಬಳಿ ಚಿತ್ತಾರದೆದೆ ಮೇಲೆ
ಕಿಡಿಯ ಮಣಿಗಳನೆಸೆವ ಬೆಂಕಿ ಚಕ್ರ
ಹೂ ಕಂಪು ಹೊಗರಲ್ಲಿ
ಹೊಗೆಯ ಘಾಟಿನ ಸೊಂಪು
ಉರಿ ಉರಿದು – ವಿಲವಿಲನೆ
ಒದ್ದಾಡಿ
ಗುದ್ದಾಡಿ
ಬಯಲಗಾಳಿಯಲುಳಿದ ಬೆಳಕ ಕುಡಿಸಾಲು

ಕರಗಿ ಕರಕಾದಂತೆ
ದಂಡಕಾರಣ್ಯದ ಕನಸು ಹಾದಿಗಳಲ್ಲಿ
ಮಗ್ಗಲುಗಳು ಬದಲಾದಂತೆ
ನನ್ನೊಳಗೆ ನಾನೇ ದೀಪಾವಳಿ
ಬೆಂಕಿ ಹೂವು ಉರಿವ ಹಾವು
ಚಿನಕುರಳಿ ಸಿಡಿಮದ್ದು
ಕೊನೆಗೆ ಪುರಪುರ ಉರಿದು
ಇಲ್ಲವಾಗುವ ಬತ್ತಿ ಸುರಸುರವು
ನಾನೇ – ನಾನೇ
ಉರಿದುರಿದು ಬಿದ್ದ ಬೂದಿಯ ರಾಶಿ
ಒಳಗೊಂದು ಬೆಳಗಿತ್ತು
ನಕ್ಷತ್ರ ಹಕ್ಕಿ
ರೆಕ್ಕೆಯೊಡೆಯುತ ಹೊರಗೆ
ಬರುವ ದಾರಿಯನಷ್ಟೆ
ಕಾದು ಕೂರುವುದದುವೆ
ದೀಪಾವಳಿ
ಬಗೆ ಜಗವ ಬಳಸಿರುವ
ಹರ್ಷಾವಳಿ

## ಹುಟ್ಟಲೊಲ್ಲದ ಕಂದ

ಹುಟ್ಟಲೊಲ್ಲೆಯೇಕೆ ಕಂದ
ಹುಟ್ಟಲೊಲ್ಲೆಯೋ
ಗಟ್ಟಿಮುಟ್ಟಿ ನೆಲವ ನಿನಗೆ ಕೊಟ್ಟೆನಲ್ಲವೋ
ಹೊಟ್ಟೆ ಬಟ್ಟೆ ಕಟ್ಟಿ ನಿನಗೆ
ಕಾದೆನಲ್ಲವೋ
ಇಚ್ಛೆ ಕಟ್ಟಿ ಎದೆಯ ಕುಟ್ಟಿ
ನಿನ್ನ ಕರೆದೆನೊ
ನಿನ್ನ ಬೇರು ಬಲಿಯಲೆಂದು
ರಕ್ತವೆರೆದೆನೋ
ಕಾದು ಕಾದು ಕಣ್ಣ ಕೆಟ್ಟು ಕರೆದೆನಲ್ಲವೋ
ಬಂದೆ ಬರುವೆ ಎಂಬ ಆಸೆ ಹೊದ್ದೆನಲ್ಲವೋ
ಹುಟ್ಟಲೊಲ್ಲೆಯೆಂಬ ಭೀತಿ ಪಂಜು ಇರಿವುದೋ
ನನ್ನ ಪ್ರಾಣದೆದೆಯ ಚೂರು ಕೊಡುಗೆ ಮರೆವುದೋ !!
ಭಾವನಾಡಿ ಮಿಡಿತವನ್ನೇ ಬುಡಕೆ ಇಟ್ಟೆನೊ
ಹೂವು ಹೂವು ದುಂಬಿಯಂತೆ ತಿರಿದು ತಂದೆನೊ
ತಂದ ಮಧುರ ಮಧುವನೆಲ್ಲ
ನಿನಗೆ ಎರೆದನೋ
ತುಳಿತ ಒದೆತ ತಂದ ನೀರ ಕಣ್ಣ ಸುರಿದೆನೊ
ಸುರಿದು ಸುರಿದು ಬಲಿತು ನೀನು
ಬಂದೆ ಬರುವೆ ಎಂದೆನೋ
ಹೂವು ಗಂಧ ಕಿರಣ ಚಂದ
ಚಂದ್ರ ಬೆಳಕು ಮಿಂಚು ಹೊಳಪು
– ಬಾನ ಬಣ್ಣದಂತೆ ಮೈಯ ತಳೆದು
ಬರುವೆಯೆಂದೆ ನಂಬಿ
ಬದುಕ ತೇದಿ ತೇದಿ ತೇದಿ

ತೇದಿ ಉಳಿದೆನೊ!
ಹುಟ್ಟಿದಂತೆ ಉಳಿದು ನೀನು
ಕಾಡಬೇಡವೋ!
ಗಳಿಗೆ ಗಳಿಗೆ ಬರುವೆಯೆಂದೆ
ಲೆಕ್ಕವಿಟ್ಟೆನೋ
ಲೆಕ್ಕ ಸೋತು ಮನವು ಬಾತು
ಮಸಣವಾಯಿತೊ
ಬಾರದೇಕೆ ಕಾಡುತಿರುವೆ
ಹಟವಿದೇನು ನಿನ್ನದು?
ನನ್ನದೆಂಬ ಕಂದನಾಗಿ ನೀನು ಬಂದರೆ
ನಿನ್ನೊಳಗೇ ನನ್ನ ಜೀವಕಿಹುದು ಆಸರೆ
ನನ್ನ ರಕ್ತ ಮಾಂಸವುಂಡು
ಅಂತರಂಗ ಭಾವಬಂಡು
– ಹೀರಿ
ಹೀರಿ
ಜಗದಗಲ ಮುಗಿಲಗಲ
ಕಂಪೆರೆವ ಶ್ರೀ ಕಮಲ
– ನೀನಾಗಿ ಅರಳುವುದ ಕಾಂಬಾಸೆ ಕನಸೆಲ್ಲ
ನಿನ್ನೊಳಗೆ ನೆಟ್ಟೆನೋ
ಉಡಿದ ಜೀವವನ್ನೂ ನಿನಗೆ ಇಟ್ಟೆನೊ
ಇಷ್ಟಾದರೂ ಇನ್ನು ಹುಟ್ಟಲೊಲ್ಲೆಯೇತಕೋ
ಕಂದ ನನ್ನದೆಂದು ಕರೆವ ಯೋಗವೊಂದು ಬೇಕೋ!

# ಆತ್ಮಗತ

ಅನಂತದಾಚೆಗಿನ
ವಿಸ್ತಾರ ಬಯಲೊಳಗೆ
ರೂಪ ವರ್ಣ ವಿಮುಕ್ತ
ಅಮೂರ್ತ ಬೆಳಗು
ಭೂಮದೆತ್ತರದಿಂದ
ನೆಲದ ಚುಂಬಕ ಸೆಳೆತದ
ಸೆರೆಗೆ ಸಿಕ್ಕು
ಮಣ್ಣು ವಾಸನೆ ಘಾಟು ಕುಡಿದು
ಒಳಚರಂಡಿಗಳ ಹೊಲಸಲ್ಲಿ
– ಹರಿದಾಡಿ ಹುಲುಸಾದ
ಚಂಚಲ ನಾಲಗೆಗಳ ಸವಾರಿಯಾಗಿ
ಸ್ವಾರ್ಥ ಕೈ ತೀಟೆಯಲಿ
– ತೃಪ್ತವಾಗಿ
– ಸೊಂಪಾಗಿ
ಹದ್ದು ಗಡಿಗಳ ಮೀರಿದ
ಬದುಕು ಬೀದಿಗಳಲ್ಲಿ
ಹಗುರ ಚಲಾವಣೆಯಾಗಿ
ಹೊರಳಾಡಿ
ಕಂಡ ಕಂಡವರ ಬಾಯ ಸೂಳೆಯಾಗಿ
ಗುರುತು ಮರೆತು
ಅಜ್ಞಾತವಾಸದ ಕತ್ತಲಲ್ಲಿ
– ಗುಕ್ಕು ಹಿಡಿದು
ನರಳಿ
ನರಳಿ
ನಗರ ಗಜಿಬಿಜಿಯಲ್ಲಿ

ನಾಗರೀಕತೆಯ ನಾಜೂಕಿನಲ್ಲಿ
ನಯವಂಚಕತೆಯ ಜಾಣೆನಲ್ಲಿ
ಧರ್ಮ ಪಾಷಂಡಿತನದ ಕೆಸರಲ್ಲಿ
– ಕರಗಿ
– ಕರಗಿದಸ್ತಿತ್ವದಲಿ ಕುಸಿದು
ನಾಸ್ತಿಯಾಗಿ,
ನಿಶ್ಚಲ – ನಿಸ್ಪಂದ
ಪ್ರೇತವಾದೆ
ಪ್ರೇತವಾದೆ
ಭದ್ರ ಮಂದಾರದೆದೆಯಲ್ಲಿ
ನಮ್ರತೆಯ ಕಂಪಾಗಿ
ಗಾಳಿ ವೈಹಾಳಿಯಲಿ
ದಿಕ್ಕುದಿಕ್ಕಿನ ಅತಿಥಿಯಾಗಿ
ಹೂತೇರು
ಘನಮೇರು
ಏರುತೇರುತ ದಿವ್ಯಲೋಕ ಸಾರಿ
ನೆಲವಿರದ
ಜಲವಿರದ
ಜನವಿರದ
ಮನವಿರದ
ರಂಗಿರದ ದಂಗಿರದ
ಇದ್ದು ಇಲ್ಲದ ತೆರದ
ಬದುಕು ಬಯಸಿದ
ಕನಸು
– ಕಡಿದು
ಉಡಿದು
ಅಲ್ಲಿಯೂ ಸಲ್ಲದೆ
ಇಲ್ಲಿಯೂ ಸಲ್ಲದೆ
ಬಿಳಿದು
ಬೆಂತರವಾದೆ

ಅಂಗಲಂಗುಲ ಮಾಂಸ
ಹನಿ ಹನಿ ರಕ್ತದ ಹಿಗ್ಗು
ಸವಿಯೊಳಗೆ
–ಸಾಫಾಗಿಸಿ
ಅದು ಇಲ್ಲದಾದ್ದಕ್ಕೆ
ವಿವಶ ಬಲಿಯಾದ್ದಕ್ಕೆ
ಕಂಬನಿಯ ಕಾಣುವೊಲು
ಕೋಡಿ ಹರಿಸುತ್ತಾನೆ
ದುರ್ಬಲ ಜೀವ ಸಾವಿಗೆ
ಸತ್ತ ಅದರ ಆತ್ಮಕ್ಕೆ
ಭರ್ಜರಿ ಗೋರಿಗಳ
– ತಾಜ ಮಹಲುಗಳ
ಕಟ್ಟಿಸುತ್ತಲೇಽಽ
ಮಸಲತ್ತು ಮಾಡುತ್ತ
ಹೊಸ ಇತಿಹಾಸಗಳ ಮಾಡುತ್ತ
ತನ್ನ ಪೀಳಿಗೆ ಜಾತಿ
ನಡೆದ ಹಾದಿಯೊಡೆದ ರೀತಿಯಲಿ
ಮತ್ತೆ ಮತ್ತೆ
ಮುಂದುವರೆಯುತ್ತದೆ
ಮುಂಬರುವ ಬೇಟೆಗೆ
ಹೆಸರಸಾರ್ಥಕ ತೀಟೆಗೆ
ಕಾಮದಾಟದ ಮೋಜಿಗೆ
ಬಲೆಹಾಸಿ ಕಾಯುತ್ತದೆ
ಕಾಯುತ್ತಲೇಽಽ
– ಇರುತ್ತದೆ

# ಅನಿಸಿದ್ದು

ಆಗತಾನೇ ಹೊಗರೆದ್ದು
ಒಡೆದು
ಅರಳಿದ ನನ್ನ ಪ್ರಾಯಕ್ಕೆ
ಚಿಗುರು ಮೀಸೆಯ ಹುಡುಗ
ಸ್ವಸ್ತಿ ನುಡಿದ
ಶೃತಿಗೊಂಡ ಹೃದಯದಲಿ
ಬೆರಳಾಡಿ ಮಿದುವಾಗಿ
ಮಧುರ ಪ್ರೇಮದ ಗೀತೆ
ನನಗಾಗಿ ನುಡಿದ
ಆಕಾಶ ಹಿರಿದಿತ್ತು
ನೆಲವು ಪುಲಕರಿಸಿತ್ತು
ನಡೆದ ಹೆಜ್ಜೆಗಳಲ್ಲಿ
ಇಂದ್ರ ಧನುಗಳ ಬಿಡಿಸಿ
ಸ್ವರ್ಗ ಭೋಗದ ಕನಸು ಕಾಯಿಗಳ ತೊಡಿಸಿತ್ತು
ಗಿಡಗಿಡವು ಮರಮರವು
ಉಲ್ಲಾಸ ಹೂಮುಡಿದು
ನನಗು ಅವನಿಗೂ ಏನೇನೋ
ಸನ್ನೆಗಳ ಕಲಿಸಿತ್ತು
ಎಂದು ಇಲ್ಲದ ಭಾವ
ಇಂದೇಕೆ ಸೋಜಿಗವೊ
ಯಾರುಕರೆವರೊ ನನ್ನ?
– ಪ್ರಶ್ನೆಗುತ್ತರವಾಗಿ
ಒಳಗಿದ್ದ ಹುಡುಗ
ಕಿಲ ಕಿಲನೆ ನಕ್ಕ
ಮಿಂಚು ರೋಮಾಂಚನಗಳು
ಹೊಳೆದುವಿದಿಗೋ ಫಕ್ಕ !!

# ಅರಸ ಮತ್ತು ಸಾವು

ಕೋಮಲ ಕಬಂಧ ಬಂದಿ
ಕೊರಳೊಳಗಿಂದ ಬಿರಿದ ಸದ್ದದು
ತೇಲಿ ಅನುರಣಿಸಿ
ಅಂತಃಪುರದ ಬಿಗಿದ ಬಾಗಿಲೊಡೆದು
ಸಿಡಿದಿತ್ತು ಭಯದ ಭೂಕಂಪಗಳು
ಕಲ್ಲುಕೋಟೆ ಬುರುಜುಗಳಲ್ಲೂ
ಬಿರುಕು ನಕ್ಷೆಗಳು
ನಿದ್ದೆಯಲಿ ಬೆಚ್ಚಿ ಬಿರಿದ ದನಿಗೆ
ತಾನೇ ಹೆದರಿದರಸನ ಕಣ್ಣುಗಳಲ್ಲಿ
ಉರಿದಿದ್ದವು ಸಾವಿನ ಪಂಜುಗಳು
ಮಗ್ಗುಲಲಿ ಮುದುಡಿ ನಡನಡುಗಿದ
ಹರಿಣಿಗೂಹೆದರಿತ್ತು ರಾಜ ಸಿಂಹ !
ಸೂರು ನೋಡಿದ ಕಂಬ ನೋಡಿದ
ಮೃದು ತಲ್ಪ ತಾವರೆ ಬಟ್ಟಲ ಕುಟ್ಟಿ ನೋಡಿದ
ಕಡಲುಕಲಕಿ ಮೌನದಲಿ ಮಲಗಿತ್ತು
ತೆಳ್ಳನೆಯ ತನ್ನುಸಿರ ಗಾಳಿ
ಸಳಸಳ ಸಪ್ಪಳದ ತನ್ನ ಹೆಜ್ಜೆಗಳಿಗೆ
ತಾನೆ ಹೆದರಿ ಹೌಹಾರಿದ
ಹಗಲುರಿದರೂ ಕರಗಲಿಲ್ಲ ಕಾಳ ರಾತ್ರಿಗಳು
–ಎದೆಯಾಳದಲೆದ್ದ ಪಿಸುದನಿಗೆ
ಚೀತ್ಕರಿಸಿ ಕಾಲ್ಬಡಿದ
ಚಡಪಡಿಸಿ ತತ್ತರಿಸಿದ
ನೀನಾರೋ ಬರಲಾರೆ ದಮ್ಮಯ್ಯ ಬಿಟ್ಟುಬಿಡು
'ಸತ್ತಿಗೆ ಸಾಮ್ರಾಜ್ಯ ನಿನಗೀಯುವೆ'
ಬಡಬಡಿಸಿ ನಿದ್ದೆಯಲಿ ನರಳಿ ಕುಸಿದ

ಕಿಟಕಿಯೊಳಗಿಂದ ತೂರಿ ಬಂದ
ಕಿರಣಗಳು ನಕ್ಕವು!!
ಇವನ ಪಾಲಿಗಿದೆ ಹಗಲು ಬೆಳಕು
ಜಾಣ ಜೋತಿಷಿ ನುಡಿದ ತನ್ನ ಸಾವಿನ ಸುದ್ದಿ!?
'ಅದಲು ಬದಲಾಗುವುದು ಹಣೆಬರಹ
ನಾ ಬಲ್ಲೆ ಗ್ರಹಗಳಿಗೆ ಗತಿ ಕೊಟ್ಟು
ಕಾಲನಿಗೆ ಮತಿ ಕೊಟ್ಟು
ತಿದ್ದಿ ಬರೆಸಲು ಬಲ್ಲೆ ನನ್ನ ವಿಧಿ ಲಿಖಿತ
ಸಮರದಲಿ ಸಾವು ಜೀವವ ಕೊಡುವ
ಸಾವನು ತಡೆದು
ನನ್ನ ತೀರ್ಪಿನಲಿಂದೆ ತಿದ್ದುವೆನು ಭವಿಷ್ಯವ
ಅರಮನೆಯ ಅನ್ನವನು
ಸೆರೆಮನೆಲಿ ಉಣುತಿರಲಿ!
ಸಾವಗಡುವನು ಗೆದ್ದು ಬರಮಾಡಿಕೊಳುವೆ
ಸಪ್ತ ಸಾಗರದಾಚೆಸಪ್ತ
ಕೋಟೆ ವರ್ತುಲದೊಳಗೆ
ಮುಗಿಲನ್ನೆ ತಿವಿದ ಸರಳ ಬೇಲಿಗಳೊಳಗೆ
ಸ್ವರ್ಗವನೆ ಸೆಳೆ ತಂದು
ಸುಖದ ತೆಕ್ಕೆಗೆ ಬಿದ್ದರೂ
ತುಡಿಯದೆದೆ ಭೋಗಕ್ಕೆ
ರಾಗ ರತಿಯಾಟಕ್ಕೆ
ದೇವ ಕಾಂತೆಯರೊಲುಮೆಯಾಮೋದಕ್ಕೆ
ದೂರ ತೀರದಲೆದ್ದ ಸದ್ದೂ ಸಾವಿನ ತುತ್ತೂರಿ
ಕಮಲ ಸೌಗಂಧಗಳು ಗಂಧ ಗಾಳಿಯ ಸುಯ್ಯಿ
ತೀರಿಸಲು ಬಂದಂತೆ ಸಾವ ಹೆಡೆ ನೆರಳು
ನನ್ನಗೆಲ್ಲದು ನಾನು ಅಮರ
ಸಾಯಲಾರೆನು ನಾನು ದೀರ್ಘಾಯುಷಿ!!'
ಚೀರಿ ಹೊರಟ ಮಾತಿನ ಕ್ಷಿಪಣಿಯಲಿ
ಒಡಕು ಸದ್ದು
ಕುಳಿತ ಕೋಟೆಯಲಿವನ ಹಗಲಿಲ್ಲ ಇರುಳಿಲ್ಲ
ಕಳ್ಳ ಹೆಜ್ಜೆಗಳಲ್ಲೇ ಕನ್ನ ಕೊರೆದು

ಅಡ್ಡಾಡಿ ದಿಡ್ಡಾಡಿ ಕುರುಡು ಬೀದಿಗಳಲ್ಲಿ
ಕಣ್ಣು ಪಿಳಿಪಿಳಿ ಬಿಟ್ಟು
ಕಾಲವನ್ನೇ ಕಟ್ಟಿ ಹಾಕಿದ್ದೇನೆಂದು
ಭ್ರಮೆಯ ಆಸರೆ ನೆಮ್ಮಿ
ಮೀಸೆ ತುಡುಕುತ ನಕ್ಕ –
ಗೋರಿ ಕುಳಿತ ಅರಸನಯೋಗಕ್ಷೇಮ
ನೆನಹು ಊರಿನೆದೆ ತುಂಬ ಮಿಡಿತ!!
ಕಾರು ಕತ್ತಲ ಬಿಲ
ಸೂಜಿ ಬೆಳಕಿಲ್ಲ
ಗಾಳಿ ತೂರುವುದಿಲ್ಲ
ಸಾವು ಬರುವುದು ಹೇಗೆ
ಸಪ್ತ ಸಾಗರ ಸೇತು ದಾಟಿ ಮೀಟಿ?
ಏಳು ಸುತ್ತಿನ ಕೋಟೆಯಲಿ
ಕೀಲಿ ಕಾಣದ ಕಬ್ಬಿಣದ ಕೋಶದಲಿ
ಜೀವ ಮಣಿ ನನ್ನದಿರಲು
ಭದ್ರ! ಸುಭದ್ರ!!

ಕಾಡು ಕತ್ತಲ ಹುಡುಕಿ
ಮೂಲೆ ಮೂಲೆಯ ತಡಕಿ
ಬೀಸಬಲ್ಲೆನೆ ಮೋಸದಲಿ ಬಲೆಯ
'ಸೀಳ ಬಲ್ಲನೆ ತನ್ನ ಸೀಸದೆದೆಯ?'

ಮಾತು ಮುಗಿಯುವ ಮುನ್ನ
ಮೈ ಮೇಲೆ ಸರಸರ ಸದ್ದು
ತಡಬಡಿಸಿ ತಡಕಿದ ಕೈಗಳಿಗೆ
ಸಿಕ್ಕದ್ದು ಸರಮಾಲೆ ಬಿರಿದ ಹೂವು?
ಚಿಲುಮೆಯೊಡೆದಿತ್ತು ಅದರ ಕಂಪು
ತನ್ನುಸಿರ ನಾತಕ್ಕೆ ತಾ ಹೇಸದಿರಲೆಂದು
ತಾನೆ ತಂದಿದ್ದೆಂದು ಗಳಿಗೆ ಮರೆತಿದ್ದ!!
ಮೂಗಿಗೂ ಮರೆತಿತ್ತು ಗಂಧ
ಕಳೆದಿತ್ತು ಕಣ್ಣು ಬೆಳಕು

ಸ್ಪರ್ಶದಲಿ ಹೂವು ಹಾವೆಂದರಿದು
ಹೌಹಾರಿ ಎಸೆದೊಗೆದ ಹೂಮಾಲೆಯನ್ನೇ!
ಭೀತಿ ಭೂತದ ನೆರಳ ಘಾತಕ್ಕೊರಗಿ
ಗೋರಿಯಾದ !!
ಸಾವಗೆಲುವಾತುರದಿ ಸಾವನೊಲಿದ

## ಚಿತ್ರಾಂಗದೆ

ಗಂಡುಗಾಡಿ ವೇಷದಲ್ಲಿ
ಕಾನು ಬಾನು ಗಿರಿದರಿಗಳಲಿ
ನಿರ್ಭೀತವಾಗಿ ಅಲೆವ
ದಟ್ಟಪೊದೆಗಳಲ್ಲಿ ಸಿಂಹ ಗುಹೆಗಳಲಿ
ಸುಳಿದಾಡಿ ಆಡಿದ ಹುಲಿಸಿಂಹ ಬೇಟೆಗಳ
ಅರಿತವರ ಅಂತರಂಗಗಳ ಒಳಹೊಕ್ಕು
ಅನ್ಯೋನ್ಯದಲಿ ಬೆರೆವ ಜಾಣ್ಮೆಗಳ
ಕಂಡರಿದೇ ಅಪ್ಪನಿಗೆ
ಗಂಡು ಸಂತಾನವಿಲ್ಲದ ಚಿಂತೆ ಮರೆತದ್ದು
ಈ ದೊಡ್ಡ ದೇಶಕ್ಕೆ
ಈ ದೇಶದ ದಡ್ಡ ಮಕ್ಕಳಿಗೆ
ತಾಯಿಯಾಗುತ್ತಾಳೆ
ದೀಪವಾಗುತ್ತಾಳೆ
ಭವಿಷ್ಯದ ರೂವಾರಿಯಾಗುತ್ತಾಳೆ
ಅವರೆಲ್ಲರ ಹಣೆಬರಹಕ್ಕೆ ಹೊಣೆಯಾಗುತ್ತಾಳೆ
ಎಂದೇಽಽ
ರಾಜ ತಂತ್ರಗಳ
ರಾಜಕೀಯ ಮಂತ್ರಗಳ ದೀಕ್ಷೆ
ಅಪ್ಪನಿಂದ ದೊರೆತದ್ದು
ಅನಿಷ್ಟ ನಿವಾರಣೋಪಾಯ ಯುಕ್ತಿಗಳ
ಎದುರಾಳಿಗಳೆದೆ ಇರಿವ ಶಕ್ತಿಗಳ
ಅಕ್ಕರೆಯ ನೀತಿ ಪಾಠಗಳಲ್ಲಿ
ಕಲಿವ ಹುಡುಗನ ಶ್ರದ್ಧೆ ಮೊದಲು ಮೊದಲು
ಅಪ್ಪನವಸಾನ
ಅಧಿಕಾರ ಮಧುಪಾನ ಒಟ್ಟೊಟ್ಟಿಗೆ

ಹಗಲು ರಾತ್ರಿಗಳೆಲ್ಲ ಅದಲು ಬದಲು
ಕಲಿತದ್ದು ಕರಕರಗಿ
ದಿನದಿನದ ಮೇಜವಾನಿಯ ಹೊಸ ರುಚಿಗೆ
ನೆಲಮುಗಿಲುಗಳ ಮುಷ್ಠಿಯಲಿ ಬಿಗಿವ ಆಸೆಗೆ
ತ್ರಿವಿಕ್ರಮದಳತೆಗೆ ಚಿಗಿವ ಕನಸಿಗೆ
ಕೈ ಮುಗಿದವರನ್ನೇ ಕಾಲೊರಸಿಗೆ ಹಾಸಿ
ಕೆಸರಿನ ಹೆಜ್ಜೆ ಗುರುತುಗಳು ಕಾಣದಂತೆಯೇ
ಜಾಣ್ಮೆಯಲಿ ನಡೆದವಳು
ಮಾಡಿದ್ದೆಲ್ಲ ಮೈಲಿಗಲ್ಲುಗಳಾಗಿ
ನುಡಿದದ್ದೆಲ್ಲ ನೀತಿ ಸೂತ್ರಗಳಾಗಿ
ಕಾಟಗಳ ಮರೆಸೊರಸಿ
ಮಾಟಗಳ ಕೂಟಗಳ ಎತ್ತಿ ಮರೆಸಿ
'ಜಯ ಭಾರತ ಜನನಿಯ ತನುಜಾತೆ
ದೀನ ದಲಿತರ ಭಾಗ್ಯ ವಿಧಾತೆ'
ಎಂಬುದೆ ಅವರ ನಿತ್ಯ ಗೀತೆಯಾಗಿ
ಅದುವೆ ಅವರ ನಡೆಗೆ ಸ್ಫೂರ್ತಿಯಾಗಿ
ಅವರುಸಿರು ತನ್ನುಸಿರೊಳಗೆ ಸೆರೆಯಾಗಿ
ಮಿಡಿವ ಕಂಬನಿಗವರ ಕರವಸ್ತ್ರವಾಗಿ
ಹಸಿದವರ ಬಸಿದವರ
ನೊಂದವರ ಬೆಂದವರ
ನಿಟ್ಟುಸಿರಿನುಯ್ಯಾಲೆಯೊಳಗೆ ತೂಗಿ
ಮೋಡಿಗೆ ಹಚ್ಚಿ ಕಾಮನ ಬಿಲ್ಲುಗಳ ಬಿಚ್ಚಿ
ಕಾಗದದ ಹೂಗಳಲೂ ಗಂಧ ತುಂಬಿ
ಅವರೆದೆಯ ಗೂಡುಗಳಲಿ ಗೂಡು ಕಟ್ಟಿ
ಅಂಗುಲಂಗುಲ ಕೊನರಿ
ನೆಲಬಾನು ಬಯಲಲ್ಲಿ ಇವಳೆ ಇವಳು !!
'ಸರ್ವೇಜನಾ ಸುಖಿನೋ ಭವಂತು'
– ಮಂತ್ರೋಕ್ತಿಯ ಶ್ರದ್ಧೆ
ಸರ್ವರೂ ತನ್ನೊಳಗೆಂದೇ
ತನ್ನ ಸುಖಕ್ಕೆ ಬೇಲಿ ಕಟ್ಟಿಕೊಂಡದ್ದು
ಉಡಿದುರುಳಿದ ನಕ್ಷತ್ರವಾದರೂ

ನಕ್ಷತ್ರ ಕಾಂತಿ ನಭದೊಳಗೆ ತುಂಬಿತ್ತು
ಹನಿಹನಿಯ ರಕ್ತಕ್ಕೂ
ಮಿಲಿಯ ಮಿಲಿಯ ಕಂಬನಿಗಳುಕ್ಕಿ
ಉರಿದ ಬೂದಿಯಲಿಂದ ಜೀವ ಬಂದು
ಅಲೆದಿಹಳು ಈ ಇವಳು ಚಿತ್ರಾಂಗದೆ
ಇಂದು ನೆನ್ನೆಗಳ ಮಿತಿಯಲ್ಲಿ ಸೆರೆಯಾಗದೆ
– ಮರೆಯಾಗದೆ

# ಷೋಕೇಸಿನ ಮಹಿಳೆಯ ಸ್ವಗತ

ಜನ ನಿಬಿಡ ನಗರಾರಣ್ಯ
ರಸ್ತೆಯಲಿ
ಗಾಜು ಪಂಜರದೊಳಗೆ
ನಿಟ್ಟುಸಿರ ನೇವರಿಕೆಯೊಳಗೆ
ನಿಶ್ಚಲಬಂದಿಯಾಗಿದ್ದೇನೆ
ನುಣುಪು ನುಣುಪಾದ
ಮೈಯ ಸವರಿ
ತಟ್ಟಿ ತಡವರಿಸಿ
ನೋಟ ಗುಟುಕರಿಸಿ
ನವಿರು ನವಿರಾದ
ಸೀರೆ ಕುಪ್ಪಸ ತೊಡಿಸಿ
ಬೆಟ್ಟ ಕಣಿವೆಗಳಲ್ಲಿ ಬೆರಳಾಡಿಸಿ
ಕುರುಳ ರಚಿಸಿ
ಹುಬ್ಬ ಮುಡಿಸಿ
ತುಟಿಯ ಬಿಡಿಸಿ
ಒಳಗೊಳಗೆ ಹೊಗರೆದ್ದ ಕಾಮಕ್ಕೆ
ತನಗೆ ತಾನೇ ಖುಷಿ ಪಡುವ
ಬೇಪಾರಿ ಬೇವಾರ್ಸಿ
ಕಣ್ಣ ಸೆರೆಯೊಳಗೆ
ಮಿಡುಕುವೆದೆ ಬೇನೆಯಲಿ
ಚೀತ್ಕಾರದುಬ್ಬರ
ತುಟಿಯ ದಡಗಳ ನಡುವೆಯೇ
ಕುಸಿಯುತ್ತದೆ.
ಒಡಲಿನಪ್ಪುಗೆಯೊಳಗೆ
ನೂರು ಕನಸುಗಳ ಮುಚ್ಚಿ

ಮರೆ ಮಾಚಿರುವ
ಬಣ್ಣ ಬಣ್ಣದ ಸೀರೆಯ ಮೇಲೆ
ಬೆಲೆಯ ಬಾಸಿಂಗ ಸಿಂಗರಿಸಿ
ನಿಲ್ಲಿಸುತ್ತಾನೆ–
ನಿರ್ಭ್ರಾಂತ ಲಾಭದ ನಿರೀಕ್ಷೆಯಲ್ಲಿ!
ಹಾದಿ ಹೋಕರ ಆಸೆ
– ಕೆರಳಿಸುವ ಹವಣಿಕೆಯಲ್ಲಿ
ತೊಗಲ ಸುಕ್ಕಿನ ತಣ್ಣನೆಯ
ಪದರದಡಿಯಲ್ಲಿ
ಹರಿವ ಹಸಿರುಚಿಯ ಬಿಸಿಗೆ
ಸ್ವಚ್ಛಂದ ಕುದುರೆಯೇರಿ
ಪೋಲಿ ನಗೆ ನಕ್ಕು
ಹೋರಿ ನೋಟಗಳನ್ನು
ಮೇಯ ಬಿಟ್ಟು
ಹದ್ದು ಮೀರಿದ ಬಯಕೆ
ನಾಲಗೆ ಚಾಚುವವರು
ಹೊಸ ಪ್ರೇಮದ ಸವಿಗನಸಿನ
ಚಿಗರೆ ಕಣ್ಣಿನ
ಜೇನು ಕನಸಿನ ಪ್ರೇಯಸಿ
ನನ್ನ ನೋಟಕ್ಕೆ
ಮಾಟಕ್ಕೆ
ಮನ ತೆತ್ತು ! ಹಣತೆತ್ತು
ತನ್ನೊಳಗೆ ನನ್ನ ಕಂಡು
ಬೇಡಿ ಬತ್ತಲಾಗಿಸುತ್ತಾರೆ
ಸುಲಿದ ಸೀರೆಯ ಸುಳಿಯೊಳಗೆ
ಅಂದದತ್ತರು ಗಂಧ
ಸೋರಿ ಹೋಗದಂತೆ
ಎದೆಗವಚಿ ನಡೆದು
ಗೆದ್ದಂತೆ ಕಣ್ಣ ಹೊಡೆದು
ಮುಸಿ ಮುಸಿ ನಗುತ್ತಾರೆ.
ಲಕ್ಷ ಲಕ್ಷ ಬಾರಿ

ವಿವಸ್ತ್ರಳಾಗುವ ನನಗೆ
ಕೊಡಲಿಲ್ಲ ಕೃಷ್ಣ ಅಕ್ಷಯದಾನ
ಬಾಹ್ಯದಲಿ ಸ್ಪಂದಿಸಿದ
ಎದೆಯ ನೋವಿನ ಕರೆಗೆ
ಕಿವುಡಾದ ಕೃಷ್ಣ
ಉಳಿಸಿ ಹಾಗೇ ನಡೆದ
ನೆಮ್ಮದಿಯ ತೃಷ್ಣಾ

## ಬೇಟೆ

ಮೊಗ್ಗು ಪ್ರಾಯಕೆ ಸಂದು ಅರಳಿತು
ತುಂಬಿ ಹಂಬಲ ಎದೆಯ ಕೊರೆಯಿತು
ಹೊಸತು ತಲ್ಲಣ ಉಸಿರ ಕಂಪನ
ಎಲರ ಸ್ಪರ್ಷವೆ ರೋಮಾಂಚನಾ

ಶಾಂತ ಕಡಲಲಿ ಕೆರಳಿತಲೆಗಳು
ಹೊತ್ತಿ ಉರಿಯಿತು ಭಾವ ಕಿಡಿಗಳು
ರಾಗ ಸಮೆಯಿತು ಶೂನ್ಯವಾಯಿತು
ಸುಳಿವ ಹಾವದು ಹೆಡೆಯ ಬಿಚ್ಚಿತು

ಕಾಡು ಕದಲಿತು ಹರಿಣ ಬೆಚ್ಚಿತು
ಮೌನ ವೊಡೆಯಿತು ಶಬ್ದ ಹಡೆಯಿತು
ನೆಲವೆ ನರಳಿತು ಅಭಯ ಸಿಡಿಯಿತು
ಧೂಮ ಚದುರಿತು ಬಾನು ಬೆದರಿತು

ವ್ಯಾಧ ನಿಲ್ಲಿದು ಜೀವ ಕಾಶಿ
ಸಾವು ಕೊಲೆಗಿದು ತಾಣವಲ್ಲ
ಹಿಂಸೆ ನಮ್ಮಯ ಸೀಮೆಯಲ್ಲ
ಶಬ್ದದನುರಣನ ಕರಗಿತು

ಬಳ್ಳಿಯೊಡಲಲ್ಲಿ ಹೂವ ಮುಡಿದು
ಏರು ಜವ್ವನ ಗಂಧ ಸಿಡಿದು
ಸಪ್ತ ವರ್ಣದ ಬಿಗಿದು ತೋರಣ
ಹಾದಿ ಕಾದಳು ಭ್ರಮರ ಕಾರಣ
ಸದ್ದದೇನದು ಹರಿಣ ಬೆದರಿತು

ಒಡತಿ ಮಡಿಲಿನ ಕರುಣೆಯರಸಿತು
ಬೇಟೆಗೆಂದು ಬಂದುದಾಯಿತು
ಬೇಟೆಯಾಟಕೆ ಮನವು ತುಡಿಯಿತು

ದುಂಬಿ ಸರಳು ಮನವ ಹೊಕ್ಕಿತು
ಪ್ರೇಮ ಮಧುವಿಗೆ ತುಟಿಯ ಕಚ್ಚಿತು
ಮುಗ್ಧೆ ಎದೆಯೊಳಗೆದ್ದ ನೋವು
ಮಧುರ ಬಯಕೆಯ ಹಿತದ ಬಾವು

ಹರಿಣವುಳಿಯಿತು ಹರಿಣಿಯೆಟುಕಿತು
ಬಂದ ಬೇಟೆಯ ಸ್ವಾರ್ಥ ಸಂದಿತು
ರಾಜ ಭೋಗದ ಸ್ವರ್ಣ ಪಂಜರ
ಕನಸು ದೋಣಿಯು ಕದಲಿ ಸಾಗಿತು

## ನೋವು

ಅಜ್ಞಾತ ಗವಿಯ ಬಸಿರೊಳಗೆ
ಸೂಲಗಿತ್ತಿಯ ಸಹಕಾರವಿಲ್ಲದೆಯೆ
ಹುಟ್ಟಿ ಹೊಗರಿಟ್ಟು
ನರ ನರದಲ್ಲೂ ಕಿಚ್ಚು ಹೊತ್ತಿಸಿ
ಬೆಳಕಿಲ್ಲದ ಬೆಂಕಿಯುರಿಸಿ
ಅಂಬೆಗಾಲಿನಾಟಗಳನೆತ್ತಿ
ಒತ್ತರಿಸಿ ಸರಿಸಿ
ದಾಪು ಹೆಜ್ಜೆಗಳಿಟ್ಟು
ಬೆಳೆ ಬೆಳೆದು
ಭೂಗೋಲಗಳ ಬಳಸಿ
ಬತ್ತಲೊಡಲುಗಳ
ಸತ್ತ ಹುರುಪುಗಳ
ಕತ್ತಲೆದೆಗಳ ಹುಡುಕಿ
ತಡಕಿ
ಆಶ್ರಯಿಸಿ
ಬೇರು ಬಿಟ್ಟು ಹಬ್ಬಿ ಹಸುರಾಗಿಸಿ
ಕೊಬ್ಬಿ ಕಸುವಾಗಿ
ರಕ್ತನಾಳಗಳೊಡೆಸಿ
ಅಳಲ ಕೋಡಿ ಹರಿಸಿ
ನಕ್ಕು ಈಜಾಡಿ
ಆಸರೆಯನ್ನೇ ಅಲ್ಲಾಡಿಸಿ
ಟೊಳ್ಳಾಗಿಸಿ
ಬುಡ ಕಡಿದು
ಜೀವ ಸೋರಿ
ನೆಲ ಕಚ್ಚಿ ಜೀವ ಗೋರಿಯಾದಾಗ

ವಿರಮಿಸುವ ವಿಧ್ವಂಸಿ
ವಿಘ್ನ ಸಂತೋಷಿ
ಸೂಕ್ಷ್ಮಾಣುಕಾಯದಲಿ ಹೊಕ್ಕುಕ್ಕಿ
ಪುಷ್ಟಿ ರಸ ಪಾನದಲಿ ಸೊಕ್ಕಿ
ಉಬ್ಬುಬ್ಬಿ ಒಡೆದು ಎರಡಾಗಿ
ಎರಡು ನೂರಾಗಿ
ನೂರು ಸಾವಿರವಾಗಿ
ವಾತಾಪಿಯಾಗೊಡೆದು
ಅಗಸ್ತ್ಯ ಸಾವಿನಲಿ
ಸಂತೃಪ್ತ ದೈತ್ಯ!!

# ಮನೆಯೊಳಗೆ ಮನೆಯೊಡೆಯ

ಮನೆಯೊಳಗೆ ಮನೆಯೊಡೆಯ
ಇದ್ದಾನೊ ಇಲ್ಲವೊ!
ಹೊಸ್ತಿಲಲಿ ಹುಲ್ಲು ತುಂಬಿ
ಉದರದಲಿ ಹುಸಿ ತುಂಬಿ
ಎದೆಯೊಳಗೆ ವಿಷ ತುಂಬಿ
ಕೊಳಕು ಕತ್ತಲ ಹುತ್ತಗಳಲ್ಲಿ
ಹಾವು ಹಲ್ಲಿಗಳಾಡಿ ಕೂಡಿ
ನಡೆದಿದೆ ನಿರಂತರ ಮೇಳ
ಕೇಳುತ್ತಿದೆ ಭೂತ ಹೆಜ್ಜೆಯ ತಾಳ

ಸಡಿಲು ತೊಲೆ ತೆಕ್ಕೆ
ತೂಗಿ ತೊನೆದಿದೆ ಬೂಜು ತೊಟ್ಟಿಲು
ಹೆಣಗಳಾಗಿವೆ ಸಾಲು ಮೆಟ್ಟಿಲು
ಒಳಗೆ ಬಾವುಲಿ ಹಿಂಡು
ಕೋಟಿ ಕಾಗೆಯ ದಂಡು
ಚೆಲ್ಲಿದಂಗಳ ಕ್ಯಾಕ್ಟಸ್ಸು ಲಂಟಾನ
ತುಳಸಿ ಕಟ್ಟೆಯ ತುಂಬ ದತ್ತೂರಿ ಸಂತಾನ
ಮುಳ್ಳು ಬೇಲಿಗಳೊಗೆ ಹರಿವ ಹೆಬ್ಬಾವು
ಹಳಸಿ ಸೊರಗಿವೆ ಮಲ್ಲೆ ಟೊಂಗೆ ಮಾವು
ಧೂಳು ಹಾಸಿನ ಹಾಸು ಒಳ ಹೊರಗೆ ಮನೆ ತುಂಬ
ಹಸಿಗೋಡೆ ಮೇಲೆಲ್ಲ ಲಕ್ಷ ಕಣ್ಣು
ಮುಟ್ಟಿದಲ್ಲಿ ಮೆತ್ತುವುದು ಮೆತ್ತನೆಯ ಹುಣ್ಣು
ರಾತ್ರಿ ಬಿದ್ದಿರಬೇಕು ಕಳ್ಳರೀ ಮನೆಗೆ
ಇದ್ದುದ್ದು ಇದ್ದೆಡೆಯಿಲ್ಲದೆ ಮಂಗಮಾಯ
ನೂರು ತಲೆಮಾರಿನ ಸೊತ್ತು

ಇದರ ಇತಿಹಾಸವೆಲ್ಲ ಯಾರಿಗೆ ಗೊತ್ತು?
ಬಂದವರು ಬಂದಂತೆ ಎದ್ದು ಹೋಗಿರಬೇಕು
ಧೂಳು ಹಾಸಿನ ಮೇಲೆ ಹೆಜ್ಜೆ ಚಿತ್ತಾರ
ಅಟ್ಟಡಿಗೆ ತಳ ಹತ್ತಿ ಕರಿಕಾದ ಗುರುತು
ಭೂತದರ್ಶನಕೆ ಬುದ್ಧಿ ಹೇಳಿರಬೇಕು
ಎಲ್ಲ ಮರೆತು
ಜೇಡ ಬಲೆಗೂಡಾದ ಜರೀರುಮಾಲು
ತಲೆ ಕೆಳಗೆ ತೂಗುವ ಅಸ್ಥಿಪಂಜರ ಸಾಲು
ಸಾರುತಿದೆ ಈ 'ಮನೆ'ಯ ಹಳೆಯ ಕತೆಯ
ಹಾಳಾದ ಹೋಳಾದ ಮನದ ವ್ಯಥೆ

ಈಗ ಬೆಳೆದಿದೆ ಇಲ್ಲಿ ಕಪ್ಪು ಕಾಡು
ಕೇಳುವುದಿಲ್ಲ ಇಲ್ಲಿ ಕೋಗಿಲೆಯ ಹಾಡು
ಮನೆ ಮನೆಯ ಬಾಗಿಲಿಗೆ ಕೊರೆದು ಕನ್ನ
ಕೊಳ್ಳೆ ತಂದರು ರಾಶಿ ರಾಶಿ ಚಿನ್ನ
ಗಾಳಿ ರೋದನ ನೆರಳ ನರ್ತನ
ನಗ್ನ ನಗೆ ಬಿರಿದೊಡನೆ ನಾಲ್ವತ್ತು ಮಂದಿ
ಇದ್ದವರನಿರಿದು ಪಾತಿ ಮಾಡಿ ಕೊಳೆವ ಹೆಣಗಳ
ಮೇಲೆ ಅತ್ತರನುಚೆಲ್ಲಿ
ಹೊಲಸು ಕೈಗಳ ಹೊತ್ತು ನೆತ್ತರನು ಮರೆತು
ನೆಮ್ಮದಿಯ ನಿದ್ದೆಯಲಿ ಸುಖಿಸುತ್ತಾರೆ

ಬರುವವರೆಗೊಬ್ಬ ಅಲಿಬಾಬಾ
ಹೀಗೆ ಹೀಗೆ ಸಾಗುವುದು ಇವರ ಕಳ್ಳಾಟ
ಮನೆ ಮುರಿದು ಸೂರಿರಿದು
ಕೋಟೆ ಕೊತ್ತಲ ಬಿಡದೆ ಕೊಳ್ಳೆ ಹೊಡೆಯುತ್ತಾರೆ
ಗಿಳಿಯ ಗುಂಡಿಟ್ಟು
ಉಸಿರು ಹೊಸಕುತ್ತಾರೆ
ಜೀವ ಹೂಳುತ್ತಾರೆ
ಮನೆಯೊಡೆಯ ನಿಲ್ಲದ ಮನೆಯೊಳಗೆ ನಿರಾಂತಕ
ನಡೆದಿದೆ ಕಳ್ಳಸಂತೆ

# ಬದುಕುತ್ತೇವೆ

೧

ಬದುಕುತ್ತೇವೆ ಬದುಕು ಬಯಸಿ ಬದುಕಲೇ ಬೇಕು
ಬರುವಾಗ ಕುರುಡು ಕತ್ತಲು ಕಷ್ಟ
ಮಾತು ಬಾರದ ಮೂಕ ಭಾವ
ಹಿಡಿದ ಕೈ ಹಾದಿಗಳಲ್ಲಿ ತೊದಲು ಹೆಜ್ಜೆ
ಹೊಸ ಊರು ಹೊಸ ನೀರು
ಒಗ್ಗಿ ಕೊಳ್ಳುತ್ತೇವೆ ಇಂದು ನಾಳೆ
ಚಿಗಿದ ನೆಲದಕ್ಕರೆಯ ನೆರಳಲ್ಲಿ
ಇಷ್ಟಿಷ್ಟೆ ಬಲಿತ ಒಡಲು
ಪೊರೆ ಕಳೆದು ಎವೆ ಬಿಚ್ಚಿದಾಗ
ಕಾಡು ಕಡಲಿನ ವಿಸ್ತಾರ ತೀರ
ಗಳಿಗೆ ಗಳಿಗೆಗೆ ಬದಲಿಸುವ
ಹವಾಮಾನದ ಹಾವಳಿಯ ಸಂಚು
ಗೂಳಿ ಪೊಗರಿನಲಿ ಬೀಸುವ ಬಿರುಸುಗಾಳಿ
ಕದಡಿದ ಕಡಲ ಎದೆಯಾಳದಲಿ
ಬಿಗಿದ ಸಾವಿನಲೆಗಳ ಘೋಷ
ನಡೆವೆ ಹೇಗೋ ಇಷ್ಟು ಇನಿದನಿಯ ಕಂಪು
ಉಡುಗಿದ ಉಸಿರನೆಬ್ಬಿಸುವ ನೆರಳ ತಂಪು

೨

ಸಮೆದು ಹಾದಿಯಲಲ್ಲಲ್ಲಿ ಆಲ-ಬೇಲ
ಜೊತೆಗಿಷ್ಟು ಇರಲೆಂದು ಜಾಲಿ ಮುಳ್ಳು
ದಾರಿಗಳ ದಂಡೆಗಟ್ಟಿ ನಿಂತ ದೈತ್ಯ ಮರಸಾಲು
ದಾಟಲಿದೆ ಎದುರಲ್ಲಿ ಗಿರಿ ಕಂದರ ಸವಾಲು
ಕೇಳಿ ಬರುತಿದೆ ದೂರ ನರಿಗಳೂಳು
ಹೊಂಚಿ ಕಾದಿವೆ ಹುಲಿ ಚಿರತೆ ಶಾರ್ದೂಲ

ಕೃಷ್ಣ ಪಕ್ಷದ ಕಾಳ ರಕ್ಕಸಿಯ ರಾಜ್ಯ
ದಾರಿ ಕಾಣಲು ಎದೆಯಾಸೆ ಹಣತೆಯೇ
ಬೆಳಗ ಬೇಕು
ನಿಲ್ಲಲಾಗದು ಇಲ್ಲಿ ಸಾಗಬೇಕು
ನಾಳಿನಾಸೆಯ ಬೆಳಕು ರಂಗೋಲಿ ಮನಸು
ದನಿಯೊಳಗೆ ಯಾರದೋ ಪಿಸುಗುಟ್ಟಿದೆ
'ನಡೆ ಮುಂದೆ ನಡೆ ಮುಂದೆ ನುಗ್ಗಿ'ಯೆಂದು
ಬೆನ್ನ ಚಪ್ಪರಿಸುತ್ತ
ಬದುಕುವಾಸೆಗಳ ಕಲಿಸುತ್ತ
ಭರವಸೆಯ ಬಂಗಾರ ಕನಸು ಕೊಟ್ಟಿದೆ

೩

ದೀರ್ಘ ಪಯಣದ ಹಾದಿ
ನಿರಾಯಾಸದಲಿ ಕಲಿಸಿತ್ತು ನೂರು ಪಾಠ
ಎದ್ದವರನಾದರಸಿ ಬಿದ್ದವರ ಮೂದಲಿಸಿ
ಕದ್ದಾದರೂ ಸರಿಯೆ ಒದ್ದಾದರೂ ಸರಿಯೆ
ಗದ್ದುಗೆಗೆ ಗೋಪುರಕೆ ಏರಲೆಷ್ಟೆಂದು
ಮೆಟ್ಟಿಲುಗಳನ್ನು ಲೆಕ್ಕ ಹಾಕುವುದನ್ನು!
ನಮ್ಮ ಪಾಲಿಗೆ ಬರುವ ಕಾಡು ಕುದುರೆಗಳನ್ನು
ಸವಾರಿಗೆ ನಮ್ಮ ಸರಿಯಾಗಿ ಪಳಗಿಸಿ
ಅಂಕೆ ಅಂಕುಶವಿಟ್ಟು ಹೊಂದಿಸಿ ಕೊಳ್ಳುವುದನ್ನು!
ಬೆರಳ ಸಂದಿಗಳಲ್ಲೂ ಸೂಜಿ ಕಣ್ಣುಗಳಲ್ಲೂ
ಹಾದು ಬದುಕುವುದನ್ನು ಕಲಿತು ಬದುಕುತ್ತೇವೆ
ಬದುಕುಗಳನ್ನು ಬರುವವರ
ಸೊತ್ತಾಗಿಯೂ ಉಳಿಸುತ್ತೇವೆ
ನಾವು ಬದುಕುತ್ತಲೇ
ಬದುಕುವುದನ್ನು ಕಲಿಸುತ್ತೇವೆ

## ಅತ್ತೆಯ ಅಂತರಂಗದ ಹಾಡು

ದಿಲ್ಲಿ 'ಥಾನಿ' ಉಪ್ಪರಿಗೆ ಮನೆಯಲ್ಲೂ
ಇಲಿ, ಹೆಗ್ಗಣಗಳೋಡುವ ಸದ್ದು
ಮ್ಯಾವು ಮ್ಯಾವು ಎನ್ನುತ್ತಲೇ
ಮಾಡಗಳ ಮೇಲೆ ಓಡಾಡಿ
ಕಣ್ಣು ಮುಚ್ಚಿ ಹಾಲು ಕುಡಿವ
ಬೆಕ್ಕುಗಳಿಗೆ ಭರ್ಜರಿ ಸ್ವಾತಂತ್ರ್ಯ

ಗದ್ದುಗೆಯ ಹದ್ದನ್ನು ಹದ್ದಾಗಿ ಕಾಯುತ್ತ
ನೂರು ಫೈಲುಗಳ ಭಾರಿ ರಾಜ ಕಾರಣ ನಡುವೆ
ಅತ್ತೆಯೆದೆಯಂಗಳದಲ್ಲಿ ಉರಿವ
ಸೊಸೆಯ ಪ್ರತಿಬಿಂಬ
ಹೊಗೆಯಾಡುತ್ತಿರುವ ಹಗೆ ಸ್ಫೋಟ
ಕುದಿಯುವ ರೋಷದ ಕಾವ್ಯ
ಇಡಿಯಾಗಿ ನುಡಿದಿತ್ತು ಅವಳಂತರಂಗ
'ಸಾವಿರ ಕಷ್ಟಗಳ ಮೂಟೆ ಭಾರದ
ಬಸಿರ ಹೊತ್ತು
ಹೆತ್ತು ಕೊಟ್ಟ ಮಗನು ಒತ್ತೆಯಾದ ಭಾವ
ಹೊಸ್ತಿಲಲಿ ಹೊಸದಾಗಿ ಸೊಸೆಯಾಗಿ
ಬಂದ ಗಳಿಗೆಯಲೇ ಮುಡಿದಳೆಷ್ಟೊ
ಅನಿಷ್ಟಗಳ ದಂಡೆ ದಂಡೆ
ಅವಳುಟ್ಟ ಸೀರೆಯ ಸೆರಗ ಬಟ್ಟಲ ತುಂಬ
ಕಣ್ಣೀರ ಕಡಲನ್ನೇ ಕಟ್ಟಿ ತಂದ ಭಾವ
ಕಂಡ ಕಂಡಂತೆ ಒಳ ಹೊರಗೆ
ಸಿಡಿಯುವುದು ಸಾವಿರದ ಭೂಕಂಪ
ಹೆತ್ತ ಬಸಿರಿನ ಅನುಕಂಪ

ಅರಿಯಲಾರಳೆಂಬ ಆರೋಪ
ಸುತ್ತ ಬಳಸಿದ ಸಮಸ್ಯೆಗಳ ಶರಪಂಜರದಲ್ಲಿ
ಸೊಸೆಯ ಬಿಂಬದ ಅಣಕ!!
ಊಹೆ ಹಕ್ಕಿಯ ರೆಕ್ಕೆ ಬಲಿತು
ಕರುಳ ಕುಡಿ ಸಾವಿಗವಳೆ ರಣಹದ್ದು ಎಂದು ಘೋಷಿಸಿದ್ದು
'ಅನಾದಿ ವಂಶದ ಗಂಗೆ ಧಾರೆ
ಬೆರೆಯುವುದಿಲ್ಲ ಬೇರೆ ನೀರುಗಳು
ಇದರ ಜೊತೆಗೆ
ವಂಶದ ಸ್ರೋತಕೆ ಕಟ್ಟು ಕಟ್ಟಳೆಯಿಲ್ಲ
ಹರಿವುದೆಂದಿಗು ಹೀಗೆ ಬಂಧರವಿರದೆ
ಚಿತೆಯೊಳಗೆ ಕುದಿದಿದ್ದ
ಕೆಂಪು ಕುಂಕುಮ ವ್ಯಥೆಯು
ಹೊತ್ತಿ ಬತ್ತಿದ ಕಣ್ಣುಗಳ ಕತೆಯು
ಎಳೆಯ ತೆಳು ಮುಗ್ಧತೆಯು
ಹುತ್ತಗಳೊಡೆದು ಹೊರಗೆ ಬಂದದ್ದೇ
ಮಿಡಿನಾಗರಳೆಂದು ತಿಳಿದದ್ದು
ಬಿಡುವಿರದ ಬಿಡುವಿನ ನಡುವೆ
ನೆನಪೊಡೆಯುವುದು ನಡೆದು ಸಾಗಿದ
ಶೀತಲ ಸಮರ ಯಾತ್ರೆ
ಮನೆಯ ಮರ್ಯಾದೆ ಬೀದಿಗೆಳೆಯುವಳೆಂದು
ತಣ್ಣನೆಯ ಫ್ರಿಜ್ಜಿನಲಿ ಬಂಧಿಸಿದ್ದು
ಎಂದೊ ಬಾಗಿಲು ತೆರೆದು ಕಾವು ಪಡೆದು
ಗುಟ್ಟಾಗಿ ಮೊಟ್ಟೆಗಳು ಮರಿಯಾಗಿ
'ಕೊಕೊಕೋ ಎಂದು ತುತೂರಿಯೂದಿದವು!
ಶಾಂತಸಾಗರದಲ್ಲಿ ಬಿರುಗಾಳಿಯೂದಿ ಕಲಕಿ'
ನೆಮ್ಮದಿಯ ಹಡಗುಗಳ
ತಳಕ್ಕೆ ತಳ್ಳಿದವಳು!!
ಕಣ್ಣರೆಪ್ಪೆಯ ಕೋಟೆ ಭದ್ರ ಕಾವಲಿನಲ್ಲಿ
ವಾತ್ಸಲ್ಯ ಕೊಡೆಗಳ ನೆರಳ ತಂಪಿನಲಿ
ಅವಳ ಬಳ್ಳಿಯಲಿ ಬಿಟ್ಟ ಮೊಗ್ಗಿಗೆ
ಹಿಗ್ಗಿ ಹಾರಿದ್ದು 'ಪರಾಭವ'ವೆಂದು ಅಬ್ಬರಿಸಿ

ಬೀದಿ ರಾಮಾಯಣವಾಗಿಸಿ
ಬೊಬ್ಬೆ ಹಾಕಿ ಹುಬ್ಬು ಕುಣಿಸಿ ಹಾದಿ
ಪುಂಡರ ತೊಂಡು ನುಡಿಗಳನುಂಡು
ಹೂವು ಬದುಕಿನ ಬಯಕೆಯವಳ
ಭೂಗತವಾಗಿಸಿ ಬಿಳಿಯ ಹೂಗಳ
ಬೆಳಸಿದಾಗಲೇ ಮನುವು ಸ್ವಸ್ಥ!

## ಮಳೆ

ಜಿದ್ದು ಕೆಂಡ ಸುರಿದ ಸೂರ್ಯ
ನೆಲದ ಮೊರೆ ಕೇಳಲಿಲ್ಲ
ಬೇಕೆಂದೇ ಬಾನ ಬೀದಿಗಳಲ್ಲಿ
ಅಲೆದಾಡಿ ಹಕ್ಕಿಗಂಟಲ ಕೊಯ್ದು
ರೆಕ್ಕೆ ಕತ್ತರಿಸಿ ಚಿತೆ ಗೊಡ್ಡಿದ

ದೂರ ದೂರದವರೆಗೆ ದರಿದ್ರ ಮೌನ
ಕುಡಿದ ಬಿಸಿಲು ಗಂಟಲಿರಿದು
ಮರ ಮರ ಸದ್ದಡಗಿ ಸಾಲುಮರ
ನಗೆ ಸಮಾಧಿಯೊಳಗೆ ಮುಳು ಮುಳು ಅಳುವ
ಚಿಟ್ಟೆ ಹೂವು

ಒಳಗೆ ಉರಿ, ಹೊರಗೆ ಉರಿ
ಸುಟ್ಟು ಕರಕಾದ ಕಪ್ಪು ತೊಗಲು
ಸುಕ್ಕುಗಳ ನಡುವೆ ಬಿಕ್ಕುಗಳ ನಡುವೆ
ಹಣೆಗೆ ಕೈಯಿಟ್ಟು ಆಸೆ ಕಣ್ಣು ಆಗಸಕೆ ನೆಟ್ಟ ಮುದುಕ
ಕರಿ ಮೋಡಗಳ ಕರೆಯುತ್ತಾನೆ
ಬೂದಿಗೆ ಜೀವ ಕೊಡಲು ಭಗೀರಥನ ಬೇಡುತ್ತಾನೆ
ಮುಗಿಲು ಮುಕ್ಕಳಿಸೊಗೆಯೆ
ಭೂಮಿ ಬೆಸಲಾದೀತು ಹಸಿರು ಚಿತ್ತಾರ ಮೂಡೀತು!!
ಯುಗದ ಕೊಳೆ, ಜಗದ ಕೊಳೆ
ಕೊಚ್ಚಿ ಕಮನೀಯ ಕನಸುಗಳು
ಹೊಗರಿಡುವ ಮನಸುಗಳು
ಗಂಧರ್ವ ಲೋಕಗಳು ಇಳಿದಾವು
ಪ್ರೀತಿ ಪ್ರೇಮಗಳು ಉಳಿದಾವು ಎಂದೇನೋ ಗುಣಗುಣಿಸಿ

ಪರ್ಜನ್ಯ ಮಂತ್ರಗಳ ಕರೆಯುತ್ತಾನೆ
ಕಾದ ಭೂಮಿಯೆದೆಗಿಷ್ಟು
ಕಣ್ಣ ಹನಿಸುತ್ತಾನೆ
ಹುಣ್ಣ ಸವರುತ್ತಾನೆ

# ಎರಡು ಹಕ್ಕಿಗಳ ನಡುವೆ

ಹಲವು ದಿವಸಕ್ಕದರ
ಕಣ್ಣು ಕಂಬನಿಗಡಲು
ಬೆಳ್ಳಿ ಬೆಳಗಿನ ಸರಳು
ಕೆಂಪು ಹಳದಿಯಾಕಾಶದಲಿ
ಒಮ್ಮೆಗೊಮ್ಮೆಲೆ ಕವಿದ
ಕಪ್ಪು ಮೋಡದೆದೆಯೊತ್ತಿ
ಹನಿ ಮಳೆಯ ಮುತ್ತು
ಸಣ್ಣಗೆಲ್ಲೋ ಸಾಗಿತ್ತು
ಸದ್ದಿಲ್ಲದ ಮೂಕ ನೋವಿನ ಹೊಳೆಯು
ದೂರದಂಡೆಯ ಮೇಲೆ
ನಿಮಿರಿ ನಿಂತೊಂದು ಬೋಳು ಮರ
ಕೊಂಬೆಯಲಿ
ಜೋಡಿ ಹಕ್ಕಿಗಳೆರಡು
ನಡುವೆ ನಡೆದಿತ್ತು
ಮಾತು ಮಾತಿನಲೇ ಮಲ್ಲಯುದ್ಧ
ಗಂಡಿಗೂ ಅಭಿಮಾನ
ಹೆಣ್ಣಿಗೂ ಅಭಿಮಾನ
ಗಂಡು ಸಿಡಿದದ್ದಕ್ಕೆ
ಕೊರೆದದ್ದಕ್ಕೆ
ಹೆಣ್ಣು ಹಾರೈಸಿ ಕುಳಿತಿತ್ತು
ಆಕಾಶ ಬಯಲೊಳಗೆ
ಸಿಡಿಲು ಬರಲು
ಒಡಲು ಸುಡಲು
ಸಂಸಾರ ಸೌಹಾರ್ದದಾಸೆ ಭರವಸೆ
ಆದರ್ಶ ದಾಂಪತ್ಯ ಹಸಿರು ಕನಸು
ಸುಳಿಗಾಳಿಯೇಳದ ಸುಖದ
ಕಡಲಿನ ಪಯಣ

ಒಡೆದಂತೆ ಒಡೆದಿತ್ತು ನೀರುಗುಳ್ಳೆ
ಭಾವಸರಕಿನ ಹಡಗು
ಆಗಿತ್ತು ಕೊಳ್ಳೆ
ಮಾತು ಮಾತಿನ ಚೂರಿ
ಹಸಿಗಾಯ
ಹೆಪ್ಪುಗಟ್ಟದ ನೆತ್ತರಲಿ ನಗುವೆಲ್ಲ
ಸುಳಿಯ ಬಾಯಿ ತುತ್ತು...
ಹೇಳಲಾಗದ ಪಾಡು
ಮರೆಯದಾಯಿತು ಗೂಡು
ಆಕಾಶದಗಲದಲಿ
ಊರು ಕೇರಿಗಳಲ್ಲಿ
ಕಾಡು ಮೇಡುಗಳಲ್ಲಿ
ಅಲೆದಲೆದು ದಣಿದಾಗ
ಬೆಚ್ಚನೆಯ 'ಬೀಡು' ನೆನಪಾಗಿ
ಮರಳಿದರು ಹೊರಳಿದರು
ಮೂಡಲಿಲ್ಲ ಮಾತು
ಕೂಡಲಿಲ್ಲ ಮನಸು
ಅದಕದರ ಪಾಡಾಯ್ತು
ಚೈತ್ರ ಬಂದರು ಕೂಡ
ಅರಳಲಿಲ್ಲ ಹಾಡು
ಹಮ್ಮುಬಿಮ್ಮಿನ ಮುಸುಕಿನಲಿ
ಮೂಕಯಾತನೆ ಹೊರೆಯು
ಮುಸುಕಿ ಮುತ್ತಿದ ಮೋಡ
ಕರಗಿ ಕಂಬನಿ ಮಳೆಗೆ
ಮೆದುವಾಗಿ
ಮೃದುವಾಗಿ
ಎದೆಯಾಳದೊಳಗಿಂದ
ನಗುವು ನಲಿವಿನ ಚಿಗುರು
ಚಿಮ್ಮಿ ಮೊಳೆಯುವುದೇನೋ
ಕಾಯಬೇಕು
ಕಾಲ ಕರುಣೆಯ ಮಂತ್ರ ದಂಡದಲಿ
ಹಸಿ ಹಸಿಯ ಗಾಯಗಳು
ಮಾಯಬೇಕು!!

## ಕಿಷ್ಕಿಂಧೆ

ಹೆಬ್ಬಂಡೆ ಗುಂಡುಗಳ ಹಾದಿ
ದೈತ್ಯ ಮರಗಳ ನೆರಳ ಕೊಡೆ ಸಾಲು
ಹೆಜ್ಜೆ ಮುಳುಗುವ ಹಸಿರ ಹಿರಿಯ ಕಡಲು
ಗಂಭೀರ ಮೌನದಾವರ್ತನೆ ವರ್ತುಲ ಕೋಶ

ರಾಜನಿಲ್ಲದ ರಾಜ್ಯ ಗದ್ದಲದ ಸಂತೆ
ಅಸ್ತವ್ಯಸ್ತ ಮಂದಿ ಮಹಾಜನಗಳ ಬೊಂತೆ
ತನಗೆ ತಾನೇ ರಾಜ ಕೇಳುವವರಿಲ್ಲ
ಇದ್ದಷ್ಟು ದಿನ ಇರಲೆಂಬುದಷ್ಟೇ ಬಯಕೆ

ಏಳು ಬೀಳಿನ ಜಾರುಗಲ್ಲಿಗಳಲ್ಲಿ
ಗಸ್ತು ಗಮ್ಮತ್ತುಗಳು ಮರೆತು
ಭೂತ ಭೇತಾಳಗಳ ಹೆಜ್ಜೆಯನುಕರಣ
ಗೀತೆ ಗತಿ ಸಮಶೃತಿಯ ಮರೆತ ಗೆಜ್ಜೆಗಳ ರಿಂಗಣ
ಬಳ್ಳಿ ಗಿಡ ಮರವೆಲ್ಲ
ಬುವಿ ಬಾನು ಬಯಲೆಲ್ಲ
ಮಂಗ ಚೇಷ್ಟೆಯ ಮಾಯಾ ಬಜಾರು
ಕೈಗೆ ಎಟುಕಿದ್ದನ್ನು
ಕಾಲ್ಗೆತೊಡರಿದ್ದನ್ನು
ಕಣ್ಣಸೆಳೆದದ್ದನ್ನು ಸಿಕ್ಕು ಸಿಕ್ಕದ್ದನ್ನು
ಹೆಕ್ಕಿ ಕುಕ್ಕಿ ತೆಗೆ ತೆಗೆದು ಜಿಗಿದು
ಅಳತೆ ಮೀರಿದ ಬಾಲಗಳ
ಅಳೆದೆಳೆದು ಮುದವೇರಿ ಮದ ಮೀರಿ
ಚಿಗುರು ಹೊಸಕಿದ ಖುಷಿಗೆ
ಮೂರು ಗೇಣಲಿ ದೊರೆತ
ಸ್ವರ್ಗ ಕನಸಿನಲಿ ಮಗ್ನ ಮನಸು

ಶಾಪ ಗ್ರಸ್ತ ಕಿಷ್ಕಿಂದೆಯ ಕೋನಗಳಲ್ಲಿ
ಅಪಶಕುನದ ಹಕ್ಕಿಗಳ ಹಾಡಿನನುರಣನ
ಕೋಟೆ ಕೊತ್ತಲದೆದೆ ತುಂಬ ಬಿಕ್ಕುಗಳು
ಬಿಡಿಸಲಾಗದ ಕಾಲಾಕಾಲದ ಸಿಕ್ಕುಗಳು
ಚತುಷ್ಪಾದಿಗಳು ಸುಳಿದಾಡಿ ಸವೆದ ಹಾದಿಗಳಲ್ಲಿ
ಶಾಪಗ್ರಸ್ತ ಕಲ್ಲು ಬಂಡೆಗಳ ಕಿಷ್ಕಿಂಧೆಯಲ್ಲಿ
ಹಸಿರ ಕಡಲಿನ ನಡುವೆ ನಿಂತ ಬರಡು ದ್ವೀಪದಲ್ಲಿ
ಬೆಳೆಯುವುದಿಲ್ಲ ಜೀವಕೋಶ
ಬೆಳೆದರೂ ಉಳಿಯುವುದಿಲ್ಲ ಏನೆಂದಿಗೂ!
ಕಾಡುವ ಕಪಿದಂಡು ಇರಲೆಂದಿಗೂ!

ಅರಾಜಕತೆಯ ವ್ರಣಕೆ ಮುತ್ತಿದೆ ನೊಣ
ಸಾಯಲಾರದೆ ಬದುಕಲಾರದೆ ನರಳಿದೆ ಹೆಣ
ಸತ್ತ ಕಣ್ಣುಗಳ ಆಳದಲ್ಲೆಲ್ಲೋ
ಬೆಳಕು ಬಿತ್ತಿದೆ ಹೊತ್ತಿ ಆಸೆ ಪಂಜುಗಳು

ಬರುವ ಹಕೀಮನ ನಿರೀಕ್ಷೆಯಲಿ
ಎದೆಯೊತ್ತುವ ಭಾರದ ಹೊರೆಯ ಇಳುಹಬರುವವನ ಕನಸಿನಲಿ
ಕಳೆದವಳ ಕೂಡಿ ಕಾಮದಾತುರ ಕಳೆವ
ಹೆಬ್ಬಯಕೆಯ ಭಾವಸಮಾಧಿಯಲಿ ಸುಗ್ರೀವ
ನಿಸ್ಪಂದ ಅಜ್ಞಾತವಾಸದಲಿ ಮೈಮರೆಸಿ
ಬಂಡೆ ಬಾಳಿನಲಿ ಸುಖವ ಕೊನರಿಸಲು
ಕಾದು ಕುಳಿತಿದ್ದಾನೆ ರಾಮ ಬರವನು ಬಯಸಿ

# ವಿಳಾಸದ ಪತ್ತೆಯಲ್ಲಿ

ನೆನಪಿಗೇನು ಕೊರತೆ ಇರಲಿಲ್ಲ
ಅವನು ಕೊಟ್ಟ ವಿಳಾಸದ ಚೀಟಿಯೂ ಕಳೆದಿರಲಿಲ್ಲ
ಹಾಗಾಗಿ ಮನೆ ಹುಡುಕುವುದೂ ಕಷ್ಟವಲ್ಲ
ಎಂದು ಬೇಕಾದ ಮನೆ ವಿಳಾಸ ವಿಚಾರಿಸುತ್ತ ನಡೆದೆ

ಅಪ್ಪ ಒಂದೊಂದು ಗುರುತು ವಿವರಿಸಿದ್ದ
ನಡೆದಲ್ಲಿ ನಗುವುದು ನಂದನವನ
ನಿಂತಲ್ಲಿ ಸಾಲು ಮರಗಳ ನೆರಳ ಕೊಡೆ ಮುಡಿ ಬಿಚ್ಚುವುದು
ಅಷ್ಟಷ್ಟು ದೂರಕ್ಕೂ ಅಚ್ಚೋದ ಕೊಳಗಳ ತಂಪುದಾಣ
ನಡೆ ನಡೆದೂ ಮುಳ್ಳುಗಳೇ ಮೆತ್ತಗಾಗಿ
ಹೆಜ್ಜೆಗಳಿಂದ ಸಿಡಿದ ರಕ್ತ ಕುಡಿದು ಕೆಂಪಾಗಿ
ನಿಟ್ಟುಸಿರ ಧೂಪವೇ ನಿತ್ಯ ಅರಳುವ ಗುಲಾಬಿಗಳಾಗಿ
ದಣಿವಿಲ್ಲದೆ ಸಾಗುವುದು ಹಾದಿ ಎಂದಿದ್ದ
ಊರು ಗಲ್ಲಿ, ಮನೆ, ನಂಬರು ಇತ್ಯಾದಿ ಇತ್ಯಾದಿ
ಅಚ್ಚುಕಟ್ಟಾಗಿ ವಿವರಿಸಿದ್ದರೂ ನನ್ನ ಆತುರದಲಿ
ನನ್ನ ನಾನೇ ಮರೆತು ದಾರಿಗಳಿಗೆ ತಡಕಾಡಿದೆ
ತಲುಪಬೇಕಾಗಿದ್ದ ಮನೆಗೆಂದು ಹುಡುಕಾಡಿದೆ
ಅಂದಷ್ಟು ಅಂದುಕೊಂಡಷ್ಟು ಸರಳವಿರಲಿಲ್ಲ
ರಣ ಬಿಸಿಲ ಮಳೆ ಹೆಜ್ಜೆ ಅಡಿಯಲ್ಲಿ ಬೆಂಕಿ ಹೊಂಡ
ನೆರಳು ನಾಲಗೆ ಬತ್ತಿ ಬಿಕ್ಕುತ್ತಿದ್ದ ಮರಸಾಲು
ನಡೆ ನಡೆದು ಬಾವು ಗಟ್ಟಿದ ಕೀಲು ಮುರಿದ ಕಾಲು
ಬವಳಿ ಬರುವ ಕಂಗಳಿಗೆ ಕಂಡದ್ದು
ವೈಭವದ ನೆನಪುಂಡೇ ಉಳಿದೊಂದು ಬೋಳುಮರ
ಎತ್ತ ಸಾಗಿದರೂ ಮತ್ತೆ ಮತ್ತೆ ಅದೇ ದಾರಿ
ಹೊರಟ ನೆಲೆಗೇ ತಲುಪುತ್ತಿತ್ತು ಸವಾರಿ

ಹಗಲ ನುಂಗಿದ ಕತ್ತಲ ರಾಕ್ಷಸನ ಧಾಳಿ
ಹೆಪ್ಪುಗಟ್ಟಿದ ಭೀತಿ ಭೂತ ಬೆನ್ನಲ್ಲಿ
ಯಾರೂ ಹಾಯದ ಹಾದಿಯಲಿ ನಿಂತದ್ದು

ನೆನಪಾಗಿ ಎದೆಯೊಡೆದು ಹೊರಟ ಚೀತ್ಕಾರ
ಗಂಭೀರ ನೀರವತೆಯಲ್ಲಿ ಅನುರಣಿಸಿ
ಕ್ಷಣದಲ್ಲಿ ಒಂಟಿತನ ಮರೆಯಾಗಿ
ನಾಳೆ ಬೆಳಗ್ಗೆ ಒಡೆವ ಹೆಜ್ಜೆ ಸಪ್ಪಳ ಕನಸು
ಕಾಣುತ್ತಾ ನಾ ಸಮೆದ ಹಾದಿ ಅಳೆಯ ತೊಡಗಿದೆ

# ರಾಜಕುಮಾರ

ನನ್ನ ರಾಜಕುಮಾರನ ಮನಸು ಕಲ್ಲು
ಕರಗುವುದಿಲ್ಲ ಸುಲಭವಾಗಿ
ಅವನಿಗಾಗಿಯೇ ಆಸೆ ಕಣ್ಣುಗಳ ಹಾಸಿದ್ದೇನೆ

ಯಾವ ಮೋಜಿಗೆ ಏನೊ ಎಲ್ಲೋ ಹೋಗಿ
ಮರೆಸಿಕೂರುತ್ತಾನೆ; ಕಣ್ಣಾ ಮುಚ್ಚಾಲೆಯಾಡುತ್ತಾನೆ
ಸಪ್ತಸಾಗರ ದಾಚೆ ನೀಲನಗರಿಯೆ ರಾಜ್ಯ
ಸ್ವರ್ಣ ಗಿರಿ ಕೋಡಿನಲಿ ಬೆಳಕಿನರಮನೆ ಭವ್ಯ
ಕ್ಷಣಕ್ಕೊಂದು ವೇಷ ಮರೆಸಿ ಕಾಣದ ರೂಪ ಧರಿಸಿ
ಮುಗಿಲಲ್ಲಿ ಮುಗುಳಲ್ಲಿ ನೆಲದಲ್ಲಿ ಬಾನಲ್ಲಿ
ಕಣಕಣದ ಉಸಿರಲ್ಲಿ ನೂರೆಂಟು ಹೆಸರಲ್ಲಿ ಚಲಿಸುತ್ತಾನೆ

ಹೇಗೆ ಹಿಡಿಯುವುದಿವನ. ಇದ್ದರೂ ಇಲ್ಲದವನ
ಕಂಡರೂ ಕಾಣದವನ ಕನಸಲ್ಲಿ ಸೆರೆಹಿಡಿಯುತ್ತೇನೆ
ಕಾಣ ಬರದವನ ನೆನಪಿನೀಟಿಗಳಿಂದ ಘಾಸಿಗೊಂಡಿದ್ದೇನೆ
ಎಣಿಸಲಾಗದ ಯುಗಗಳನ್ನೇ ಹಾಯುತ್ತ ಬಂದಿದ್ದೇನೆ

ವಸಂತದ ಬಣ್ಣಗಳಳಿದು ಶಿಶಿರ ಮಂಜು ಕವಿದು
ಒಳಗೊಳಗೆ ಸೊನೆ ಬತ್ತಿ ಮೈಮನವು ಪೊರೆ ಗಟ್ಟಿ
ಅವನ ಬರವಿನ ಭರವಸೆಯ ಸ್ಯಾಲೈನ್ ಕುಡಿದು
ಹಗಲಲ್ಲಿ ಕಣ್ಮುಚ್ಚಿ, ಇರುಳಲ್ಲಿ ಕಣ್ಣರಳಿಸಿ
ಕಾಣದ ಮುಖಕ್ಕಾಗಿ ಪರದಾಡುತ್ತೇನೆ
ದಣಿದ ಬೆರಳುಗಳಿಂದ ಕಾಳ ಭಿತ್ತಿಯಲಿ
ಹೊಳೆವ ಬೆಳ್ಳಿ ಮುಖವ ಬಿಡಿಸುತ್ತೇನೆ
ನನ್ನ ಉಸಿರೆಂದು ಜೀವ ತುಂಬುತ್ತೇನೆ

ಎತ್ತರದ ಬತೇರಿಗಳೇರಿ ಮಾಯೋಪಿಯ ದೃಷ್ಟಿ
ದೌಡಾಯಿಸಿ ಬರುವ ಅವನ ಕುದುರೆಯ
ಹೇಷಾರವಕ್ಕಾಗಿ ಕಾದು ಕೂರುತ್ತೇನೆ
ಶಾಪಕ್ಕೆ ಕಲ್ಲಾದ ಅವನ ಮನಕರಗಲು ಕಾಯುತ್ತೇನೆ

ಗೊತ್ತಿದೆ ನನ್ನೆದೆಯಿಂದ ಅವನ ಒಸರುವ ವ್ಯಥೆ
ಬಯಸಿಯೂ ಬಯಸಲಾಗದಾ ನನ್ನ ಅಸಹಾಯಕತೆ
ಇಂದಲ್ಲ ನಾಳೆಯಾದರೂ ಬಂದರಷ್ಟೆ ಸಾಕು
ಯುಗ ಯುಗ ದಾಚೆಗೂ ನನ್ನ ನೆನಪು ಖಾತ್ರಿಯಾಗಬೇಕು

# ಫ್ಯಾನ್ಸಿ ಡ್ರೆಸ್

ಕಾಲೇಜಿನ ಫ್ಯಾನ್ಸಿ ಡ್ರೆಸ್ ಸ್ಪರ್ಧೆಗೆ
ವೇಷ ಆರಿಸುವುದೊಂದೇ ಸಮಸ್ಯೆ
ಯೋಚಿಸಿದಷ್ಟೂ ಹೊಳೆಯಲೇ ಇಲ್ಲ
ಎಂಥ ವೇಷ?

ವೇಷದಂಗಡಿಗೇ ಹೋದರಾಯ್ತೆಂದು
ಆಟೋ ಹಿಡಿದು ಗಲ್ಲಿ ಗಲ್ಲಿ ತಿರುಗಿ
ಕೊನೆಗೆ ತಲುಪಿದೆ ಠಿಕಾಣಿ

ಅಂಗಡಿಯಲ್ಲಿ ಅದೊಂದು ಮಾಯಾ ಬಜಾರು
ಒಂದೇ ಎರಡೇ ನೂರೆಂಟು ಡ್ರೆಸ್ಸುಗಳು
ಯಾರ ಯಾರ ತಲೆಗೆಂದೋ ಸಾಲಿಟ್ಟ ವಿಗ್ಗುಗಳು
ರಾಮನಿಗೂ ಭೀಮನಿಗೂ
ಭರಮನಿಗೂ ಹನುಮನಿಗೂ ಬೇಕಾದ
ಭಲ್ಲೆ ಬಾಣಗಳು ಗದೆ ಗಾಂಡೀವಗಳು

ಅವರವರ ವಯಸು ಕನಸಿಗೆ ತಕ್ಕ
ಜರತಾರಿ ಮೇಲಂಗಿ ಜರಿಪಂಚೆ
ಮಿಂಚು ಬೆಳಕಲಿ ಹೊಳೆವ ಗಿಲೀಟಿನೊಡವೆಗಳು
ಸೆಳೆವ ಚುಂಬಕದ ತೊಡವು ತಲೆ ಪೇಟಗಳು
ಸಂತ ಸೈತಾನ ದೇವ ದಾನವರೊಗೆದ
ಕಾಮಣ್ಣ ಕೋಡಂಗಿ ವೇಷಗಳಿಗೆಷ್ಟೋ ಲೆಕ್ಕವಿಲ್ಲ
ಒಂದೊಂದರಲ್ಲೂ ರೂಪಾಂತರ ರೂಪ ಕಲ್ಪಿಸಿಕೊಂಡೆ
ದಿನ ನಿತ್ಯದ ನಾಟಕಕ್ಕೆ ಒಂದೆಲ್ಲಿ ಸಾಕು
ಇಂದೊಂದು ನಾಳೆ ನಾಳಿದ್ದು ಒಂದೊಂದು

ವೇಷದಂಗಡಿಯನ್ನೇ ಕೊಳ್ಳುವ ಬಯಕೆ
ವರುಷ ವರುಷಕ್ಕೊಂದು ಸ್ಪರ್ಧೆ ಇದ್ದೇ ಇದೆ
ಇರಲಿಷ್ಟೂ ವೇಷಗಳೂ ಬಣ್ಣದ ಮುಖವಾಡಗಳು?
ಎನಿಸಿ ಅಂಗಡಿಯವನ ಕೇಳಿದೆ

ನಕ್ಕವನು ನುಡಿದ ಯಾವ ವೇಷವೂ ಖಾಲಿಯಿಲ್ಲ
ಈಗಾಗಲೆ ಮಂದಿ ಇವೆಲ್ಲಾ ಕಾದಿರಿಸಿದ್ದಾರೆ
ಯಾವ ಕ್ಷಣದಲ್ಲಿ ಯಾವುದಕ್ಕೆ ಬೇಡಿಕೆಯೋ
ರಾಜಕಾರಣ ರಂಗಮಂದಿರದಲ್ಲಿ ದಿನನಿತ್ಯ
ವೊಂದೊಂದು ಹೊಸ ನಾಟಕ
ಯಾರಿಗೆ ಯಾವುದು ಬೇಕಾಗುವುದೋ
ಹೇಳಲಾಗುವುದಿಲ್ಲ.
ಅವನುತ್ತರ ಆಸೆ ಗುಳ್ಳೆಯನೊಡೆದಿತ್ತು
ನನ್ನ ಸ್ಪರ್ಧೆಯ ವೇಷ ಮರೆತು
ಈಗಿನ ನನ್ನ ವೇಷದ ಪೊರೆಗಳ
ಕಳಚಿ ನೋಡಲು ಬಯಸಿ ನಡೆದೆ
ಕನ್ನಡಿಯ ಮುಂದೆ ನಿಂತವಳೆ ಕೇಳಿದೆ
ನಾ ತೊಟ್ಟ ವೇಷದ ಬಣ್ಣಗಳ ಮೂಲ
ಎಲ್ಲಿದೆಯೆಂದು ತಡಕಾಡಿದೆ

# ವಿಮೋಚನಾ

ಸಹಸ್ರ ಸಹಸ್ರ ವರ್ಷ
ಸಂಭ್ರಮದ ನಿದ್ದೆಯಲಿ
ಮಲಗಿದ್ದ ಮಗು
ವಿಮೋಚನಾ
ಇದೀಗ ಹೊಡೆದೆದ್ದು
ಜಡಿದೆದ್ದು
ಅಲಸಿಕೆಯ ಒದ್ದು
ಸರ್ಕರಾಮ ಕಣ್ಣು ಸುತ್ತಿದಾಗ
ಕಾಣುತ್ತದೆ
ಅಂಬೆಗಾಲಿನವಸ್ಥೆಯಲಿ
ದಟ್ಟ ಕತ್ತಲ ಸೆರೆಯ ಕೋಶದಲಿ
ಸುಳಿದು ಸುತ್ತಿದ ತಾನು
ಗುರುತು ಮೀರಿ ಬೆಳೆದದ್ದು
ವಿಶಾಲ ಬಯಲಿನ ಬೆಚ್ಚ ಬೆರಗಿನ ಬಣ್ಣ ಬೆಳಕುಗಳು
ತನಗೆ ಬಯಸುವ ಸ್ವಾಗತ
ಬತ್ತಲಾಗಿ ತೆರೆದು ನಿಂತ ಹಾದಿಗಳು
ಅನಂತ
ಓಡುವ ನಡೆವ–ಕುಪ್ಪಳಿಸುವ
ಬೀದಿಗಿಳಿದು ಗಂಟಲು ಹರಿದು
ಘೋಷಣೆಯ ಕೂಗುವ ಬಲ
ಎದೆ ಕೈಕಾಲುಗಳಲ್ಲಿ ದಟ್ಟಯಿಸಿರುವುದು
ಅನಿರ್ಬಂಧ ಆಸೆಗಳಿಗೆ
ಹೆಜ್ಜೆ ಮೂಡಿರುವುದು!
ಅಂಕೆ ಅಂಕುಶದ ಅಂಕಿ ಲೆಕ್ಕಗಳು
ಹೆದರಿ ಹಿಮ್ಮೆಟ್ಟಿ

ನಿಮ್ಮದೇ ಜಯ ! ನಿಮ್ಮದೇ ಜಯ
ಎಂಬ ನಿರ್ಘೋಷದ ಘೋಷದ
ತುತ್ತೂರಿ ಮೊಳಗಿನ
ಸ್ವಾಗತಕ್ಕೆ
ನಿದ್ದೆ ಜಡ ಜಾರಿ
ಕಂಬನಿಯ ಕಡಲುಗಳು ಸೋರಿ
ಅದ್ಭುತ ರೋಮಾಂಚದ
ಮೊಗ್ಗರಳಿ
ಮಾದಕ ಪೇಯದಮಲು ಮೀರಿದಾಗ
ಮುಗುಳು ನಕ್ಕು
ಕನಸು ನನಸುಗಳು
ಕತ್ತಲು ಬೆಳಕುಗಳ ಅಂತರವರಿದು
ಮೈ ಚಿವುಟಿ ಖಾತರಿ ಪಡಿಸಿ
ಕೈ ಚಾಮರ ಬೀಸಿ
ಪ್ರಬುದ್ಧ ಅಂಕು ಡೊಂಕುಗಳ ವಿಕಾಸಕ್ಕೆ
ಹೆಮ್ಮೆಯ ರೆಕ್ಕೆ ಪುಕ್ಕಗಳ ಹಚ್ಚಿ
ಹಾರುವ ಮೊದಲ ಪಾಠ ಕಲಿತೆ
ಹಕ್ಕಿಯಂತೆ
ಆಕಾಶದಗಲ ವಿಸ್ತಾರಗಳ
ಅಳೆವ ಹುಮ್ಮಸ್ಸಿನಲಿ
ಜಿಗಿಜಿಗಿದು ಹಾರಿ
ದೂರ ನೀಲಿಮೆಯಲ್ಲಿ
ಕರಗಿ ಕಾಣದಾದಾಗ
ಆರಂಭದುತ್ಸಾಹದಲ್ಲಿ
ಹಾರುವ ಈ ಹಕ್ಕಿ
ಯಾವ ತೀರವ ಸೇರಿ
ಯಾವ ಗಿಡದ ಕೊಂಬೆಯೇರಿ
ದಿಗ್ವಿಜಯ ಸಂದೇಶ ಕಲಿಸುವುದೋ
ಕಾಯಬೇಕು
ಕಾಯಬೇಕು

# ಪ್ರಿಯನಿಗೆ

ಬಾ ಪ್ರಿಯ
ನೀ ಬರುವೆಯೆಂದೇ
ಕಾದು ಕುಳಿತಿದ್ದೇನೆ
ಮನ್ವಂತರಗಳಿಂದಲೂ
ನೀ ಬರುವುದು ಖಾತ್ರಿಯೆಂದೇ
ನಟ್ಟಿದ್ದೇನೇ ನಿನ್ನ ಹಾದಿಗೆ ಕಣ್ಣ
ನೀ ಬರುವ ಕನಸನ್ನೇ ಮುಡಿದಿದ್ದೇನೆ
ಇಂದಲ್ಲವಾದರೂ ನಾಳೆ
ಬರುವೆಯೆಂದೇ ಬಾಧೆಗಳ ನುಂಗಿದ್ದೇನೆ
ನಿನ್ನ ಕೆಲಸಗಳೆಷ್ಟೊ
ಗೆಳೆಯರಂಕಿಗಳೆಷ್ಟೊ
ನಿನ್ನದೆಂಬುದೊಂದಿಲ್ಲ ಗಳಿಗೆ
ಮನೆಮನೆಗೆ ಬರುವೆ
ಒಲಿದವರ ಕರೆವೆ
ಕಂಡಿಲ್ಲವಾದರೂ ನಿನ್ನನೆಂದು
ನಿನ್ನೆತ್ತರ ಗಾತ್ರಗಳ ಗುರುತಿಲ್ಲ
ವಾಸ ವಿಳಾಸಗಳಂತು ತಿಳಿದೆ ಇಲ್ಲ
ಊಹೆ ಪುಟಗಳ ಮೇಲೆ
ಬಿಡಿಸುತ್ತಾರೆ ಬಣ್ಣಗಳ ಚಿತ್ತಾರ
ನಿನ್ನ ಸ್ನೇಹದ ಮಾಂತ್ರಿಕ ಸ್ಪರ್ಷ
ದನುಭವಗಳ
ರಸರೂಪ
ಕತೆಯಾಗಿ ಹಾಡಾಗಿ ಹರಿಸುತ್ತಾರೆ
ನಿನ್ನಾತಿಥ್ಯದ ರುಚಿಯ
ಹೊಗಳಿ ಹೊಗರೇರುತ್ತಾರೆ

ಅದರೆಲ್ಲಿ ಹೇಳು ನಿನ್ನ ರೂಪ
ನೀ ನನ್ನ ಕನಸಿನ ಭೂಪ
ಹೇಳು ನೀ ಬರುವೆಯೆಂದು
ನನ್ನ ಅರಮನೆಗೆ
ಪ್ರೀತಿ ತೋರಣಗಳಿಂದ ಸಿಂಗರಿಸಿ
ಕಾದಿರುವ ನನ್ನ ಸಿರಿಮನೆಗೆ
ಬರುವೆಯಾದರೆ ಮೊದಲೆ
ತಿಳಿಸಿ ಬಾ ಪ್ರಿಯ
ಮಿಂಚಿನಂತೆ ಬರಬೇಡ ಸಿಡಿಲಂತೆ ಬರಬೇಡ
ಬಂದು ಬಾ ಎಂದು
ಅವಸರಿಸಬೇಡ
ತೌರಿನೆದೆಗೊಮ್ಮೆಯೇ ಕಿಚ್ಚನಿಟ್ಟು
ಅಗಲಿಕೆಯ ಅಳಲ ಕಡಲುಕ್ಕಿಸಿ
ಇಷ್ಟು ದಿವಸದ ಬದುಕು ಬಣ್ಣಗಳ ಕಳಚಿ
ಇದ್ದಕಿದ್ದಂತೆ ಎದ್ದು ಹೋದರೆ ಹೇಗೆ?
ಅಮ್ಮನಕ್ಕರೆಯೂಟ
ಅಪ್ಪನಂತಃಕರಣ ಮಾಟ
ಆಪ್ತರೊಲುಮೆಯ ಸ್ನೇಹಗಳ ಸವಿಯಾಟ

ಹಬ್ಬ ಸಂಭ್ರಮ
ಹೂವು ವೀಳೆಯ ಮುಯ್ಯಿ
ಮಾನ ಸುಮ್ಮಾನಗಳು ಹೇಗೆ ಸಾಧ್ಯ?
ಬರುವರೆಷ್ಟೋ ಮಂದಿ
ಹೋಗುವವರೆಷ್ಟೋ ಮಂದಿ
ನಡುವೆ ದಟ್ಟಣಿಯಲ್ಲಿ ನುಗ್ಗಿ ಬರುವೆ
ಬಂದರೂ ಬಾರದಲೆ
ನಾಚಿ ಮರೆಯಾಗುಳಿದು
ಯಾವ ಮಂತ್ರದ ಮೋಡಿ
ಮಾಡಿ ಕರೆದೊಯ್ಯುವೆ
ನಿನ್ನ ಪ್ರೇಯಸಿ ನಾನು
ಜನುಮ ಜನುಮದ ಬಂಧ

ಬಿಟ್ಟುಳಿವೆನೆಂತೋ! ಭಯವೇತಕೆ?
ಕಣ್ಣ ಕಾಯಾಗಿಸಿ ಹಾದಿ ಕಾಯುತಲಿರುವೆ
ನನ್ನಡೆಗೆ ಬರುವಾಗ ಅದೃಶ್ಯವೇಕೋ
ಬಂದೆ ಬರುವೇ ಅಹುದು

ಬರುವಾಗ ಸುದ್ದಿಯೊಂದಾದರೂ ತಿಳಿಸಿ ಬಾ
ಲೋಕ ನಾಟಕದೊಳಗೆ
ನನಗೊಬ್ಬ ಗಂಡ
ನನಗುಂಟು ನೂರೆಂಟು ನಂಟು!
ನಿನ್ನ ಕರೆ ಕೇಳಿದರೆ ನೀನೊಮ್ಮೆ ತೋರಿದರೆ
ಕಟ್ಟಿಕೊಂಡ ಗಂಡ
ಉಟ್ಟು ಕೊಂಡ ಬಟ್ಟೆ
ಪ್ರೀತಿಯ ತವರು
ಏನೆಲ್ಲನನ್ನದೆನ್ನುವುದುಂಟು
ಒದ್ದು ಬರುವೆ
ನನ್ನ ಚಿರ ಪ್ರಿಯತಮನೆ
ನನ್ನಾತ್ಮ ಸಖನೆ,
ಗೊತ್ತು ನನಗಿವರಲ್ಲ ನನ್ನವರು
ಅವಕಾಶವಾದಾಗಲೆಲ್ಲ
ಪೀಡಿಸುತ್ತಾರೆ ಕಾಡಿಸುತ್ತಾರೆ
ಮೋಸವನೊಡ್ಡಿ
ನನ್ನ ಮಾಂಸಕ್ಕೆ ಕಿಚ್ಚಿಟ್ಟು ಬೇಯಿಸುತ್ತಾರೆ
ನಂಬಿಕೆಯ ಉರುಲು ಹಾಕುತ್ತಾರೆ
ಬೇಡ ಬಾ ಇನಿಯಾ
ಬೇಗ ಬಾ ಇನಿಯಾ
ಯಾವುದೂ ಬೇಡ
ಯಾರೂ ಬೇಡ
ನೀ ಬಂದರೆ ಸಾಕು
ನನ್ನ ಹೆಜ್ಜೆಗೆ ರೆಕ್ಕೆ ಮೂಡುತ್ತವೆ
ಅಮೃತ ಲೋಕದ ಕನಸುಗಳು ಅರಳುತ್ತವೆ
ಚಿರಶಾಂತಿ ಮಂತ್ರದ ಮಧುರ

ಘೋಷದ ಜೋಗುಳಕೆ
ಹಾತೊರೆವ ನನ್ನದೆಯ ತಣಿವಿಗೆ
ನಿನ್ನಪ್ಪುಗೆಯ ಶೀತಲ ಸಾಂತ್ವನಕೆ
ಕಾದವಳ ಕರೆದೊಯ್ಯಿ
ಬಾರೊ ಪ್ರಿಯತಮನೆ

# ಓ ಬಂಧು

ಓ ಬಂಧು
ಕಪ್ಪುಕೋಟೆಯ ಕತ್ತಲ ಪರದೆಗಳ
ಸರಿಸಿ ಅಗಲಿಸು ಕಣ್ಣು
ದೀನ ದಲಿತ ಹೆಸರುಗಳಲ್ಲಿ
ನಾಲಗೆಯು ಓಡಾಡಿ
ಸೂಳೆ ಸಂಹಿತೆಯೊಂದು ಸಮಯ ಸಿದ್ಧ
ಸಿದ್ಧರು ಬುದ್ಧರು
ಎದ್ದವರು ಬಿದ್ದವರು
ನಿನ್ನ ಗುರುತಿನ ಧ್ವಜದಡಿಯಲ್ಲಿ
ಸಾಗಿ ಮುಂದಿದ್ದಾರೆ
ಮೆರವಣಿಗೆಯಲ್ಲಿ
ದಲಿತೋದ್ಧಾರ ಬೋರ್ಡುಗಳಿಗೀಗ
ದುಬಾರಿಯಾದರೂ ಬೆಲೆ
ಬೇಡಿಕೆಗೆ ಇಲ್ಲವಾಯಿತು ಕೊರತೆ
ಬೆನ್ನು ಕಚ್ಚಿದ ಹೊಟ್ಟೆಗಳು
ಬೆತ್ತಲೆ ಬಳಸಿದ ಮೈ ಗಳು
ಕಡಲು ತುಂಬಿದ ಕಣ್ಣುಗಳು
ಅಸ್ಥಿಪಂಜರ ಸೇನೆಗಳು
ನಿಮ್ಮ ಸಹಕಾರ ಸೌಭಾಗ್ಯವೇ ನಮ್ಮ ಭಾಗ್ಯ
ಇಷ್ಟು ದಿನ ಇದ್ದವರು
ಗದ್ದೆ ಕೆಸರಲಿ ಬಿದ್ದವರು
ನಿಟ್ಟುಸಿರ ಗುಂಜನ ನಮ್ಮದೆಗೆ ಭಂಜನ
ನಿಮ್ಮ ನರಳಿಕೆ ಚೂರಿ
ಗೋಡೆ ಕಟ್ಟದಿರಲಿ ದಾರಿ
ನಿಮ್ಮ ಬೆವರಿನ ರಕ್ತ

ಹಸಿದ ಒಡಲಿನ ಕೂಗು
ಕ್ಷಣ ಕ್ಷಣದಿ ಕಾಡುವ
ಸಾವು ನೋವು
ಬೆಲೆಯ ಕಟ್ಟಿದ್ದೇವೆ
ದುಂಡು ಮೇಜಿನ ಚರ್ಚೆ
ನಡೆಸಿದ್ದೇವೆ
ಬಿಳಿಯ ಹಾಳೆಯ ತುಂಬಾ
ಲಕ್ಷ ಯೋಜನೆ ಪಟ್ಟಿಸಿಧ್ಧ ಪಡಿಸಿದ್ದೇವೆ
ನಿಮ್ಮ ಓಟುಗಳಲ್ಲಿ
ನಮ್ಮ ಗದ್ದುಗೆ ಭದ್ರ ಒಮ್ಮೆ ಮೆಟ್ಟಿಲಾಗಿ ನಮ್ಮ
ಉಪ್ಪರಿಗೆ ಸೇರಿಸಿ
ಗಾದಿಯಲ್ಲಿ ಕೂರಿಸಿ
ನಾಳೆ ಕನಸುಗಳೆಲ್ಲ
ಕಾಯಿಟ್ಟು ಹೂವು ಹಣ್ಣಾಗುತ್ತೆ
ಕೋಟಿ ಕೋಟಿಗಳಲ್ಲಿ
ಕಾಂಚಾಣ ಸುರಿದು
ಸೂರಿಲ್ಲದ ಮಳೆಗಷ್ಟೇ ನಿಲ್ಲದ ಮಹಡಿಗಳ
ನಿರ್ಮಿಸುತ್ತೇವೆ
ನಿಮ್ಮ ಆಪತ್ಕಾಲಕ್ಕೆಂದೇ
ನಮ್ಮ ತಿಜೋರಿಗಳಲ್ಲಿ
ಕಪ್ಪು ಹಣ ಬೆಪ್ಪು ಹಣ
ಭದ್ರಪಡಿಸುತ್ತೇವೆ
ನಡೆಯಲಾರದ ನಿಮ್ಮನೆತ್ತಿ
ನಿಲ್ಲಿಸುತ್ತೇವೆ
ನಮಗೆ ಗೊತ್ತು
ನಿಮ್ಮ ತಾಕತ್ತು
ತೆವಳುವ ನಿಮ್ಮ ಮೇಲಿಷ್ಟು
ಯೂರಿಯಾ ಗೊಬ್ಬರ ಸುರಿದರೆ
ಗುಲಾಬಿ ಗಿಡಗಳಾಗಿ ನಗುತ್ತೀರಿ
ನಿಮ್ಮ ನೆಂದಾದರೂ ಬಿಟ್ಟು ಕೊಟ್ಟೇವೆ?
ನಮ್ಮ ಗದ್ದುಗೆ ಗಟ್ಟಿಯಾಗಲಿ

ಮುಖ ಪುಟಗಳಲ್ಲಿ
ದೈತ್ಯಾಕ್ಷರಗಳಲ್ಲಿ
'ದಲಿತ ದೇವರೆಂದು'
ನಾಮಕರಣವಾಗಲಿ
ಬಂದೇ ಬರುತ್ತೇವೆ
ಗೋರಿಯಾಗಿದ್ದರೂ ಚಿಂತೆಯಿಲ್ಲ
ಅಗೆಸಿ ತೆಗೆಸಿ
ಬದುಕಿಸುತ್ತೇವೆ
ದಲಿತ ಹೆಸರಿಗೆ ಚಿನ್ನದ ಚೌಕಟ್ಟು
ಹಾಕಿಸುತ್ತೇವೆ
ಭೂತಾಕಾರದ ಬಾವುಟ – ತರಿಸಿ
ಮುಗಿಲ ಬೆಟ್ಟಗಳಲ್ಲಿ ನಾಟುತ್ತೇವೆ
ನಿಮ್ಮ ಹೆಸರೇರಿರುವೆತ್ತರವ
ಎತ್ತಿ ನೋಡು
ಬಂಗಾರ ನಾಳೆಗಳ
ಬುತ್ತಿ ಭದ್ರತೆಗೀಗ
ಸಿದ್ಧನಾಗು
ಧನ್ಯ ಬಾವದಿ ನಮ್ಮ
ನಿದ್ದು ನೋಡು
ಓ ಬಂಧು
ನಮ್ಮ ಮಾತೆಂದೂ
ಬೊಗಳೆ ಭರವಸೆಯಲ್ಲ
ನಿಮ್ಮ ಓಟಿನ ಮೂಟೆ
ನಮ್ಮ ಭರವಸೆಯ ಕೋಟೆ
ಹೌದಲ್ಲವೇ ಬಂಧು?

## ಸ್ವಾತಂತ್ರ್ಯ ಗೀತೆ

ಆಗಸ್ಟ್ ಹದಿನೈದು
ಕ್ಯಾಲೆಂಡರಿನ ಪುಟದೊಳಗೆ
ಕೆಂಪು ಅಂಕಿ
ಹಳತು ನೆನಪಿನಾವರ್ತ
ಬಬಲ್ ಗಮ್ ನಂತೆ
ಘಟನೆಗಳ ಮೆಲಕು
ದೇಶ ಬಂಧುಗಳೆದೆಯ
ಕುಲುಮೆಯಲಿ ಭುಗಿಲೆದ್ದ
ಬೆಂಕಿ ತಣಿಸಲು ಹರಿದ
ಜನಮನದ ನರನರದ ರಕ್ತ ಹೊನಲು
ನರಪೇತಲ ನಾಯಕ ನೊಡಲ
ಅಂಗುಲಗುಲದೊಳಗೆ
ಮುಕ್ತ ಭಾರತಿಯಾಸೆ ಕನಸುಗಳ
ಅಖಂಡ ಗೋಲದಾವರ್ತ ನೃತ್ಯ
ಗಾಂಧೀ ಗಾರುಡಿಯ ಪುಂಗಿ ನಾದಕ್ಕೆ
ಬಿಳಿಯ ನಾಗರ ಭೀತಿ ಮಂಗ ಮಾಯ
ಅಮ್ಮನಂತರಂಗಕ್ಕೆ
ಶೀತಲ ಸೀಕರದ ಸಿಂಪಡಿಕೆ
ಮುದುಕನೆದೆ ಪುಸ್ತಕದ ಪುಟ ಪುಟದ
ತುಂಬೆಲ್ಲಾ ಇತಿಹಾಸ ಹಾಸ
ಗೆದ್ದಲು ಹತ್ತಿದ ಗ್ರಂಥಾಲಯದ
ಷೆಲ್ಫುಗಳ ಒಳಗಿಂದ ಹೊರಟ
ಸ್ವಾತಂತ್ರ್ಯ ಪಾಠ
ಮರಮರಳಿ ತುಟಿಗಾಯ್ತು
ಬಾಯಿ ಪಾಠ

ವರುಷ ವರುಷಕ್ಕೊಂದು
ಹೆಜ್ಜೆ ಕಲಿಯುತ ಇಂದು
ಐವತ್ತರ ಪ್ರಾಯದಲ್ಲೂ ಹರಯ ಭಾವ
ಕಂಡ ಕಂಡಲ್ಲಿ
ಕೊಳೆ ಗಟ್ಟಿದ ಬೀದಿಗಳಲ್ಲಿ
ಗಾದಿ ಗಿಟ್ಟದ ಕೇರಿಗಳಲ್ಲಿ
ಕೊನೆಯ ಕೆಪ್ಪರ ಸಂತೆಯಲ್ಲಿ
ಸ್ವಾತಂತ್ರ್ಯ ಗೀತ ಘೋಷ
ದೂರ ಧ್ವನಿ ವರ್ಧಕದೊಳಗೆ
ಹಾಡು ಹಲಗೆಯ ಕೊರಳ ರಾಷ್ಟ್ರ ಗೀತೆ
ವೇದಿಕೆಯ ಉಡಿ ತುಂಬ
ಚಪ್ಪರದ ಮುಡಿ ತುಂಬ
ಗಿಡುಗ ಬಣ್ಣ ಬೆಳಕಿನ
ಮಿಂಚು ಗೊಂಚಲ ಮಾಲೆ
ಹರಿದ ಪುಟಗಳೊಗಿಂದ
ಹೆಕ್ಕಿ ತೆಗೆದ ಇತಿಹಾಸ ವೊಂದಿಷ್ಟು
ಭಾಷಣ ಬಾಯ ಕವಳ
ಅಗಸನಂಗಡಿಯಿಂದ
ಆಗ ತಾನೇ ಬಂದ
ಕಳೆದ ವರುಷವಷ್ಟೇ ರಿಯಾಯತಿಯಲಿ ತಂದ
ಟೋಪಿಗಳ ಹೊಳೆ ಹೊಳೆವ
ಬೆಳಕು ಹೊನಲು
ಮೂಲೆ ಗುಂಪಾಗಿ ನೆಲಕಚ್ಚಿ ಕತ್ತಲ ಕಾರಾವಾಸದಲಿ
ಬಂದಿ ಬಾವುಟ ಹಕ್ಕಿ
ಬಾನ ಬಯಲಿನ ಬೀದಿಗಳಲ್ಲಿ
ಸ್ವೇಚ್ಛಾವಿಹಾರಿ
ಸಮರ ವೀರ ಸಮಾಧಿಗಳಿಗೂ ಶ್ರದ್ಧಾಂಜಲಿ
ಮಂದಿ ಬಾಯೊಳಗೆಲ್ಲ
ಸ್ವತಂತ್ರ ಭಾರತದ ಸಾಧನೆಯ
ಧ್ವನಿ ಸುರುಳಿ ಮರಳಿ ಮರಳಿ!
ಅತ್ತವರು ನಕ್ಕವರು

ಉಂಡವರು ಹಸಿದವರು
ಅಳಿದವರು ಉಳಿದವರು
ಕತ್ತಲನೆ ಬೆತ್ತಲಿಗುಟ್ಟು
ನೆತ್ತರನೆ ಮೀಯಲು ಕೊಟ್ಟು
ಸತ್ತೂ ಸಾಹುಕಾರರ ನೂಲೇಣಿಯಾಗಿ
ಅಮರರಾದವರು
ಹೆಣದ ಮೆಟ್ಟಿಲನೇರಿ
ಉಪ್ಪರಿಗೆ ಮಾಡಗಳಲ್ಲಿ ಮೈ ಮರೆತ
ಮಂದಿ ಮಹಾನುಭಾವರು
ಬರ್‍ರುವುದೆಲ್ಲರಿಗೊಮ್ಮೆ
ವರುಷ ವರುಷದ ಹಬ್ಬ
ಒಳಗೆ ಕುಳಿತ ಕಳ್ಳ ದನಿಯಲಿ ಒಮ್ಮೆ
ಕೇಳಿ ಬರುವುದು
ಬೋಲೋ ಭಾರತ್ ಮಾತಾಕೀ ಜೈ!!

## ಚದುರಂಗ

ಚದುರಂಗ ದಾಟದಲಿ
ಹಣ್ಣಾಗದೆ ಉಳಿದ ಕಾಯಿ ನಾನು
ನನ್ನಾಟಗಾರನಂಗುಲಿ ಹಿಡಿದು
ಮೆಟ್ಟಿಲು ಮೆಟ್ಟಿಲು ದಾಟಿ
ಮೀಸಲಿಟ್ಟು ಮನೆಯೊಳಗೆ
ಕಾದು ಕೂತು ಹಣ್ಣಾಗ ಬೇಕು
ಹೆಳವ ಹೆಜ್ಜೆಗಳಲ್ಲಿ ಗುರಿಯ ಗರಿಗಳ ಕನಸು
ನಿಟ್ಟುಸಿರು ನೇಣೊಳಗೆ
ಬಿಗಿದ ಕೊರಳು
ನನ್ನನಾಡಿಸುವವರು
ಲೆಕ್ಕಕೆ ಬಾರದಾ ನೂರು ಮಂದಿ ಮರೆತಿದ್ದಾರೆ ಮಂತ್ರಗಳ
ಶಕುನಿ ತಂತ್ರಗಳ
ಎದುರಾಳಿಗಳ ಉಸ್ತಾದಿ ತನದೆದುರು ಆಟದ ಪಟ್ಟುಗಳು
ಗುಟ್ಟುಗಳು
ಕರ್ಣ ಶಾಪದ ಬಾಯ ತುತ್ತುಗಳು
ನನ್ನಾಟಗಾರರ ಮಂಕುತನ ಬೇಸರಕೆ
ನಿಂತಲ್ಲೇ ನಿಂತ ನಾನು
ನನ್ನ ಹಾಯುವ ಆನೆ, ಕುದುರೆ
ಸಿಪಾಯಿಗಳ ಸೊಂಪಿನ ಮೆರವಣಿಗೆ
ಕರುಬಿ ಉರುಬಿ
ಕಣ್ಣು ಕೀಲಿಟ್ಟು
ಕಾಯುತ್ತೇನೆ
ನನ್ನ ಬಳಸಿದ ಎಲ್ಲೆ ಮಿತಿಗಳ ಮರೆತು
ಎದುರಾಳಿಗೊದ್ದು ತಾಗಿದರೆ
ಮರಳಿ ಉರುಳುತ್ತೇನೆ

ಅಸಹಾಯಕತೆಯ ಸರ ಹದ್ದಿನೊಳಗೆ
ತಾಳ ತಪ್ಪಿದ ಉಸಿರೊಳಗೆ
ಉಳಿವಾಸೆ ದಿಮ್ಮಿಯ ನೆಮ್ಮಿ
ಆಡಿಸುವ ಕೈಗಳಿಗೆ
ನನ್ನದೆಲ್ಲವ ಕಳಚಿಕೊಟ್ಟು
ನಿಟ್ಟುಸಿರನೇವರಿಸಿ
ನಿಂತ ನೆಲೆಯೊಳಗಿಂದಲೇ
ಆಕಸ್ಮಿಕ ಅವಕಾಶಗಳಲ್ಲಾದರೂ
ಮನದ ಮರ್ಜಿಗಳ ಹುಟ್ಟು ಹಾಕಿ
ನನ್ನದೇ ದಾರಿಗಳು ಸರದಾರಿಕೆಯ
ಬಯಕೆಯಲಿ
ಉಳಿಯುತ್ತೇನೆ
ಬರುವ ಋತುವಲ್ಲಾದರೂ
ಕಾಯಿ ಹಣ್ಣಾಗುತ್ತೇನೆ

## ಗಾಳಿಯೊಂದಿಗೆ

ಮಂದಾರ ವನದಲಿ
ಮಂದಗತಿಯಲಿ ಬಂದ
ಮಧು ಕಂಪ ಮೈ ತೊಡೆದ
ಮುದ್ದು ಗಾಳಿ
ಬರುವಾಗ ಯಾವೆಡೆಯ ಹಾದು ಬಂದೆ?
ಊರಾಚೆ ಕಡಲಾಚೆ
ಗಿರಿಯಾಚೆ ಬುವಿಯಾಚೆ
ಅದಕಿಂತ ಮೀರಿರುವ ಕ್ಷಿತಿಜ ದಾಚೆ
ಕ್ಷಣ ಶಾಂತಿ ವಿಶ್ರಾಂತಿ
ಇಲ್ಲದೆಯೆ ನಿಲ್ಲದೆಯೆ ಬಂದೆಯಲ್ಲ!
ನೀ ಕಂಡ ಮೋದಗಳ ಸ್ವಾದಗಳ
ಆಲಿಸಿದ ನಾದಗಳ ಲಾಲಿಸಿದ ವಾದಗಳ
ಹೀಗೆಂದು ಏನೆಂದು ಹೇಳು ಗಾಳಿ
ನೀ ಬಂದ ಲೋಕದಲಿ
ಹಾಲ್ಜೇನ ಸರಸಿಗಳು
ಮುಗಿಲಗಲ ಕಮಲಗಳು
ಕ್ಷಿತಿಜ ದಾಚೆಗೂ ಬೆಳೆದ ಬೆಳ್ಳಿ ಸೌಧಗಳು
ಚಂದ್ರ ಸೂರ್ಯರಿಗೆಲ್ಲಿ
ನಿತ್ಯ ಕರ್ಮ ವಿಮುಕ್ತಿ
ಬಾನ ಗೋಕುಲದಲ್ಲಿ
ಬೆಳಕು ಯಮುನಾ ತಟದಿ
ಕೃಷ್ಣ ಚಂದ್ರನ ಸುತ್ತ ನಕ್ಷತ್ರ ರಾಸ
ದೇವ ಕನ್ನೆಯರಧರ ಸ್ನಿಗ್ಧ ಹಾಸ
ಮಿಂಚು ಗೊಂಚಲ ಹಣ್ಣು
ಮರ ಮರದ ಟೊಂಗೆಯಲಿ

ಭಾವ ರಾಗದ ಹೂವು ಬಣ್ಣ ಬಣ್ಣ
ಗಿಡಗಿಡದ ಮುಡಿಯಲ್ಲಿ
ಯಕ್ಷ ಕಿನ್ನರ ಗಾನ ಕೋಗಿಲೆಗಳಿಂಪು
ನಾಟ್ಯನೂಪುರ ಹೆಜ್ಜೆಗಳ ಕಣ್ಣಿಗಷ್ಟೇ ಸೊಂಪು
ಸಾವು ಸುಳಿಯದ ಭಾವದುನ್ಮತ್ತ ಜೀವ
ಉಲ್ಲಾಸ ಹರುಷಗಳ ಪರಿವೇಶ
ಪಥಗಾಮಿ
ಮುಗಿಲ ಕುದುರೆಗಳೇರಿ
ಬರುತಿರುವ ಹೇ ಗಾಳಿ
ನಿನ್ನ ಸೊಗದನುಭೂತಿ
ನೀನುಂಡ ಮಧು ಪ್ರೀತಿ
ನನಗಿಷ್ಟು ನೀಡು ಬಾ
ನಿನ್ನ ಬೆನ್ನಲಿ ನನ್ನನೇರಿಸಿ
ನಕ್ಷತ್ರ ಲೋಕಕ್ಕೆ ಕೊಂಡೊಯ್ಯಿಬಾ
ನೋವು ನರಕದಾವರ್ತನದ ಬದುಕಿನಲಿ
ತೇಲಲಾಗದೆ, ಮುಳುಗಲಾಗದೆ
ಏಳು ಬೀಳಿನಲೆಗಳ ಒಡನಾಟದಲ್ಲಿ
ಹಣ್ಣಾದ ಜೀವಕ್ಕೆ ಸುರಿದು ಹೋಗು
ನೀ ಹೊತ್ತ ಮಂದಾರ ಕಂಪು ಮೂಟೆ ಸುರಿದು
ಜೀವ ಸಾಗುವವರೆಗೆ ಇರಿಸಿ ಹೋಗು

# ವಿರಕ್ತ

ಗೂಳಿ ಪೊಗರಿನ ಮನಸು
ಹೊಗರಿಳಿದ ತೆರೆ ಮೈ ಕೆರೆಯೊಳಗೆ
ತೇಲುವುವು ಕನಸು ಮೀನು
ಕುಪ್ಪಳಿಸಿ ಕೈ ಚಾಚಿ
ಎಟುಕಬಾರದ ಹಣ್ಣು ಹುಳಿಯಾಗಿ
ಸಂಯಮದ ಸೋಗು
ರುಚಿಗೆಟ್ಟ ನಾಲಗೆಗೆ
ನೇಮ ನಿಯಂತ್ರಣ ತಂತ್ರ
ಹಂಗಿನಲಿ ಮರೆಯುವುದು ಮಂತ್ರ
ಹರಿವ ಹಾದಿಗಳಲ್ಲಿ
ತುಳಿದ ಕೆಸರಿಗೆ
ತಿಳಿ ನೀರಿನೊರೆತಗಳ ಶೋಧ ಪಯಣ
ಮಂಜು ಬೆಟ್ಟಗಳೊಳಗೆ
ಆರಲಾರದೆ ಉಳಿದ ಬೆಂಕಿ ಬಯಕೆ
ಬಳ್ಳಿ ಹೂವಾಗಿ ಒಡೆದು ಹಬ್ಬಿ ಹಸುರುವುದರಲ್ಲಿ
ಸಂಭ್ರಮದ ನೋವು
ರಾಸದಲಿ ಹ್ರಾಸವಾಗದೆ ಕೃಷ್ಣ
ಮೇಲೇರಿ ನಿಂತಂತೆ
ನಿಲ್ಲುವಾತುರದೊಳಗೆ
ನಿದ್ದೆ ಗೆಡಿಸಿತು ಮತ್ತೆ ದುಂಬಿಧಾಳಿ
ನಿರ್ವಿಣ್ಣ, ನಿರಾಸಕ್ತಿಯ ಮಗ್ಗಿ
ಲೆಕ್ಕವಿಲ್ಲದೆ ಬರಿ ಬಾಯಿ ಪಾಠ
ಆದರೂ ಹರಿದಿತ್ತು ಯಾವ ಹುತ್ತವೋ ಒಡೆದು
ಹಾವು ನೂರು
ಎದೆಯ ಮಂದರ ಗಿರಿಯ

ಪಾದದಡಿಯಲ್ಲೆಲ್ಲ ಅವ್ಯಕ್ತಭಾವದ ಚಲನ
ಸಂಚಲನ ಧುಮು ಧುಮುಕಿ ಧುಮ್ಮಿಕ್ಕಿ
ಹರಿವ ಭಾವ ಸ್ರೋತ
ಕವಲುಗಳ ಕಟ್ಟಿ
ಮೆಟ್ಟಿ
ಬತ್ತಿಸಿ
ಇಂಪು ಕಂಪಿಗೆ
ಸೊಂಪು ತಂಪಿಗೆ
ನೂರೆಂಟು ಚುಂಬಕಗಳ ಸೆಳವಿಗೆ
ಸೆರೆಯಾಗದೆ
ನಗ್ನ ಭಾವ ನಿಮಗ್ನ ರಕ್ತರಾಡಿಯ ದಾಟಿ
ನೇರನಿಂತವನಿವನೆ
ವಿರಕ್ತ

# ಧರ್ಮ ದೀಕ್ಷೆ

ಕಲ್ಯಾಣ ಕಟ್ಟೆ ತುಂಬಾ
ನೆರೆದಿತ್ತು ಜಾತ್ರೆ
ನಡೆದಿತ್ತು ಮುಂಡಾಯಣರ
ನಿತ್ಯ ಯಾತ್ರೆ
ಬಂಡವಾಳವಿಲ್ಲದ ವ್ಯಾಪಾರ
ಬೊಕ್ಕಸದೊಳಗೆ
ರೊಕ್ಕದ ಮೂರ
ಕೇಶ ಕತ್ತರಿಯ ಬಾಯ ತುತ್ತಾದಂತೆ
ಕರ್ಮ ಕಳೆದಂತೆ ಹಗುರ ಹಗುರ
ಹರಕೆ ಹುಂಡಿಗೆ ಜಿಗಿದು ಬಿದ್ದರೆ ಸಾಕು
ರಕ್ತವಾಸನೆ ಹಸ್ತ ಪನ್ನೀರು ಪರಿಶುದ್ಧ
ಭಕ್ತರೆದೆ ಹೊಕ್ಕು
ಪಿತೂರಿ ತುತ್ತೂರಿಯೂದಿ
ಸಮಪಾಲಿನೊಪ್ಪಂದಕ್ಕೆ
ಸಹಿಯ ಸಾಕ್ಷಿ
ಇವನ ಬೆಟ್ಟಕ್ಕೆ
ಗುಟ್ಟಾಗಿ ದಿಟ್ಟಾಗಿ ಬಂದರಷ್ಟೇ ಸಾಕು
ಗೋವಿಂದ ಗೋವಿಂದ
ಘೋಷದನುರಣನಕ್ಕೆ
ಭಕ್ತಿಯಾವೇಶ ಪರಿವೇಶ ಚಕ್ರ
ಮುಳ್ಳಿನಾ ಸುಳಿಗೆ
ತೀಟೆ ರೋಗಕ್ಕೆ
ಕಾಳಸಂತೆಯ ಕೊರಮತನಕ್ಕೆ
ಕರೆನ್ಸಿ ಪ್ರಿಂಟು ಮಾಡಿದ್ದಕ್ಕೆ
ಅಷ್ಟೇಕೆ ಅಮ್ಮನ ಹಾದರಕ್ಕೂ

ಮಳ್ಳ ಹೆಂಡತಿಯ ಕಳ್ಳ ಬಸಿರಿಗೂ
ನೂರು ದಾರಿಗಳು ತೆರೆದು
ತಿಮ್ಮಪ್ಪನ ಮನೆಯ ತನಕ
ಸಾಗುವುದು ಹೆಜ್ಜೆ
ಕಚ್ಚೆಪೂಜಾರಿಯ ಕೈ ಬೆಚ್ಚಗಾದರೆ ಸಾಕು
ಚಕ್ರವ್ಯೂಹವ ಜಿಗಿದು
ಕಿರುದಾರಿ ಸಾಗಿ ಸೇರವುದೊಮ್ಮೆಗೇ
ಕ್ಯಾಪಿಟಲಿಸ್ಟ್ ಕೋಟೀಶ್ವರನ ನೆಲೆಗೇ
ಧಿಮಾಕು ಧೀರ ನಾಯಕನ ಮುಂದೆ
ನಡು ಬಗ್ಗಿ ಕೈ ಮುಗಿದು
ಪಾರ್ಟಿ ಕೈ ಜಾರದಿರಲೆಂದು
ಸಾಲಕ್ಕೆ ಸಾಕ್ಷಿಗಳು ಸಾಕಾಗದಿರಲೆಂದು
ಹತ್ತು ಲಕ್ಷದ ಲಾಟರಿ ಲಕ್ಷ್ಮಿ ತನಗೊಲಿಯಲೆಂದು
ಎಲ್ಲಕ್ಕೂ ಹೆಚ್ಚಾಗಿ ತಮಗಾಗದವರು
'ತಮ್ಮಿಂದ ನುಣ್ಣಗಾದವರು ತಣ್ಣಗಾಗಿ
ತಟ್ಟದಿದ್ದರೆ ಅಪಾಯ
ನಿನ್ನಲ್ಲಿಗೆ
ಬಂದಾಗೆಲ್ಲ
ಮುಂಡಾಯಿಸಿ ಮುಗಿಯುತ್ತೇವೆ
ನಮ್ಮ ಆದಾಯದಲ್ಲಿ ನಿನಗೆ
ಸಮಪಾಲು ಸಾರುತ್ತೇವೆ' –
ಎಂಬ ಆಮಿಷಗಳ ಆಸೆ ಸಾಧಕತನದ ಪ್ರವಾದಿಯಂತೆ
ಭಕ್ತಿ ಭಾವದ ಸೋಗು ಹೊದ್ದು
ಮುಂಡಾಯಿಸಿದ ಪುಣ್ಯಗಳ ಮರೆಸಿ
ಮುಂಡಾಯಣದ ದೀಕ್ಷೆ
ಧರಿಸಿದ ಮಾರ್ಜಾಲ ಮನಸು
ಮುಳ ಮುಳನೆ
ಒಳಗೆಲ್ಲೊ ಹರಿದು ಮುರಿಯುತ್ತದೆ

# ನಮ್ಮಪ್ಪನ ನೆಲ

ನಮ್ಮಪ್ಪನ ನೆಲಕ್ಕೆ ಶತಮಾನಗಳ ವಯಸು
ಅಜ್ಜ ಮುತ್ತಜ್ಜ ಮೊದಲಾಗಿ
ಸಾಲುಗಟ್ಟಿದ ತಲೆ ಮಾರುಗಳಿಂದಲೂ
ಎದೆಯ ಸಿರಿವಂತಿಕೆ
ಬಸಿರ ಫಲವಂತಿಕೆಯ ಹುದುಗಿಟ್ಟು ಒಳಗೆ
ಸವೆಯದುಳಿದದ್ದೇ
ಇದರ ಹೆಗ್ಗಳಿಕೆ
ಇದರಂತರಾಳದ ನರನರದಲ್ಲೊ
ಹರಿದದ್ದು
ಅಮೃತ ಗಂಗೆ
ಒಮ್ಮೆ ಹರಗಿದರೆ ಸಾಕು
ಬೆಸಲಾಗುವುದು ಹಸನಾಗಿ
ಹಸಿರು ಹೊನ್ನು
ಹಸಿರು ಕ್ರಾಂತಿಯ ಬ್ರಾಂತಿಯಿಲ್ಲದೆಯೆ
ತೊನೆ ತೊನೆವ ತೊನೆ ಭಾರ
ಇಂಥ ನೆಲದೊಡೆತನಕೆ
ನಡು ಮುರಿವಂತೆ ನಡೆದ
ನಮ್ಮಪ್ಪಧೀರ
ಅಂಗುಲಂಗುಲ ಅಂಗಾಂಗ ದೊಳಗೆಲ್ಲ
ಪುಟಿಪುಟಿದು ಕೆನೆಯುವುದು
ಜೀವ ಚಿಲುಮೆ
ಮೊಗೆದು ತೆಗೆದಷ್ಟೂ
ಉಕ್ಕಿ ಹರಿವುದು ಇವಳ ಎದೆಯ ಒಲುಮೆ
ನೆಟ್ಟ ನಾಗರ ಕಲ್ಲು ನುಡಿಯುವುದು
ಕಾಮಿತಾರ್ಥಕ್ಕೆಲ್ಲ ಅಸ್ತು ಅಸ್ತು!

ಈ ನೆಲ ಈ ಹದಕ್ಕೆ ಬರುವಲ್ಲಿ
ಅಪ್ಪ ಹರಗಿದ್ದಾನೆ ಬೆನ್ನ ನೇಗಿಲ ಮಾಡಿ
ಖಂಡಗಳನ್ನು ಕೆಂಡದಲ್ಲಿ ಬೇಯಿಸಿದ್ದಾನೆ
ರಕ್ತ ಬೆವರನು ಹರಿಸಿ
ಫಲದ ಪರಮಾನ್ನ ನೀಡಿದ್ದಾನೆ
ತಾನಿರಲಿ ಇಲ್ಲದಿರಲಿ
ತೊಂಬತ್ತು ಕೋಟಿ ಮಕ್ಕಳ ಚಿಂತೆಯಲಿ
ಭವಿಷ್ಯದ ಭದ್ರತೆಗೆ ಕಾತರಿಸಿ
ಕಳೆ ಕಿತ್ತು ಬೆಳೆ ಮೊಳೆಸಿದ್ದಾನೆ
ಬೇಲಿ ಎಲ್ಲೆ ಕಟ್ಟುಗಳ ಬಿಗಿಸಿ
ಪುಂಡು ದನಗಳು ಹಾದು
ಮೇದು ಹೋಗದಂತೆ
ಹುಷಾರಿ ವಹಿಸಿದ್ದರೂ
ಹಾಳು ಮಕ್ಕಳ ಆತಂಕಕ್ಕೆ
ಕೋಡು ಮೂಡಿದ್ದು ಸದ್ಯ ನೋಡಲಿಲ್ಲ!!
ನಾ ನೀ ಎಂದು ನೆಲದ ಯಜಮಾನ್ಯಕ್ಕೆ
ಗುಳ್ಳೆ ನರಿ ನಾಯಿಯಾಗಿ
ಕಂಡದ್ದೆಲ್ಲ ಕಬಳಿಸುವ ಬಕಾಸುರರಾಗಿ
ಅಪ್ಪನನ್ನೇ ಅಡಿಗೊತ್ತಿ
ನೆನಪಿಗೇ ನೇಣಿಕ್ಕಿ
ಅಸ್ಥಿಗಳಿಗಪ್ಪು ಕಿಚ್ಚಿಕ್ಕಿ
ಕೆಕ್ಕರಿಸುವ ಕಣ್ಣುಗಳ ಕೆಂಪಿಗೆ
ಕಾಣದೂರೊಳಗೆ ಕಂಗಾಲಾಗಿ
ಹಾಸವಿಲ್ಲದ ಮಂದಹಾಸವನ್ನೇ
ಮೀಟಿ ದೂಡುತ್ತಾನೆ
ನೆಲ ಬಿಟ್ಟರೂ ನೆಲದ ಮೋಹಕ್ಕೆ
ಗಂಟು ಬಿದ್ದದ್ದು ನೆನೆದು
ಬೆಚ್ಚುತ್ತಾನೆ
ಓಟದಲಿ ಓಟಿನಲಿ ಮುಂದಾಗಿ
ನೆಲದೊಡೆತನದ ಬಾವುಟವ ನೆಟ್ಟವರು
ನೆಲವನೆಂದೂ ಉಳಲಿಲ್ಲ

ಬಿತ್ತಿಬೀಜವನೆಂದೂ ಬೆಳೆಯಲಿಲ್ಲ
ಉತ್ತದ್ದು ಬಿತ್ತದ್ದು ಬೆಳದದ್ದು
ಬರಿದು ಮಾಡಿದರಷ್ಟು
ಬೆಳಗಾಗುವುದರಲ್ಲೇ
ಜಾವ ಕಳೆಯುವುದರಲ್ಲೇ
ದಿಲ್ಲಿಯಾಳುವ ಕನಸು
ಕೈಮೂಡಿ
ಓಡಾಡುವಾತುರದಲ್ಲಿ
ಆರ್ತದನಿಗಳು ಕರಗಿ
ಕಾಲಡಿಯ ಗೋರಿಯಲಿ
ಮಲಗಿ ಮುಳುಗುತ್ತವೆ
ನೆಲವಿದ್ದೂ ನೆಲವಿಲ್ಲದೆ
ಬಲವಿದ್ದೂ ಕುಲವಿಲ್ಲದೆ
ಹಸಿದಣ್ಣ ತಮ್ಮಂದಿರು ಕರುಬಿ
ಕೂಗುತ್ತೇವೆ ಅಂತೂ
ನಮ್ಮಪ್ಪನ ನೆಲಕ್ಕೆ ನಾವೂ ವಾರಸುದಾರರು! ಎಂದು

# ಅವರು ಬಿಟ್ಟು ಇವರು ಬಿಟ್ಟು

ಅವರು ಬಿಟ್ಟು
ಇವರೂ ಬಿಟ್ಟು
ಇವರ್‍ಯಾರು?
ಅವರೆಂದುಕೊಂಡಾಗ ಇವರು
ಇವರೆಂದು ಕೊಂಡಾಗ ಅವರು
ಅವರಿವರೆಲ್ಲರ ಮುಖಗಳೂ ಒಂದಾಗಿ
ಮುಖವಾಡಗಳ ಸಂಖ್ಯೆ ಸಾವಿರವಾಗಿ
ಗೊಂದಲ ಪುರದೊಳಗೆ
ಶಬ್ದಗಳು ಸಂತೆಯಾಗಿ
ಸಂತೆಯೊಳಗೆ ಕೂತ
ಅಜ್ಜಿ ಕೈಗೆ ಕೊಟ್ಟ
ಕಣ್ಣಗಳು ಮಂಜಾಗಿ
ಕವಿದ ಕಪ್ಪು ರಾತ್ರಿಗಳಲ್ಲಿ
ಊಳಿಡುವ ನರಿ ತೋಳಗಳ
ನೆರಳು ಕೊಡೆ ಬಿಚ್ಚುತ್ತವೆ
ಮುಖವಿಲ್ಲದವರ ಹೆಜ್ಜೆ ಜಾಡಿನ
ಬಳ್ಳಿಯರಸುತ್ತಾ ಽಽ
ಅಸಲಿತನದ ನಿಕ್ಷೇಪವನಗೆದು
ತೆಗೆವಲ್ಲಿ ನೆರವಾಗಿ ಬಂದ
ಪೊಲೀಸ್‌ನಾಯಿಗಳು
ನಾಸಿಕಾಘ್ರಾಣ್ಯಕ್ಕೂ ಸಿಗದ
ಜನಾರಣ್ಯ ಬೀದಿಗಳ ಕಿಷ್ಕಿಂಧೆಯಲ್ಲಿ
ಬಸ್ಸುಲಾರಿ ಕಾರುಗಳ
ದೈತ್ಯವೇಗದ ಮೊರೆತ ಕಾರಡವಿಯಲ್ಲಿ
ಕಳೆದು ಹೋದ ಮುಖಗಳು

ಇರಿದು ಕೊಲುವ ನಖಗಳು
ಕಾವಿಯಲ್ಲಿ ಕೃಷ್ಣರಾಗಿ
ಕಾಮರಲ್ಲಿ ರಾಮರಾಗಿ
ಹಿಂಸೆಯಲ್ಲಿ ಕಂಸರಾಗಿ
ಬಿದ್ದರಲ್ಲಿ ಬುದ್ಧರಾಗಿ
ಕ್ರುದ್ಧರಲ್ಲಿ ಸಿದ್ಧರಾಗಿ
ಬಳ್ಳಿ ಮರ ಕಾನು ಬಾನು
ನೆಲ ಬಿಲ ಮಲೆ ತೊಲೆ
ನೀರು ಬೀರು ಕ್ಲಬ್ಬು ಪಬ್ಬು
ಮನೆ ಮರ ಗಿಡ ಗೋಪುರ
ದಾಚೆಯಲ್ಲೆಲ್ಲೋ
ಆಳದಲ್ಲೋ
ಎಲ್ಲಿಯೋ ಒಂದು ಕಡೆ
ಕದ್ದು ಕುಳಿತ ಕಣ್ಣರು
ತಾಯ ಮರೆತ ಚಿಣ್ಮರು
ಒಂದಲ್ಲ ಒಂದು ದಿನ
ಬಂದೇ ಬಂದಾರು
ಸಂತರಾಗಿ ಪಂತರಾಗಿ
ನೆಂಟರಾಗಿ ಬಂಟರಾಗಿ
ಉಡಿದ ತಲೆಗೆ ಮಕುಟ ತೊಡಿಸಿ
ಕನಸ ಬೀದಿಯ ತುಂಬ
ಕಾಮನ ಬಿಲ್ಲು ರಂಗೋಲಿ ಬಿಡಿಸುವ
ಈ ಇವರು
ಮುಖವಿಲ್ಲದವರು ಬಂದೇ ಬರುತ್ತಾರೆ
ಆಸೆಗಳ ಔತಣ
ರುಚಿಯು ನಾಲಗೆ ತುಂಬ
ಬಾಯಾರಿಕೆಗಷ್ಟು
ಹಾಲು ಜೇನಿನ ಕುಂಭ
ಅನುರಾಗದವಸರಕೆದ್ದ
ತಾಜಮಹಲಿನ ಸಾಲು
ಬೆಳಕು ಹರಿದಾಗ

ಬೋಳು ಬೆತ್ತಲೆಯ ಬಯಲು
ಬಾಯ್ ತೆರೆದ ನೆಲ
ಬಂಜೆ ಹೊಲ ಕುಸಿದ ಮಹಲಿನವಶೇಷ
ಮಂಟಪದೊಳಗೆ
ಆರ್ತದಲಿ ಅಳುವ ಮಂದಿಯು ಬಂದಿ
ಬಂದವರು
ಬರುವವರು
ಮುಖವಾಡಗಳ ಬಿಟ್ಟು ಮಂಗ ಮಾಯ
ಕೂತವಳು ಅಜ್ಜಿ ಹಾಡಿದಳು
ಮತ್ತೇ
ಅವರ ಬಿಟ್ಟು ಇವರು ಬಿಟ್ಟು
ಇವರ್‍ಯಾರು?

# ಅಕ್ಕನಂತರಂಗದ ಹಾಡು

ಏಳು ಸುತ್ತಿನ ಕೋಟೆ ಸ್ವರ್ಣ ಮಂದಿರದಲ್ಲಿ
ಪಚ್ಚೆ ತೋರಣ ಮುತ್ತಿನ ಪರದೆ
ನಡುವೆ ನುಣ್ಣನೆ ಹಾಸು ಬೆಳ್ಳಿ ಮಂಚ
ಕುದಿವ ಜೀವದ ಬೇಗೆ ನಿಟ್ಟುಸಿರು ಕವನ
ಒಳ ಹೊರಗೆ ಉರಿಯುತಿದೆ ಚಿತೆಯ ಬೆಂಕಿ
ಕಿವುಡಿಸುವ ಒಳಕರೆಯ ಕಾಣುವೆದೆ ತವಕ

ಕದಳಿವನವೆಲ್ಲಹುದೊ ಹುಡುಕ ಬೇಕು
ಕಂಡದ್ದ ಮರೆಸಿ ಕನಸುಗಳ ಬಿತ್ತರಿಸಿ
ಹೊಳೆವ ಕೆಂಜಡೆಯೊಳಗೆ ಮುಡಿದ ತಿಂಗಳ ಹೂವು
ಸುಲಿಪಲ್ಲ ಗೊರವನಾಕರ್ಷಣೆಯ ಸೆಳೆತ

ಕಣ್ಣ ಕುಕ್ಕುವ ಕಾಂತಿ ಕತ್ತಲೆದೆ ಬಯಲಾಯ್ತು
ಒರಗಿದ್ದ ಹಾಸಿಗೆಯ ಒಡಲೆಲ್ಲ ಮುಳ್ಳುಗಳು
ಬದಿಯ ಗಂಡನ ಬಾಹು ಬಳ್ಳಿಯದು ಯಮ ಪಾಶ
ಗುಡಿಯ ಲಿಂಗಗಳೆದ್ದು ಗುರುತು ಕಳಕೊಳುತಲಿ
ತನುಸೂರೆ ಹೋದರು ಮನಸೂರೆ ಹೋದರು

ಒಳ ಹೊರಗೆ ಬುವಿ ಬಾನು ತಬ್ಬಿದ್ದ ಹುಡುಗನ
ಕಾಣವಾತುರದೊಳಗೆ ಕಟ್ಟ ಕಾವಲನೊದ್ದು
ಪಿಸುದನಿಯ ಬೆಳಕಲ್ಲಿ ನಡೆದಳೆದ್ದು
ಮೈ ಭಾರ ಉದರ ಚಿಂತೆಯು ಭಾರ
ಹೊರೆಯೊಗೆದು ಹೊರಟ ಹೆಜ್ಜೆಗಳೆಲ್ಲ ಗಾಳಿ ಹಗುರ
ಪರಗಂಡ ಪರಮಾರ್ಥ ಗಂಡನನು ಅರಸುತ್ತ
ಲೋಕ ಲಜ್ಜೆಯ ಪೊರೆ ಪೊರೆಗಳನ್ನು ಕಳಚುತ್ತ

ಬಯಲ ನೀಲಿಯ ನುಟ್ಟು ಚಿಕ್ಕಿ ಮಣಿಗಳ ತೊಟ್ಟು
ಚಂದ್ರ ಸೂರ್ಯರ ಬೆಳಕು ಕಣ್ಣೊಳಿಟ್ಟು
ನೆಲವ ಸೋಂಕದೆ ನೀರೆ ಸಾಗಿದಳು ತಾರೆ

ಮಾತು ಮಾತಿನ ಮುಳ್ಳು ಉಕ್ಕೇರಿಸುವ ಪ್ರಾಯ
ಲಜ್ಜೆಯಳಿದುಳಿದವರು ಲಿಂಗವನು ತೊಟ್ಟವರು
ಒಳಗೊಳಗೆ ತಡಬಡಿಸಿದರು ಲಿಂಗಾನುಭಾವಿಗಳು
ಅಂಜದೆದೆಯಲ್ಲಿ ಉರಿವ ಜ್ಯೋತಿರ್ಲಿಂಗ
ಸೋಂಕು ಸುಟ್ಟಿತು ನಿಂದೆ ನೋವು ಭಾವ!

ಹೆಜ್ಜೆಯೂರಿದ ಎಡೆಗಳಲ್ಲಿ ಎದುರಾದ ದಿವ್ಯಗಳ
ಹಾಯುತ್ತ ನೋಯುತ್ತ ಏರಿಲ್ಲದ ಗಾಯಗಳಲ್ಲಿ
ಬೇಯುತ್ತ ಬೇಯುತ್ತ ಕಿಚ್ಚಿಲ್ಲದ ಬೇಗೆಯಲಿ
ಮೈ ಮಾತು ಮನಕರಣ ಲಿಂಗ ಮುಖವಾಗುತ್ತ
ಬೆಳಕಲ್ಲಿ ಬೆಳಕಾದ ಬಯಲಲ್ಲಿ ಬಯಲಾದ
ಗಿರಿಬಾನು ವನವೆಲ್ಲ ತಾನೇ ತಾನಾದ ತನ್ನವನ ಅರಸಿದಳು

ಗಿಳಿ ವಿಂಡು ತಡಿಯಂಚೆ ಸುಸ್ವನದ ಕೋಗಿಲೆಯ
ದುಂಬಿ ನವಿಲೇ ಏನು ಗಿಡಗಿಡವ ನುಡಿಸುತ್ತ
ತನ್ನವನ ಕಂಡಿರೇ ಕಂಡಿರೇನೆಂದು ಕಾಡುತ್ತ ಬಳಲುತ್ತ
ತನು ಮೋಹ ಮನ ಮೋಹ ಲೋಕ ಮೋಹವನುರಿಸಿ
ಕಲ್ಲು ಮುಳ್ಳಿನ ಹಾದಿಗಳಲ್ಲಿ ಸೋತ ಹೆಜ್ಜೆಗಳಲ್ಲಿ ಸವೆದ ಪಯಣ

ಕದಳಿವನ ಶ್ರೀ ಗಿರಿಯ ಗುಡಿಯೊಳಗೆ ಚೆನುಮಲ್ಲ
ಬಿರಿದರಳಿ ಸುಲಿಪಲ್ಲ ನಡೆದು ಬಂದ
ಕನಸಲ್ಲಿ ಕಾಡುತ್ತ ಮೋಡಿಯಾಡಿಸಿ ಕರೆದ
ಮನದನ್ನೇ ಸಿರಿಮನ್ನೆ ಮಾದೇವಿಗೊಲಿದು ನಿಂದ
ರೂಪರಸ ಗಂಧಗಳ ಸೀಮೆಯಾಚೆಯ ನಿಸ್ಸೀಮೆ ನೀನೆಂದ
ಬೆಳಕನ್ನೇ ಉಟ್ಟವಳ ಘನದರಿವ ತೊಟ್ಟವಳ
ತನ್ನೊಳಗೆ ತಾನೇ ಕರಗಿದವಳ ಕರೆಗೊಲಿದು
ಕೈಲಾಸ ಗಿರಿ ಮರೆದು ಗಿರಿಜೆ ಗಂಗೆಯ ತೊರೆದು
ಇಳಿದ ಪಾದ ಸ್ಪರ್ಷ ಪುಲಕಗಳೆ ಪುಷ್ಪವಾಯಿತು
ಹಕ್ಕಿ ಕೊರಲುಗಳೆಲ್ಲ ಮೊಳಗಿ ಮಂಗಳ ಮೇಳವಾಯ್ತು

ಶಿಲೆಯೆಲ್ಲ ಪರುಷ ವನವೆಲ್ಲ ಕಲ್ಪತರು
ಜನವೆಲ್ಲ ನಿರ್ಜರಾಮೃತ ಸರಸಿ ಸಂದೋಹ
ಮಾತೆಲ್ಲ ಮಂಗಳ ಗೀತೆ ಮೌನವೇ ಮಹಾತಪಸು
ಬುವಿಯೆ ಭವ್ಯ ಮಂಟಪವಾಗಿ ಬಾನು ಚಪ್ಪರವಾಗಿ
ದಿವ್ಯ ಸಂಗಮಗಳಿಗೆ ಸಾರಿ ಬಂದಿತು ಬಳಿಗೆ

ತನುವೆಲ್ಲ ಸ್ವಯಲಿಂಗ ಮನವೆಲ್ಲ ಚರಲಿಂಗ
ಭಾವವೆಲ್ಲವು ಮಹಾಘನದ ಬೆಳಕು
ಬೆಳಕು ಬೆಳಕನೆ ಕೂಡಿ ಮಂಗಳದ ಮದುವೆಯಲಿ
ಶರಣ ಸಂಕುಲ ಸಾಕ್ಷಿ ನಕ್ಷತ್ರ ಸ್ಥಿರ ಸೇಸೆ
ಅಂಬರದ ಗುಡಿಗಂಟೆ ಸ್ವಸ್ತಿ ಮಂತ್ರ
ಕೈಲಾಸ ಬೀದಿಯಲಿ ಜೋಡಿ ಬೆಳಕಿನ ತೇರು
ಸಾಗಿ ಸೇರುವುದಿನ್ನು ಕೈವಲ್ಯ ದೂರು

# ಬೇಸರ

ಲವಲವಿಕೆ ಗಿಲಕೆ ಸದ್ದಡಗಿ
ಹುರುಪು ಸೋರಿ ಖಾಲಿಯಾಗಿ
ದೇಹ ಮರಗಟ್ಟಿ ನಿರ್ಜೀವ ಬೊಂಬೆ
ಹಗಲು ಅರಳಿದ ಭಾವಗಳು ದಣಿದು
ನಾಳೆ ಚಿಂತೆಯ ಹೊರಗೆ ಮೊಗ್ಗಾದ ಕಣ್ಣು
ರಿದು ಕೆಂಡವಾಗಿದ್ದ ಸೂರ್ಯನೂ
ಬಿಡುವಿಗೆಂದು ಹೊರಟದ್ದು
ಜೀವದಲೆಗಳು ತಣ್ಣಗಾದದ್ದು
ಹೊಳೆದು ಮಸುಳುವ ಮೊದಲೇ
ಅಸ್ವಸ್ಥ ಮನಸು ಮಂಜುಗಟ್ಟಿದ ಕನಸು
ಚೈತನ್ಯ ರಥವಿನ್ನು ಮುಂದೆ ಸಾಗುವುದಿಲ್ಲ
ಎದೆಯ ಬಾನಿನಲ್ಲೆಲ್ಲು ನಕ್ಷತ್ರ ಹೊಳೆಯುವುದಿಲ್ಲ
ಕಣ್ಣಿನಂತರದಲ್ಲಿ ಬೆತ್ತಲೆಯ ಮರುಭೂಮಿ
ಮೈ ಚಾಚಿ ಮಲಗಿದ ದೈತ್ಯ ತಿಮಿಂಗಲ ನೆರಳು
ಹಸಿರಿಲ್ಲ ಹೂವಿಲ್ಲ ಕಂಪಿಲ್ಲ ಸೊಂಪಿಲ್ಲ
ತಟ್ಟಿ ಮಲಗಿಸಲಿಲ್ಲ ಜೋಗುಳದ ಜೇನು ದನಿ
ಮುಗಿಲಲ್ಲಿ ನೆಲದಲ್ಲಿ ಮನದಲ್ಲಿ ಬನದಲ್ಲಿ
ಜಡಮೌನ ಮೆರವಣಿಗೆ ದೃಷ್ಟಿ ದೋಣಿಯ ಪಯಣ
ಶೂನ್ಯ ಕಡಲಿನ ಕಡೆಗೆ
ಅಂದಕ್ಕೆ ಚಂದಕ್ಕೆ ಹರುಷದುಲ್ಲಾಸಕ್ಕೆ
ಇದ್ದಲ್ಲೆ ಇರುವ ಹೆಳವ ಮನಸು
ಪ್ರಾಯದಲೆ ಮುದುಡಿ ಮುದಿಯಾದ ಕನಸು
ಬೇಸರದ ಕೋಶದಲಿ ಅಜ್ಞಾತವಾಸ

## ಅತ್ತರೆ ಅಳಲೇಳು ಈ ಕೂಸು ನನಗಿರಲಿ

ಹೆತ್ತೊಡಲ ಪಿಂಡ ನನ್ನೊಡಲ ಖಂಡ
ನನ್ನ ಕೂಸಿದು ನನಗೆ ಸಾಕುವುದು ಹೊರೆಯಲ್ಲ
ನನ್ನೆದೆಯ ಗದ್ದುಗೆಗೆ ಇವನೆ ದೊರೆ ಬೇರಿಲ್ಲ!!

ಮಮತೆ ಹಾಲಿನೊರತೆಗಳು ಬತ್ತಲಾರವು ಎಂದು
ಹೊನಲಾಗಿ ಕಡಲಾಗಿ ಹರಿವ ಅಕ್ಷಯ ಹೊನಲು
ಮುಗಿಲ ಚಪ್ಪರದಿಂದ ಕರುಣೆ ನೇಣನು ಬಿಗಿದು
ಮನದ ತೊಟ್ಟಿಲ ತೂಗಿ ಹಾಡುವೆನು ಜೋ ಜೋ

ಚುಕ್ಕಿ ಗಿಳಿ ಪಂಜರದ ತೊಟ್ಟಿಲಿನ ಮೇಲ್ಕಟ್ಟು
ಚಂದ್ರ ಸೂರ್ಯರ ಜೋಡಿ ಕಂದಾನ ಗೆಣೆತಾನ
ಆಡುವಾಗಳಬೇಡ ಅಮ್ಮಾನ ಮರಿಬೇಡ
ಅತ್ತರೂ ಮುತ್ತೀನ ಕಂಬನಿಯ ಸುರಿಬೇಡ

ಆಡಾಲು ನಾ ಕೊಡುವೆ ಅಡಿಕೆ ಗಿಲಕೆ ನೂರು
ಹಾಡಾಲು ಕಳಿಸುವೆನು ಕೋಗಿಲೆಗಳೆಂಟಾರು
ಹಕ್ಕಿ ಚಿಲಿಪಿಲಿ ಮುದ್ದು ಮಾತು ಕಲಿಸಿದೆ ಕಂದ
ತೊದಲಿ ಕಟ್ಟುವ ಕವನ ನನಗೆಷ್ಟೊ ಚಂದ

ಹಸಿರು ಅಂಗೀ ಮೇಲೆ ಹವಳ ರತ್ನದ ಗುಂಡಿ
ಮುತ್ತು ಮಾಣಿಕ ಹೆಣೆದ ಚಿತ್ತಾರ ನಕಾಶಿ
ತಗೊ ಕಂದ ಪನ್ನೀರ ಪುಷ್ಪ ಬಟ್ಟಲ ತುಂಬ
ಸಿಂಪಡಿಸಿ ಗಮ್ಮಂತ ಗಮಿಸೊ ಕಂದ
ಮಣ್ಣಾಡಿ ಮೂಡಿಸುವ ಪುಟ್ಟ ಪಾದದ ಗುರುತು
ಹಾಕಿ ತೂಗುವೆನೆಲ್ಲೋ ಗೋಡೆ ಮೇಲ್ ಚೌಕಟ್ಟು

ವಾತ್ಸಲ್ಯ ಬಿತ್ತುಗಳು ಇವನುಣುವ ತುತ್ತುಗಳು
ಮುನಿದರೇನುಂಟು ಬರಿ ಶಾಪ ತಾಪಗಳು

ಒದ್ದರೂ ಪುಲಕಿಸಿದೆ ಪಾದಗಳ ಚುಂಬಿಸಿದೆ
ಗುದ್ದಿದರೂ ಸದ್ದಿಲ್ಲದೇ ಸಹಿಸಿ ನಿಂದೆ
ಉರಿ ಬಿಸಿಲ ಬಯಲಲ್ಲೂ ಉಸಿರು ತಂಗಾಳಿ
ಎದೆಯ ಕತ್ತಲ ಕಳೆವ ಮುದ್ದು ಬೆಳಕಿನ ಕೋಳಿ

ಕಾರು ಕಪ್ಪನು ಮಾಡಿ ಕಣ್ಣ ಬೆಳಕನೆ ಕೊಟ್ಟೆ
ತೊಟ್ಟಿಲು ತವರು ಹರಿಸಿದ ಬೆವರು
ಮರೆತೆಲ್ಲಿ ಓಡುವೆ ಬಾನ ಗಡಿಯಾಚೆ
ಉಡುಗಿ ಉಡಿವ ಸಂಜೆ ಮಂಜಿನಲಿ ಊರುಗೋಲ್ನನಗೆಂದು
ನನ್ನ ಮಡಿಲಿನ ಬಿಸುಪನಿಟ್ಟು ಪೊರೆದೆ

ಯಾವುದೇ ಇರಲಿ ಯಾರದೇನೆ ಬರಲಿ
ನನ್ನ ನಲ್ಮೆಯ ಕೂಸು ನನ್ನ ಗುಡಿಸಲ ಹಣತೆ
ರಂಪಾಟ ತುಂಟಾಟವೇನಿದ್ದರೂ ಇರಲಿ
ನನ್ನ ಕೂಸದು ನನಗೆ ಹೂ ನಗೆಯ ಚಂದ್ರಾಮ

# ಎನ್ನೆದೆ ಭಾವದ ಅತಿಥಿಗಳೇ

ಎನ್ನೆದೆ ಭಾವದ ಅತಿಥಿಗಳೇ
ನನ್ನ ಕಾಡದಿರಿ ಹೀಗೆಂದೂ
ಮಿಂಚು ಬಣ್ಣದ ಗರಿಗಳ ಮುಡಿದು
ಸಂಚಿನಾಟಗಳನಾಡಲು ಬರುವಿರಿ
ಕಾದು ಬಿರಿದ ನೆಲದಾಳದಿ ಹುದುಗಿ
ಒಲುಮೆ ಹನಿಗಳಿಗೆ ಕರಗಿ ಚಿಗಿವಿರಿ
ಹಸಿರಾಗಿ ಉಸಿರಾಗಿ ಒಡೆದೆದ್ದು ಬರುವಿರಿ
ನಿಸ್ಪಂದದೊಡಲಲ್ಲಿ ಚೈತನ್ಯ ರಸವಾಗಿ
ಹರಿದರಿದು ಮೆದು ಮಾಡಿ ಹದ ಮಾಡಿ
ಪೈರು ಪಚ್ಚೆಯ ಕವಿತೆ ಹಾಡಿಸುವಿರಿ
ಒಮ್ಮೊಮ್ಮೆ ಒತ್ತರಿಸಿ ನುಗ್ಗಿ ಲಗ್ಗೆಯನಿಡಲು
ಆತಿಥ್ಯ ನಿಮಗೆಂತು ನೀಡಲಹುದು?
ಅರೆ ಬೆಂದ ಅಡುಗೆಯನುಣಿಸಿ
ತಣಿಸಲಾಗದ ನೋವು
ನನ್ನ ಪಾಲಿಗೆ ನೀವು ಉಳಿಸಬೇಡಿ

ಮನದ ಲಾಯದ ಗೂಟ ಕಳಚುತಲಿ
ಗಾಳಿ ಗೂಳಿಯ ಸೀಳಿ ಗುದ್ದುತಲಿ
ಬಿಡಿಸಿ ರೆಕ್ಕೆಗಳ ಹಾರುವ ನಭದಿ
ಕಾಡು ಕುದುರೆಯ ತೆರದೋಡುವ ನಿಮ್ಮ
ಗಗನಯಾನದಲಿ ಅಟ್ಟಿ ಬರಲೇನು?
ನೋಟ ಹಿಡಿತಗಳ ಎದೆಯ ಮಿಡಿತಗಳ
ಮೆಟ್ಟಿ ಚದುರುವ ನಿಮ್ಮ
ಪದ ಬಂಧದಲಿ ಹಿಡಿದು ಹಾಡಲೇನು?
ಸೊಗದ ಸವಿಗನಸುಗಳ
ಹೆಣೆಹೆಣೆದು ಕವಿತೆಯನು
ಕಟ್ಟಲೇನು??

## ಜೀವನ

ನೇಯ್ದಂದಿನಿಂದ ಮಸಿ ಹತ್ತಿ
ಚಿಂದಿ ಗೊಂದಿ ಹರಿದ ಅರಿವೆ
ಉಟ್ಟದ್ದೇ ನೆನಪಿಲ್ಲ
ಮುಟ್ಟಿದೆಡೆಯಲ್ಲೆಲ್ಲಾ ಎದೆ ತೆರೆವ ಕಿಂಡಿಗಳು
ಎಳೆ ಎಳೆದು ಹೊಲಿದಂತೆ
ಹರಿದಗಲ ಬಾಯ ತೆರೆದು ಕಿಸಿಯುವುದು
ಚಳಿಗಾಳಿ ಮಳೆ ಬಿಸಿಲಿಗೆ
ಸರದಿ ಬಂದಂತೆ ಸರಿವ ಋತು ಮಾನಕ್ಕೆ
ಹೊಂದಿಸಿಕೊಳ್ಳುವುದೊಂದೇ ನನ್ನ ಚಿಂತೆ
ಇರುವುದೊಂದೇ ಬಟ್ಟೆ
ಮೈ ಮಾನಗಳ ಮರೆ ಮಾಚಲುಟ್ಟೆ
ಬಣ್ಣಗೆಡಲಿ ಕಣ್ಣುಗೆಡಲಿ
ಮತ್ತೆಮತ್ತೆ ಉಡಲೆ ಬೇಕು
ದಿಕ್ಕುಗಳ ಉಡಲು ದಿಗಂಬರಿಯಲ್ಲ
ಅಕ್ಕನಂತಿರಲು ಕೇಶಾಂಬರಿಯೂ ಅಲ್ಲ
ಎಲ್ಲರಂತಲ್ಲದೆ ನಾನು ನನ್ನಂತಿಲ್ಲ
ಇದ್ದುದನೆ ಎಳೆದು ಮೈ ಸುತ್ತಿ ಕೊಳ್ಳುತ್ತೇನೆ
ಬಿರುಕುಗಳ ಬೆಳಕಲ್ಲೂ ಬತ್ತಲಾಗದೆ ಎದೆಯ
ಗುಟ್ಟುಗಳ ಕಾಯುತ್ತೇನೆ

# ಮೌನವೇದನೆ

ಸೆಳೆವ ಸೊಕ್ಕಿನ ಕಡಲು
ದೂರ ದಂಡೆಗಳು
ವಾರ ವರುಷಗಳು ಭಿತ್ತಿಯ ಮೇಲೆ
ಹೆಜ್ಜೆ ಚಿತ್ತಾರ ಚಿತ್ತಾಪಹಾರ
ನೀರ ಹರಹಿನ ಮೌನ ಗಂಭೀರ
ಅಸ್ಪಷ್ಟ ಗುಟ್ಟುಗಳ ನಿಟ್ಟುಸಿರ ಎಳೆಗಳಲಿ
ನೇದು ಹೊದೆಸಿದೆ ಚಳಿಗೆ
ಬೇರಿಡಲು ಬಿಟ್ಟು ಬಂದ
ನಿಮಿಷಗಳ ನೆನಪು ತಂಪಿನಲಿ
ಬೆಂಕಿ ಬಿಸಿಲಿನ ಹಾದಿ
ಸಹನೆಯಲಿ ಸವೆಯುವುದು
ಕಡಲ ಹಾದಿಗಳಲ್ಲಿ
ಹರಿದಂತೆ ಹಡಗು ಜೀವ
ಸಾಗಿ ಸರಿಯುವುದು ದಂಡೆ ದೂರ
ಹತ್ತಿರಾಗುವ ಆಸೆ ಹೊತ್ತಿ ಉರಿದಾಗೆಲ್ಲ
ಬೀಸಿ ಬರುವುದು ಬಿರುಗಾಳಿ ಮೀರಿ
ಆಸೆ ಕನಸುಗಳೆಲ್ಲ ಜಲಸಮಾಧಿಗೆ ದಾರಿ
ನರಳಿನುಲಿದಾಗ
ಬಾನು ಬಯಲು ಬಂಡೆಗಳಲ್ಲಿ
ಚೀತ್ಕಾರದನುರಣನ
ಕದಡಿ ಕೆಸರಾದ ಆವರಣ
ಮರಣವೇ ಉಳಿದೆನಗೆ ಶರಣ
ಸಾವು ನೆನಪಿನಲೂ ಬದುಕಿನಾಸೆ
ಕ್ಷಿಡಿ ಹೊತ್ತಿ ಸೋತ ಪಾದದ ಕೆಳಗೆ
ಭದ್ರ ನೆಲಗಟ್ಟು

ನೀಲ ಬಾನೊಳಗೆಲ್ಲೊ
ಕಣ್ಣು ಮುಚ್ಚಾಲೆಯಾಡುವ
ನಕ್ಷತ್ರಗಳನೆಲ್ಲ ಹುಡುಕ ಬೇಕು
ಹೆಪ್ಪುಗಟ್ಟಿದ ಕತ್ತಲೆಯ ಹಿಂಡಿದರೆ
ಬಂದೆ ಬರುವುದು ಬೆಳಕು
ಹನಿಹನಿಸಿ ತಣಿಸಿ

# ರೂಪದರ್ಶಿ

ಜಿನಾಗಮ ಜ್ಯೋತಿ ಬೆಳಕಿನ ಪಾದ
ಅಶ್ರುತ ತರಂಗ ದೇವನಾದ
ಸೃಷ್ಟಿ ಸಂದಿಗ್ಧತೆಯು
ಪದ ಪದರ ಮುಖವಾಡ ಸುಲಿಸುಲಿದು
ಹುಟ್ಟು ಮೂಲದ ನಗ್ನಸತ್ಯ ಘನೀಭವಿಸಿ
ದೃಶ್ಯಾ-ದೃಶ್ಯ ಭೂವ್ಯೋಮ ಬೆಸುಗೆ ಕೈವಲ್ಯ ಸೇತು
ಗೆಲವು ಸೋಲಿನ ನಾಟಕವ ನಟಿಸಿ
ನಿರ್ದಾಕ್ಷಿಣ್ಯ-ನೆಲದವಾಸನೆಗೆ ಹೇಸಿ
ಬುಗುರಿ ಭಂಗುರತೆ ಜುಟ್ಟು ಜಡಿದು
ಗಾಜು ಕೌಪೀನಕ್ಕೂ ಬೆಂಕಿಯಿಟ್ಟು
ವ್ಯೋಮದಾಚೆಗೆ ಕಣ್ಣುನೆಟ್ಟು
ತ್ರಿವಿಕ್ರಮ ಪಾದವಷ್ಟೇ ನಮಗೆ ಬಿಟ್ಟು
ಶತ ಶತಮಾನಕ್ಕೂ ಅಕ್ಷಯ ಮಂದಹಾಸದ ಬೇರು ನೆಟ್ಟು
ಮೋಕ್ಷ ಕಾಮ್ಯರ ಆಸರೆ ಬಳ್ಳಿ ಪಾದದ-
ಉಂಗುಷ್ಠದೊಳಗೇ
ಲೋಕ ಬಿಂಬ
ನೆತ್ತಿಗಿದ್ದರೂ ಕಣ್ಣು
ನಿನ್ನ ಕಾಣದಸಮರ್ಥತೆಯ ಬೇನೆಬಾವು
ಉತ್ತಂಗ ಶೃಂಗದಲಿ ಕಲೆಯರಳಿ ಕರೆಯ
ಮೋಹಕತೆ ಗೊಲಿದು ಸೆರೆಯ ಕಲ್ಲಾದೆ
ಸೆರೆಯಲಿದ್ದೂ ನೀನು
ಭರವಸೆಯ ಕಳೆಯೆ
ಮುಮುಕ್ಷು ಸಂಕುಲದ ನೂಲೇಣಿಯಾದೆ
ಬೆಳಕಿಗೇ ಬೆಳಕಿಡುವ ಹಮ್ಮು ಭಟ್ಟನದೇಕೋ!
ಜೋಡಿ ಪಾದಗಳೆರಡು ಕೋಡುಬೆಟ್ಟಗಳು

ಕಣ ಕಣ – ಅಣುಭೂಮ ಬೆಸುಗೆ
ಅರ್ಥವಿಲ್ಲದ ಪೂಜೆ ಶುಭ್ರ ಸೋಗು
ಅಗೋಚರ ಧರ್ಮದರಿವಿಗೆ ನೀನೇ
ರೂಪದರ್ಶಿ

# ಅಂಬೇಡ್ಕರ್ ನೆನಪಿಗೆ

ಊರ ತುಂಬ ಉರಿವ ಸೂರ್ಯನ ಬೆಳಕು
ಇವರ ಕೇರಿಯಲೆಲ್ಲಾ ಕರಿಯ ನೆರಳು
ಹಗಲುಗಳಿಗೆ ಅಪರಿಚಿತ ಕಣ್ಣುಗಳಲ್ಲಿ
ಬರಿನಿದ್ದೆ ಜೋಗುಳವೇ ಸಂಜೀವಿನಿ
ದಿನದಿನವೂ ಕೆಂಡಗಳಲ್ಲಿ ಬಾಡಿ
ನೂರು ನೊಗಗಳ ಹೆಣ ಭಾರಕ್ಕೆ ಕಮಾನು ಬೆನ್ನು
ತೇಪೆ ಚಿತ್ತಾರಗಳ ನಡುವೆ ಬೆತ್ತಲೆಯ ಕಿರಣ
ಗಂಜಿ ಕಾಣದ ಗಂಜಿ ಕಂಬನಿಯಲ್ಲಿ
ತೇಲುವ ಕರಿಮೀನು ಗುಡ್ಡೆಗಳು
ಹೊದ್ದ ಕಂಬಳಿ ನೋವಿನುಂಬಳಿ ಜನ
ಶತ ಶತಮಾನಗಳಿಂದಲೂ
ಕಾದು ನಿಂತಿದ್ದಾರೆ ಕಾತರದ ಹೊಸ್ತಿಲಲಿ
ಕನಸು ಕಂಬಳಿ ಹಾಸಿ
ಬಿಸಿಲ ಝಳ ತೊಡೆವ ತುಂತುರಿಗೆ
ಕಪ್ಪು ಕಡಲಿನಾಳದಿಂದ ಚಿಗಿವ ಸೂರ್ಯನಿಗೆ
ನೋವಿನೆದೆ ಬೇರ ತಣಿಸುವ ರಸಧಾರೆಗೆ
ಬಂದೆ ಬಂದಾನೆಂಬ ಪಾತಾಳದಾಶೆಗಳು
ಹುಸಿಯಾಗಲಿಲ್ಲ ಹುಡಿಯಾಗಲಿಲ್ಲ
ಪುರ ಪುರಗುಟ್ಟಿ ಹಿಂಗುವ ಹಿಲಾಲನ್ನು
ಹಿಡಿದೆತ್ತಿ ಗವ್ವಿಸುವ ಗುಡಿಸಲಿಗೆ ಬೆಳಕ ಕೊಟ್ಟು
ಬೆವರಿಗೆ ಬೆಲೆ ಕೊಟ್ಟು
ಎದ್ದು ನಿಲ್ಲಲ್ಲು ಹೆಗಲು ಕೊಟ್ಟ
ಮೂಕ ನೋವಿನ ದನಿಗೆ ಕೊರಳುಕೊಟ್ಟ
ತೊದಲು ಹೆಜ್ಜೆಗೆ ಊರಗೋಲನಿಟ್ಟ
ಯಾರ ಬೊಜ್ಜಿಗೊ ದಣಿದ ರಟ್ಟೆಗಳಿಗೆ

ಸೂಜಿ ಮದ್ದಿಟ್ಟು ಮಾಯಿಸಿದ
ಕೊಳೆಗೇರಿ ಕತ್ತಲೆಗೆ ಹಣತೆ ಇಟ್ಟ
ನಿದ್ದೆ ಕಣ್ಣಿನ ಪೊರೆಗೆ ಹಗಲ ಪಂಜು
ಕೆಂಡ ಮುಳ್ಳಿನ ನಡುವೆ ಮಲ್ಲಿಗೆಯ ಮುಗುಳು
ಅಳಲ ಗಿರಿಗಳ ಮುರಿಯೆ ಗಾಳಿ ಗೂಳಿ
ಅಸ್ಪೃಶ್ಯ ದೈತ್ಯನನಂತ ಹಾವಳಿಗೆ
ಕೆಂಡ ಕಿಡಿಗಳ ಸುರಿಸಿ ಬ್ರಹ್ಮಾಸ್ತ್ರತಾನಾದ
ಕರಿಮೋಡದಂಚಿನಲ್ಲಿ ಹೊಳೆವ
ಬೆಳ್ಳಿ ರೇಖೆಯಾದ
ಬಳಸಿ ಬಂಧಿಸಿ ಬಿಗಿದ
ಗ್ರಹಣ ಮುಕ್ತ ಸೂರ್ಯನಾದ
ಅಕ್ಷರ ಬಕಾಸುರನಾದ ಬೆಳೆದು ತ್ರಿವಿಕ್ರಮನಾದ
ಅರಿವು ಛಲ ಉಳಿ ಪೆಟ್ಟು ಸ್ವಯಂಶಿಲ್ಪವಾದ
ನಾದವಾದ ವೇದವಾದ
ನೆಲನಡುಗುವ ಸಿಂಹಘೋಷವಾದ ಜೀವ ಜೀವದೆದೆಯಲ್ಲು
ಭಕ್ತಿ ಚಿಗುರಿಸುವ ಹಾಡನರಳಿಸುವ
ಸ್ವಯಂಭುವೇ ತಾನಾಗಿ ಬೇರು ಬಿಟ್ಟ

# ನನ್ನ ಹಾಡು – ನನ್ನ ಪಾಡು

ಹೊಗಳಿದರು ಹೊಗಳಿ ಹೊಗಳಿ
ಹೊನ್ನ ಶೂಲಕ್ಕೆ ಇಕ್ಕಿದರಯ್ಯ
ಕಮಲವೆಂದರು – ಕೋಮಲೆಯೆಂದರು
ಕಣ್ಣು ಕರುಣೆಯ ಕೊಡಗಳೆಂದರು
ತ್ಯಾಗ ಸ್ನೇಹದ ಮಡುಗಳೆಂದರು
ಬಾಡದಿರಲೆಂದು ಬೆಳಕಿಂಡಿಗಳ ಮುಚ್ಚಿದರು
ಬಿಸಿಲು ಬೀಳದಿರಲೆಂದು
ಬಾಗಿಲನ್ನೇ ಬಿಗಿದರು
ಅಕ್ಕರೆಯ ಕರಿಯ ಕೊಡೆಗಳ ಬಿಡಿಸಿ
ಭೂತದ ನೆರಳ ನಡುವೆಯೂ ನೆರಳ ಕೊರೆದರು
ಬಯಲ ಗಾಳಿಯ ಹಲವು ಗಂಧಗಳ
ಅಲರ್ಜಿಗೆ ಹೆದರಿ
ಗಾಳಿಯಾಡದ ಗೋಡೆಗಳಿಲ್ಲದ
ಗೋರಿ ಕಟ್ಟಿ ಬೃಂದಾವನವ ನೆಟ್ಟರು
ದುಡಿಮೆಯೇ ದೇವರೆಂದೊರೆದು
ಕಸಪೊರಕೆ ಊದು ಕೊಳವೆಗಳ
ಹಿಡಿದು ದುಡಿಸಿದರು ದಯಾವಂತರು
ಕೊನೆಯ ಪಯಣದವರೆಗೆ
ನೊಗ ಕಟ್ಟಿ ಗಾಣಕ್ಕೆ ಗೂಟವಿಟ್ಟು
ನಿಲ್ಲದ ಪದಗತಿಗೆ ಸಾಗುವ ಸ್ವಿಚ್ಛೊತ್ತಿ
ಬದುಕಿನ ಸೊಗ ಸೊಂಪುಗಳನೆಲ್ಲ
ಬರುವ ಪೀಳಿಗೆಗೂ ಮಿಗುವಂತೆ
ಭಂಡಾರದೊಳಗಿಟ್ಟು ಭದ್ರ ಪಡಿಸಿದರು
ಅಮ್ಮನ ಮಡಿಲ ಬಿರಿದ ಮಲ್ಲಿಗೆಯಾಗಿ
ಅಪ್ಪನಕ್ಕರೆ ಬೇಲಿ ಬಂದಿ ನಾನಾಗಿ

ಗಂಡನರಮನೆ ಅನ್ನದ ಹಂಗಿನಲಿ ಕುದಿಯುತ್ತ
ಅವನೆಳೆದ ಲಕ್ಷ್ಮಣ ರೇಖೆಗಳ ಗಡಿಯೊಳಗೆ
ಬಾಲ ಸುಟ್ಟಕೊಂಡ ಬೆಕ್ಕಿನಂತೆ ಶತಪಥಿಸಿ
ಮತ್ತೆ ಮಕ್ಕಳ ದಯಾಭಿಕ್ಷೆಗೆ ಜೋಲಿಯೊಡ್ಡಿ
ಸಿಡಿಮಿಡಿ ಸೂಜಿ ಬೆಂಕಿಯ ಬೇನೆಯಲಿ
ಉಸಿರುಗಟ್ಟುತ ಉಸಿರಾಟಕ್ಕೆ ಕಿಂಡಿಗಳ ಹುಡುಕುತ್ತ
ನನ್ನ ನೋವಿಗೆ ನಾನೇ ಮಾರ್ದನಿಸುತ್ತ
ಅತ್ತರಿನ ಹನಿಗಳ ಸಿಂಪಡಿಕೆ ಮಳೆಯ ಕೊಡೆ
ತುಡಿವ ಜೀವದ ದುರ್ಬಲ ದನಿಗೆ
ಜಾಣ ಕಿವುಡಾಗುತ್ತ
ಕಾಮದಾಟಕ್ಕೆ ಗೊಂಬೆಗೊಳಿಸುತ್ತ
ನರನರದ ಬತ್ತಿಗಳ ಹೊತ್ತಿಸಿ ಉರಿಸಿ
ಆ ಉರಿಯ ಬೆಳಕಲ್ಲೇ ಕುಲ ದೀಪಗಳ
ಬೆಳಗುತ್ತ
ಕಟ್ಟಿ ಹಾಡಿದರಯ್ಯ ಕತೆ ಕವನ ನೂರೆಂಟು –
ನಿನ್ನ ನಡೆ ಜಾಡಿನಲಿ ದೇವ ಪಾದದ ಬಿಂಬ
ನಿನ್ನಾತ್ಮ ಶಕ್ತಿಯೇ ನೆಲಮುಗಿಲ ತುಂಬ
ಜಗವ ಬಸಿರಲಿ ತಳೆದ ಜಗದಂಬೆ ನೀನಂಬೆ
ನಕ್ಕರೆ ನಗೆ ಮಿಂಚು ಬೆಳಗುವುದು ಬದುಕು
ಭ್ರೂಭಂಗ ಕ್ಷಣದಲ್ಲಿ ಪ್ರಲಯ ವಿಲಯ
ಶಾಂತಿ ಕರುಣೆಯ ಕಡಲು ನೀನಪಾರ
ಇದ್ದಲ್ಲಿ ಇರುವಲ್ಲಿ ಇದ್ದೇ ಇರುವುದು ದೇವ ಸಂಚಾರ
ನುಡಿದ ನಾಲಗೆ ಸೀಳು ನುಡಿದಿತ್ತು ಮತ್ತೊಮ್ಮೆ
ನೀನಲ್ಲ ಸ್ವತಂತ್ರ ನಿನಗಿಲ್ಲ ಸಮಪಾಲು
ನಿನ್ನ ಭದ್ರತೆಗೆ ನಿಂತಿದ್ದೇವೆ
ಸಾಲು ಸಾಲು
ಗಂಡನಾಸರೆ ನೆರಳ ತಂಪಿನಲಿ ಸೊಂಪಿಹುದು
ಮಕ್ಕಳಕ್ಕರೆಯ ಬೇಲಿಯಲಿ ಮುಕ್ತಿಯಿಹುದು
ನುಡಿದಿದ್ದೆ ನುಡಿದಿತ್ತು ನೀತಿ ಪಾಠ
ಮಾತು ಮುಳ್ಳಿನ ಬೇಂಕಿ
ಗುಡುಗು ಸಿಡಿಲಬ್ಬರ ಬೊಬ್ಬೆ ಸುರಿ ಮಳೆ

ಪಾತಾಳ ಸೆರೆಯೊಳಗೆ ನಿತ್ಯ ನೋವಿನ ಹೆರಿಗೆ
ಸಾವು ಸೂತಕ ಮಡಿ ಮೈಲಿಗೆಗಳಾವರ್ತನ
ಹಬ್ಬಕ್ಕೊ, ಶ್ರಾದ್ಧಕ್ಕೋ ಬಗೆ ಬಗೆಯ ಭಕ್ಷ್ಯ ಘಮಲು
ಬದುಕಲ್ಲದ ಬದುಕಿನ ಜನ್ಮಜಾಲ
ದನಿಯಿದ್ದೂ ದನಿಯಿಲ್ಲ ಕಣ್ಣಿದ್ದೂ ಬೆಳಕಿಲ್ಲ
ಮೌನಗೀತದ ಕೊಳಲ ಮೋಹಕ್ಕೆ ಮೈಮರೆತು
ಕೋಟೆಗಟ್ಟಿದ ಕತ್ತಲ ಗೋಡೆಗಳ ತಡಕಾಡಿ
ಇಷ್ಟಿಷ್ಟೇ ಕನ್ನ ಕೊರೆದು ಕಿಂಡಿಗಳ ಕೆತ್ತಿದ್ದೇನೆ
ಬಿಲದಳತೆಗಷ್ಟೇ ಚಾಚಿಕೊಂಡಿದ್ದ ಮೈಯ್ಯ
ದೂಡಿ ದೂಡಿ ಹೊರಗೆ ಹೊಸಗಾಳಿಗೊಡ್ಡಿದ್ದೇನೆ
ತೊದಲ ಹೆಜ್ಜೆಗಳಲ್ಲಿ ತಡವರಿಸಿ ನಡೆದು
ಸವೆಸಿದ ಹಾದಿಗಳಲ್ಲೀಗಷ್ಟೆ ಮೊಳಗಿದೆ
ಕೆಂಪು ಕಹಳೆಯ ಕೊರಳು
ಕಾದು ನೋಡುತ್ತೇನೆ ಕಾದೇ ಕಾಯುತ್ತೇನೆ
ನನ್ನಂಗಳದ ಹರಹಿನಲಿ
ಕೊಂಬೆಗಳು ಕೆರಳಿ ಅರಳುವುದೇನೋ
ಅಗ್ನಿ ಹೂವು!!

# ಮದುವೆ ಮಂಟಪದಲ್ಲಿ

ಹಸಿರು ಚಪ್ಪರದಿಂದ
ಇಳಿ ಬಿಟ್ಟ ಕಾಯಿ ಹಣ್ಣು
ನಾಲ್ಕು ದಿಕ್ಕಿಗೆ ನೆಟ್ಟ ಕಂಬಗಳು
ಮುಡಿಯಿಂದ ಇಳಿಬಿದ್ದ
ವಿದ್ಯುದ್ಬಳ್ಳಿ ಮೈ ತುಂಬ
ಬಿರಿದ ಕಾಮನ ಬಿಲ್ಲ
ಬಲ್ಬುಗಳ ಬೆಳಕ ಹೊನಲು
ನಡುವೆ ಹಾಸಿದ ಹಸೆಯ
ಸೊಗದ ಚಿತ್ತಾರದೆದೆ ಮೇಲೆ
ಸವಿಗನಸ ಹೊರೆ ಹೊತ್ತ
ಗಂಡು – ಹೆಣ್ಣು
ಹುದುಗಿಟ್ಟ ಬಯಕೆಗಳ
ಬೆನ್ನೇರಿ ಸಾಗುತಿವೆ
ಜೋಡಿ ಕಣ್ಣು
ಉರಿವ ಹೋಮದ ಬೆಂಕಿ
ಜ್ವಾಲೆ ಕನ್ನಡಿಯಲ್ಲಿ
ಕಾಣುವ ಮುಖಗಳ ಬೇರಿಗೆ
ಪ್ರಜ್ಞೆಯಾಳವನಗೆವ
ದಣಿವು ಬೆವರು!!

ಅಜ್ಞಾತ ಮೂಲದಿಂದೆಲ್ಲೋ ಹೊರಟ
ಅಪರಿಚಿತ
ಜೀವಧಾತುವಿನೆರಕದಲಿ
ಭವಿಷ್ಯಗಳ ಬಿತ್ತಿ
ಹೊಸ ಥಳಿಯ ಸೃಷ್ಟಿಗೆ

ಶುದ್ಧಾತ್ಮ ಸಂಕರಕೆ
ಭಟ್ಟ ಪೊರೋಹಿತನ
ಮಣ ಮಣ ಮಂತ್ರಸಾಕ್ಷಿ
ಗಂಡು ಹೆಣ್ಣುಗಳೆದೆಯಾಳದೊಳಗೆಲ್ಲಾ
ಮೂಕ ಭಾವಗೀತೆಗಳು ಹುದುಗಿ ಗೋರಿ!
ದ್ವೀಪ ದ್ವೀಪದ ನಡುವೆ
ಹರಿವ ಸಾಗರದಲ್ಲಿ
ದಿಕ್ಕಿಗಾಗಿ
ದಡಕ್ಕಾಗಿ
ತಡಕಾಟ ಹುಡುಕಾಟ
ನಿಂತ ಸಾಗರ ದೀಪ
ಮಂದ ಬೆಳಕಿನ ಹೊನಲು ಎಷ್ಟು ದೂರದವರೆಗೋ
ದೋಣಿಯಾಟ
ಸೇಸೆ ಜೀರಿಗೆ ಬೆಲ್ಲ
ಉಪ್ಪಾನೆ ಪಪ್ಪಾನೆ
ಸಪ್ತಪದಿಯ ಸಾಮಗೀತ
ಯಾವುದೆಷ್ಟೆಷ್ಟೊ ಅರ್ಥವೇನೊ!
ಜಾತಿ ಮೂಲಗಳೆರಡು
ಸಾಗಿ ಸೇರುವುದೆಲ್ಲೊ
ಬೆಸೆದು ಬೇರು!!

ಯಕ್ಷ ಲೋಕಗಳಲ್ಲಿ
ಅಮರಾವತಿಯ ಅರಮನೆಯಲ್ಲಿ
ಮಣಿ ಮಂಚದೆದೆಯಲ್ಲಿ
ಕನಸುಗಳ ಕುಸುಮಿಸುತ
ಮನಸುಗಳ ಮುದವಿಸುತ
ತೇಲಿ ವೈಹಾಳಿಯಲಿ ಭಾವ ಹಂಸ
ಮದುವೆ ಮಂಟಪದ ಸದ್ದು ಗದ್ದಲಕೆದ್ದು
ಬಾನಿನಂಗಳದಿಂದ ನೆಲಕೆ ಬಿದ್ದು
ಕಣ್ಣರಳಿಸಿ ಕಾಣ ಕಾಣುತ್ತಲೇ
ಕಾಮನ ಬಿಲ್ಲ ಕನಸುಗಳು
ಮಂಗ ಮಾಯ!!

# ಮನದನ್ನನ ಮುನಿಸು

ಮನದನ್ನ ಮುನಿದವನೆ
ಮಾಡಲೇನು ಸಖಿ?
ಮೆತ್ತನೆಯ ಹಾಸಿನಲಿ
ಮುತ್ತುಗಳ ಮುಗುಳೆರಚಿ
ಮತ್ತು ಮಾದಕ ಪ್ರೀತಿ
ಜೋಗುಳವ ಹಾಡಿ ಕಾದಿದ್ದೇನೆ

ನೀಲ ಬಾನಿನ ಪರದೆಗಳ
ಇಳಿಬಿಟ್ಟು
ನಕ್ಷತ್ರ ಹಣತೆಗಳ ಹಚ್ಚಿ ಇಟ್ಟು
ಚಂದ್ರ ಕಾಂತಿ ಕರೆದು
ಕುಣಿಯ ಬಿಟ್ಟು
ಕಾದು ಕುಳಿತ್ತಿದ್ದೇನೆ ಬರುವನೇನೋ ಎಂದು!!

ವರುಷ ವರುಷದ ಬದುಕು
ಒಡಕಿಲ್ಲದುಳಿದಿತ್ತು
ಕಿಸರುಗಣ್ಣಿನ ಶಾಪ ಯಾರದಾಯ್ತೋ?
ನಗುವ ನಂದನಕಿಂದು ಕಿಚ್ಚು ಬಿತ್ತು

ಎಷ್ಟೆಲ್ಲ ನೆನಪುಗಳು
ಕ್ಷಣ ಕ್ಷಣದ ಮೋಜುಗಳು
ಸ್ವರ್ಗಕ್ಕೆ ಕಿಚ್ಚೆನುವ
ಒಡನಾಟ ಒಲಿವಾಟ
ಜನ್ಮ ಜನ್ಮದ ನಂಟು
ನಮ್ಮದೆನ್ನುವ ಮಾತು –

ಪ್ರೀತಿಗಳು ನಮಗಿಲ್ಲ ಇನ್ನು?
ಹೇಳು ಸಖಿ ಮುನಿದವನ
ಮನವೆಂತು ರಮಿಸಲಿ?

ಕರೆ ಕರೆದು ಕೊರಲೊಡೆದು
ಮೂಕವಾಯ್ತು
ನೆನೆನೆದು ಎದೆ ಭಾವ ಶೂನ್ಯವಾಯ್ತು
ತಂತಿತಾಳಗಳುಡಿದು
ಗೆಜ್ಜೆಗಳು ಹರಿದು
ಪ್ರಣಯದಾಮೋದ ಕುಣಿತಗಳು
ನೆನಪು ಭೂತಗಳು!!

ಇನ್ನೇಕೆ ಈ ಜೀವ ಅರ್ಥವಿಲ್ಲದ ಭಾವ
ಒಪ್ಪಿಸಲಿ ಯಾರಿಗೆ
ಹೇಳು ಸಖಿ ಈ ನೋವ!
ಕ್ಷಣ ಸಿಡಿದ ಕಿಡಿಗಿಷ್ಟು
ಸುಡುವ ಬಲವೇ ಸುಖವ?
ಆದರೂ ಮರ ಮರಳಿ
ಕರೆವೆ ಬಾ ನನ್ನೊಲವೆ!

# ನುಡಿಸದಿರು ಕೊಳಲ

ನುಡಿಸದಿರು ಕೊಳಲ
ಇರಿಯದಿರು ಕೊರಳ
ನನಗೇನು ಗೊತ್ತು
ಕೊಳಲ ಗಮ್ಮತ್ತು

ಅಂಕೆಯಿಲ್ಲದೆ ಯಮುನೆ
ದಂಡೆಯಲಿ ಅಲೆಅಲೆದು
ದೂರ ದಂಡೆಯ ಮಡಿಲ
ಮರದ ಮರೆಯೊಳಗಿದ್ದು
ಕಾಡದಿರು ಕೊಳಲುಲಿದು
ನಿನಗೇನು ಗೊತ್ತು
ಕೊಳಲುಲಿಗೆ ಚಿತ್ತ ಉನ್ಮತ್ತ
ಸೆಳೆವುದೆಲ್ಲಿಗೂ ಏನೊ
ಅರಿವಿನಾಚೆಯ ಅರ್ಥ
ಅರಿವುದೆಂತು?
ಭಾವರಸಬಯಕೆಗಳು
ಗರಿಯೊಡೆದು ಜಿಗಿಯುತಿವೆ
ಮನೆದೂರ ಮನದೂರ
ಮಾಡಲೇನೊ?!

ಗಂಡು ಮಕ್ಕಳ ಪ್ರೀತಿ
ಸುಡುವ ಅತ್ತೆಯ ರೀತಿ
ಮರೆತು ತುಡಿವುದು ಮನವು
ಕಾಡಿ ಕರೆವುದು ನಿನ್ನದೊಂದೆ ನೆನಪು
ನುಡಿಸಿಕೊಳಲನು

ಕೊಳ್ಳದಿರು ಸುಖವೆನ್ನ
ಮರೆತ ಮಾದಕತೆಯ
ಸವಿ ಕೆರಳಿ ಕಾಡದಿರು
ನಂಜುಂಡ, ಜೀವವಿದು
ಕನಸುಗಳ ಬಿತ್ತದಿರು

ಈಭವದ ಬದುಕೆ
ಇರಲಿರಲಿ ನನಗಿನ್ನು
ಕನಸಲ್ಲಿ ನೀ ಕೊಡುವ
ಮುತ್ತುಗಳ ಮತ್ತು!

# ನಿವೃತ್ತ ಗೆಳೆಯನಿಗೆ

ದೂರ ದೂರ ಜೊತೆಯಲಿ ಪಯಣ
ಸುಖವಾಗಿತ್ತು; ಹಿತವಾಗಿತ್ತು
ಬೋರೆನಿಸಲಿಲ್ಲ
ಕಷ್ಟ ಸುಖಗಳು ಸಂತೆ ಪುರಾಣಗಳ
ಸುರುಳಿ ಬಿಚ್ಚಿಕೊಂಡು ನಕ್ಕಿದ್ದೇವೆ
ಅತ್ತಿದ್ದೇವೆ ಕಿಟಕಿ ಗೋಡೆ ಕಂಬಗಳೆಲ್ಲ
ನಿನ್ನ ಹೆಸರ ಉಸಿರಾಡುತ್ತವೆ
ಮೇಲಿನ ಆಕಾಶ
ಕೆಳಗಿನ ನೆಲ
ಪರಿಚಯದ ಪದ್ಯ ಕಟ್ಟಿ ಹಾಡಿದೆ
ಬರಿ ಹೂವು ನೆರಳಷ್ಟೆ
ಇರಲಿಲ್ಲ
ಬೃಂದಾವನದ ಸುತ್ತ
ಬಳ್ಳಿನಾಗರಗಳು ಹೆಡೆಯಾಡಿದ್ದುಂಟು
ಒಮ್ಮೊಮ್ಮೆ ಕಡಲು ಸಿಡಿಲು
ಬಾನು ಕೆದರಿದ ಅಳಲು
ಏಕತಾನತೆ ಜಡ್ಡು ನಾಲಗೆಯ ನಡುವೆ
ಹೊಸರಾಗ ಕಾರಂಜಿಯೊಡೆದದ್ದು ಸುಳ್ಳಲ್ಲ
ಗುಮ್ಮನ ಗುಸುಕಾಗಿ ಮಸೆದು
ಪತ್ತೇದಾರಿ ಕಣ್ಣುಗಳಲ್ಲಿ
ತಪ್ಪಿ ನಾವು ಹೊಳೆದದ್ದುಂಟು
ಹಾಗೆಯೇ ಸ್ನೇಹ ತಂತುಗಳು
ನೇಯ್ದ ಬಲೆಯಲ್ಲಿ
ಸಿಕ್ಕು ಒದ್ದಾಡಿದರೂ ಸುಖಿಸಿ
ಹಿರಿ ಹಿರಿ ಹಿಗ್ಗಿದ್ದುಂಟು

ಪಯಣದುದ್ದಕೂ ಹನಿಹನಿಯಾಗಿ
ನಗೆ–ನೋವು ಸುಖ–ಅಸುಖಗಳ
ಕೂಡಿಟ್ಟುಕೊಂಡ
ನೆನಪು ನಿಧಿ
ನಮ್ಮಲ್ಲಿಯೇ ಭದ್ರ
ಮುಂದೆ ಎಂದಾದರೊಮ್ಮೆ
ಬರಬಹುದು ಒಂಟಿ ಹೆಜ್ಜೆಯ
ಜೊತೆಗೆ ಸಂಗಾತಿಯಾಗಿ
ಈಗ ಇಳಿದರೇನು?
ನೀನು ನಡೆದಾಡಿದಾಗ ಈ
ಹಾದಿಗಳಲ್ಲಿ ನಿಂತ
ಚೌಕಗಳಲ್ಲಿ
ಇಣಿಕಿ ನೋಡು
ನಿನ್ನ ಸ್ನೇಹದ ಬಿಂಬ ನಮ್ಮೆದೆಯ
ಬಾನಲ್ಲಿ ಹುಡುಕಿ ನೋಡು
ಇನ್ನೆರಡು ದಿವಸಕ್ಕೆ
ನಾವೂ ಇಳಿಯುತ್ತೇವೆ
ನಮ್ಮ ಪಯಣಕೂ ವಿದಾಯ ಹೇಳಿ
ರಾಷ್ಟ್ರಗೀತೆ ಹಾಡುತ್ತೇವೆ

## ನನ್ನವ್ವ!!

ನನ್ನವ್ವ ನೆರಳು ತಂಪಿನ
ಮಹಾ ವಟ ವೃಕ್ಷ!!
ನೆಲದ್ದೆದೆ ಸೀಳಿ
ಕವಲಾಗಿ
ಹೊರಟ ಬೇರುಗಳ ಜಾಡು ಅಯೋಮಯ
ನಿಮಿರಿ ನಿಂತ ತಲೆ ಶಿಖರದೆಡೆಯಲ್ಲಿ
ಸ್ವರ್ಣ ಗೋಲ
ವಿಶ್ವರೂಪವ ಹಿಡಿದು ದೃಷ್ಟಿಯಲಿ
ಜಡಿದು
ಬಂಧಿಸುವ ಬಯಕೆಯೆದೆಗಳನುರಿಸಿ
ಕುಕ್ಕಿ ಪುರಪುರಗುಟ್ಟಿ ಬತ್ತಿಸುತ ನಕ್ಕಾಗ
ಲಕ್ಷ ಲಕ್ಷಕ್ಕು ಮೀರಿ ತುಡಿವ ಭೂಕಂಪ
ಜೀವ ಕಡಲೊಳಗೆ
ಗೋರಿಯ ನಡುವೆ
ಸೆಟೆದ ಭಂಗಿ
ಮೈ ಮುಡಿಗಳೊಳಗಿಂದ ಮೂಡಿಸಿದ
ಬಿಳಲುಗಳ ನೆರಳಲ್ಲಿ
ತಂಪೆರವ ಎಡೆಗಳಲಿ
ನಡು ಬಳಸಿ ನಿಂತಿರುವ ಕಾಪಾಲ ಸೈನ್ಯ
ಕರಿ ನೆರಳು ಇಡಿಕಿರಿದಂತೆ
ಅಗೆವ ಆಳದೆಲ್ಲೆಲ್ಲ ಹೆಣ ಬಣಬೆ ದಂಡು
ಅಸ್ಥಿಪಂಜರ ದೈತ್ಯ ನೃತ್ಯ
ಹಸಿದ ಹಂದರದೊಳಗೆ
ಗುಟುಕರಿಪ ಜೀವಗಳು
ಜಗ ಜಗಿಪ ಬಣ್ಣ ಬೆಳಕಿನ ನಡುವೆ

ನರ ಮಾಂಸದ ಮೆತ್ತನೆಯ ಸೋಫಾಗಳಲ್ಲಿ
ಆಸೀನ ಆರ್ತರಕ್ಷಕ ಭಕ್ಷಕರ ಮೇಜವಾನಿ
ಹಸಿ ಮಾಂಸದಾಮ್ಲೆಟ್ಟು
ಬಿಸಿ ನೆತ್ತರಿನ ಷಾಂಪೇನು
ಹೊಟ್ಟೆ ಗಂಟಲಡರುವ ತನಕ ಸರಬರಾಜು
ನೆತ್ತಿಗೇರಿದಮಲಿನಲಿ
ನಡೆವ ಹೆಜ್ಜೆಗಳಡಿಗೆ ಹೆಣದ ಹಾಸು
ಕರಿನೆರಳ ಗೂಢದಲಿ ಕಪ್ಪಾದ ಕೈಗಳು
ಬೆಳಕಿನಲಿ ಬೆಳಗಿದವು
ದೇಶ – ಸಮಾಜ
ಜನತಾ –
ಉದ್ಧಾರ ದೀಕ್ಷಾಕಂಕಣದ
ಗಿಲಕುಗಿಲಕಿನ ಸದ್ದು
ತಾರ ಸಪ್ತಕದಲ್ಲಿ ಕೊರಳಿರಿವ
ಬಿರುದು ಬಾವಲಿ ಚೆಲ್ಲಿ
ಮನೆಯಿಂದ ಮಹಾ ವೃಕ್ಷದ ಬುಡಕೆ
ಕಸರತ್ತು – ಕರಾಮತ್ತು

# ಸಂಜೆ ಭಾವ

ಸಂಜೆ ಬಾನಿನ ಎದೆಯ ತುಂಬಾ
ಹಗಲ ಹರುಷದ ನೆನಪು ಹೂಗಳು
ಪಚ್ಚೆ ಪೈರಿನ ನವಿರು ಹಾಸಲಿ
ಮರೆತ ಮಾದಕ ನಿದ್ದೆಯೇಳಲು
ಎಳೆಯ ಬಿಸಿಲಿನ ಕಿರಣ ಮೋದಕೆ
ಮುರಿದ ಕನಸು
ಕಣ್ಣಿನಾಚೆಗೆ ಹಬ್ಬಿ ಹರಿವ ಸೊಗಸು
ಗಿಡ ಗಿಡದ ಮುಡಿ ತುಂಬ
ಬಾನ ಚುಕ್ಕಿಗಳಂತೆ ಬೆಳ್ಳಿ ಹನಿ ಬಿಂದುಗಳು
ಬಾಯರತ ಬಯಕೆಯಲಿ ಮತ್ತ ಪಾನ
ದೂರದಂತರದಲ್ಲಿ ಕಾನನದ ಕೊಂಬೆಯಲಿ
ಹರಿದಿತ್ತು ಕೋಗಿಲೆಯ ಮಧುರಗಾನ
ತಿಳಿಗೊಳದ ಜಲದ ಕನ್ನಡಿಯಲ್ಲಿ
ಅರಳು ತಾವರೆ ಮುಡಿದು
ನೀಲನಭವನೆ ನೆರಿಗೆಯಿಟ್ಟು
ಬಳ್ಳಿ ಕುಸುಮವ ತೊಟ್ಟು
ಅರುಣರಾಗದ ಕೆಂಪು ತುಟಿಗೆ ಬಳಿದು
ಹೊಗರೆದ್ದ ಅಂದವನು
ಚಿಗುರಿದ್ದ ಚಂದವನು
ನೆನೆದು ನಡೆದಿತ್ತು ಚಿನ್ನಾಟವು
ಎಳೆ ಬೆಳಕು ತಿಳಿ ಬೆಳಕು
ಬೆಳ್ಳಿ ಬೆಂಕಿಯ ಬೆಳಕು
ಹೊನಲ ಪೂರದಲೆಲ್ಲ ಮೈ ತೊಳೆದು
ಚಂದ ಚಂದನ ಗಂಧ
ಮಂದಾರ ಹೂಗಾಳಿ ಉಡುಪನುಟ್ಟು

ಹಣೆಯಲ್ಲಿ ರಂಜಿಸಿತು ಚಂದ್ರ ಕುಂಕುಮ ಬೊಟ್ಟು
ಗೆಜ್ಜೆ ಹೂಗೊಂಚಲಿನ ಕಡಗ ತೊಟ್ಟು
ಜೀವ ಜೀವದ ದೋಣಿ
ಚೈತನ್ಯ ಕಡಲೊಳಗೆ ಸಾಗುತಿರಲು
ಬೆಳಗು ಜಾವದ ಬಾಲ ಲೀಲೆಗಳು
–ಸೋರಿ
ಮುಗ್ಧ ಮೋಹವು ಜಾರಿ
ಹುಚ್ಚು ಪ್ರಾಯದ ಕುದುರೆ
ಬಯಕೆ ದುಂಬಿಯ ಹಿಂಡು
ಅಂಕೆ ಅಂಕುಶ ಎಲ್ಲೆಗಳ ಹಿಂದೆ
ಒದ್ದು ನಿಟ್ಟುಸಿರ ಕತ್ತಲನು ಇರಿದು ಕೊಂದದ್ದು
ಬಾನ ಕಂಬನಿ ಮುತ್ತು ಮುತ್ತಾಗಿ ಮೂಡಿದ್ದು
ಉಲ್ಲಾಸದುಯ್ಯಾಲೆ ತೂಗಿ ಆಡಿದ್ದು
ಒಟ್ಟಾಗಿ ಗುಟ್ಟಾಗಿ ನನ್ನೆದೆಯ ಕೋಶದಲಿ
ನೆನಪು ನಿಧಿಯಾಗುಳಿದು
ದಿನ ಮುಕ್ತಿಯಂಚಿನಲಿ
ಕಾರಿರುಳ ಹೊಸ್ತಿಲಲಿ
ನಿಂತವಳ ಬಳಸಿಹುದು
ಸಪ್ತವರ್ಣಗಳ ಹಿರಿದೊಂದು ವೃತ್ತ
ಕ್ಷಣದ ವರ್ಣ ವೈಭೋಗಕ್ಕೆ
ಕಾಳ ಸರ್ಪದ ಇರುಳ ನೆರಳ ಪಹರೆ
ಒಮ್ಮೊಮ್ಮೆ
ಹೊಳೆಯುವುದು
ನಕ್ಷತ್ರ ಮಣಿ ದೀಪ
ಉಗುವ ಕಂಬನಿ ತಡೆದು
ಅದರ ಬೆಳಕನೆ ಹಿಡಿದು
ನಾಳೆ ಹಗಲಿನ ಕನಸೊಳಗೆ
ಸವೆಯುವುದು ಈ ಜೀವ ಸಂಜೆ
ನೋಯುವುದು ಮನವೀಗ ಭಾವ ಬಂಜೆ

# ಈ ತೆರದ ನಿರೀಕ್ಷೆಯಲ್ಲಿ

ಕಾಯುವುದೂ ಕಾಯಿಸುವುದೂ
ಮಾಮೂಲೆ ಬಿಡಿ
ಕಾದು ಕಾದು ಹಣ್ಣಾದ ಕಾಯಿ
ನಾಲಿಗೆಯ ರುಚಿಗೆ ರೋಚಕ ಲೇಪ

ಕಾದು ಕಾಲ ತುದಿಯಲ್ಲೇ ನಿಂತು
ಪ್ರೇಮಿಗಂಡನ ಕಾಣಲಾಗದ್ದಕ್ಕೆ
ಕಾವೇರಿದ್ದ ಕೋಪವೂ ಕರಗಿ
ಕಣ್ಣಂಚಿನೆಲ್ಲೆಯಾಚೆಗೆ ಸಿಡಿದು

ಪಳಕ್ಕನೆ ಉದುರಿದ್ದ ಕಂಬನಿ
ಕೆನ್ನೆಯಂಗಳವನ್ನು ಮೀಯಿಸಿತ್ತು
ಚಕಮಕಿಯ ಕಿಡಿಗಳೂ
ತಣ್ಣಗೆನಿಸಿತ್ತು

ಹಗಲಿನುಪವಾಸ
ರಾತ್ರಿ ಬಿಸಿಯಡಿಗೆಯಲಿ
ಪ್ರೀತಿ ಪ್ರೇಮದ ಸವಿಬೆರಸಿ
ಅಟ್ಟು ಕಾದಿರಿಸಿದ
ಅಡುಗೆ ಹಳಸಿದರೂ
ಹೆಜ್ಜೆ ಸಪ್ಪುಳವಿಲ್ಲ
ಆದರೂ ಕಾದಿದ್ದೇನೆ
ಕಾಯುವುದು ಮಾಮೂಲೆಂಬ
ಆತ್ಮವಂಚನೆಯೊಳಗೆ
ಕಾದಲ್ಲದೆ ಕೈಗೂಡುವುದಿಲ್ಲ
ಕಾಮಿಸಿದ ಕನಸುಗಳು

ಬೇಕೆನಿಸಿದೆಲ್ಲವೂ!
ಅಕ್ಕಿಗೂ ಸಕ್ಕರೆಗೂ
ಎಣ್ಣೆಗೂ ಬೆಣ್ಣೆಗೂ
ಕಡೆಗೊಂದಿಷ್ಟು ಮಣ್ಣಿಗೂ!
ಹೊಟ್ಟೆಹೊರೆಯುವ ದಾರಿಗೂ
ಜೀವವೇ ತಾನಾದ ಗಾಳಿಗೂ
– ನೀರಿಗೂ
ಕಾಯಲೇಬೇಕು ಕಾಯುತ್ತಲಿರಬೇಕು

ಹುಣ್ಣಿಮೆಯ ಚಂದಿರನ ಕಾಣಲು
ಕಾಯಲಿಲ್ಲವೇ ನೀಲಿಬಾನು?
ಪಕ್ಷವಾದರೂ ಕೊನೆಯ ಪಕ್ಷ
ಲೆಕ್ಕಕ್ಕೆ ಸಿಗದ ನಿಮಿಷಗಳು ಲಕ್ಷ?
ಅಂದುಕೊಂಡಾಗ ಅವತರಿಸಲು
ಅಮರ ಕುಲದ ಪಿಂಡಗಳಲ್ಲ
ಅದಕ್ಕೆಂದೇಽಽ
ಕಾಯುವ ನೋವು ಹೆಪ್ಪುಗಟ್ಟಿದರೂ
ಕಾಣಬಾರದಸ್ಪಷ್ಟಕ್ಕೆ ಅಳುಕಿದರೂ
ರಾಮನಿರೀಕ್ಷೆಯಲಿ
ಕಾಯಲಿಲ್ಲವೆ ಶಬರಿ ಹಣ್ಣಾದರೂ!
ನಾ ಕಾಯುವ ನಿರೀಕ್ಷೆಯೂ
ಜೀವ ಪಡೆಯುತ್ತದೆ
ರೂಪು ಅರಳುತ್ತದೆ
ಉಲ್ಲಾಸದ ಹಕ್ಕಿಯ
ರೆಕ್ಕೆಗಳು ಫಡಫಡಿಸುತ್ತವೆ
ಬಿಕ್ಕು ಬಿಕ್ಕುವ ಮಂಚದಲಿ
ಮತ್ತೆಮೆತ್ತನೆಯ ಹಾಸು ಹಾಸು
ಮುಸಿ ಮುಸಿ ನಕ್ಕು
ನನ್ನೊಳಗೆ ನಾನೇ
ಗುಣುಗುಣಿಸುತ್ತೇನೆ –
'ಇನ್ನೂ ಯಾಕ ಬರಲಿಲ್ಲಾಂವ
ಹುಬ್ಬಳ್ಳಿಯಾಂವ'?

## ವೃಕ್ಷ ಗೀತ

ಅಮ್ಮನ ಬಸಿರುಸಿಗಿದು
ಸೀಳಿಕೊಂಡು
ಸಿಡಿದು ಚಿಮ್ಮಿದ ಸಾವಿರ
ಬೀಜಗಳು
ಬಾನಬಯಲನೆ ತಿವಿದು
ನೆಲದ ಒಡಲನುಕೊರೆದು
ಜಿಗಣೆ ಪಟ್ಟಿನಲಿ ಗಟ್ಟಿಯಾಗಿ
ತಳವೂರಿ
ಸೊಂಪಾಗಿ ಸಂಪಾಗಿ
ಬೆಳೆಯದುಳಿದದ್ದು ನಾನು ಮಾತ್ರ
ಜಿನುಗಿ ಒಸರುವ ರಸದ ಕಸುವನು
ಸರಿ ಪ್ರಮಾಣದಲಿ
ನಾನು ಪಡೆಯಲಿಲ್ಲ
ತುಂಬು ಮಾಂಸದ ಮೈ ಕನಸಿನಲಿ
ಅಸ್ಥಿಪಂಜರ ಕೈಕಾಲು ಕೊಂಬೆಗಳ
ಮುಗಿಲ ವಿಸ್ತಾರಕ್ಕೆ ಹರಡಿ
ಗೊಮ್ಮಟನಾಗಿ
ಕಪ್ಪು ಕಣ್ಣೀರಿನಭಿಷೇಕಕ್ಕೆ
ಪುಲಕಗೊಂಡೆ
ಜಾಳುಜಾಳಾದ ಒಡಲ ವಸ್ತ್ರದ ತುಂಬ
ಒಳಗ ಬಿಚ್ಚುವ ಬಿಲದ ಬಿರುಕು
ಸಳಸಳನೆ ಹರಿದು ಸರಿವ
ಕಾಲದ ಬಾಲವೇರಿ
ಬಾಯಿ ತುದಿಗೆ ಬಂದಾಗ
ಒಡೆದಿತ್ತು ಹೊರಗೆ ಹಾಡಿನೊರತೆ

ಅಪಶೃತಿಯ ಸ್ವರಗಳಲಿ
ಮೂಕ ನೋವಿನ ಕಡಲ
ಹುಚ್ಚು ಮೊರೆತದಿ ಕೊಚ್ಚಿ
ಕಾಣದರಿವಿನ ದಂಡೆಗಳ
ದಾಟಿ ಹೋದೆ
ಭಗ್ನ ಕತೆಗಳ ಪ್ರಾಣಸಂಚಾರಕ್ಕೆ
ನಕ್ಷತ್ರ ಕನಸುಗಳ ತೂರಿ ಬಿಟ್ಟೆ
ಉರಿವ ಬಿಸಿಲಿಗೆ ನೆರಳ
ಕೊಡೆಯೆತ್ತಿ ಹಿಡಿಯದೆ
ನನ್ನ ನೆರಳಿಗೂ ನಾನು
ಪರದಾಡಿದೆ
ಋತು ಚಕ್ರ ಸೀಮೆಯಲಿ
ವಸಂತ ವೈಭವದ
ಉನ್ಮತ್ತ ಹೊಗರಿನಲಿ
ಹೂ ಹಕ್ಕಿ ಯಕ್ಷರ ಅಕ್ಷಯ
ಸಂಮೋದದಲಿ
ನೀರ್ಗಲ್ಲ ನಿಷ್ಠುರದ
ಕೋಟೆಯನೆ ತುಳಿದೆ
ಉತ್ಕೋಪದುಗ್ರತೆಯ
ಗ್ರೀಷ್ಮನಪ್ಪುಗೆ ಬೆಂಕಿಯೊಳಗೆ
ಬೂದಿಯಾಗದೆ ಉಳಿದು
'ನನ್ನ' ಒಳ ಬೆಂಕಿಗೊಂದಿಷ್ಟು
ಪುರುಳೆ ಸಮೆದೆ
ಬಾನೊಡೆದು ಕಡಲು ಸುರಿದು
ಬಿರಿದ ನೆಲ ಬಾಯಿಗಿಳಿದು
ತಣಿದು ತೃಪ್ತಿಯ ಹಸಿರು
ಚಿಗಿದರೂ ಒಂದು ಹನಿ
ನನ್ನೊಳಗೆ ಇಳಿಯಲಿಲ್ಲ
ಟೊಂಗೆ ಟೊಂಗೆಗೊಂದು
ಹೂವಾದರೂ ಅರಳಲಿಲ್ಲ
ಬೀಸುವ ಗಾಳಿಗೆ ನಿಟ್ಟುಸಿರಿಟ್ಟು

ಸೂಸುವ ಕಂಪಿಗೆ ಅಸೂಯೆ ಪಟ್ಟು
ನೋವಿನ ಪಲ್ಲವಿಯನೆ
ಮರ ಮರಳಿ ಹಾಡಿ ಸೋತು
ಚಿರಮೌನಿ ನಾನಾದೆ

# ಕವಿತೆ

ನೆಲದೊಳಗೆ ಕುದಿವ
ಕನಸಿನ ಬೀಜ
ಬೆಳಕು ಗಾಳಿಗೆ ನಿಸ್ಪಂದವಾಗಿ
ಪ್ರಜ್ಞೆ ಪರಿಸರದ ಇರಿತಕ್ಕೆ
ಕುರುಡಾಗಿ
ಎದ್ದೆದ್ದು ಬಡಿದು
ಬಾಗಿಲು ತಟ್ಟಿ
ಉಸ್ಸೆಂದು ಉರುಳಿ
ಮರಳಿ ಮೂಲೆ ಸೇರಿ
ಮೌನದಲಿ ತಲೆ ಚಚ್ಚಿ
ಏರಿ ಬರುವ ಆತುರದಲ್ಲಿ
ಗಂಟಲಲ್ಲೇ ಸಿಕ್ಕು
ಒಳಗೆ ಇಳಿಯಲಾರದೆ
ಹೊರಗೆ ಹೊಮ್ಮಲಾರದೆ
ಇರುವಲ್ಲೇ ಇದ್ದು ಒದ್ದಾಡಿ
ಹ್ಯಾಮರ್ ಗುದ್ದುಗಳಿಂದ
ಚಿಗಿದು ಮೇಲೆದ್ದು
ಆಕಾಶದಡಿಗೆ ತಲೆ ನಿಮಿರಿ ನಿಂತಾಗ
ಹಸಿ ಸುರಿವ
ಆಕಾರವಿಲ್ಲದಿರುವ
ಎಡ್ಡಾದಿಡ್ಡಿಯಾಗಿ
ದುರ್ಬಲವಾಗಿ
ಹೂಗಾಳಿಗೂ ಉದುರಿ
ಬೀಳುವುದು ನನ್ನ
ಕವಿತೆ ಎಂಬ ಮರ

# ಕ್ರೌಂಚ ಕ್ರಂದನ

ಜನನಿಬಿಡ ಜಗದರಣ್ಯದ
ಸದ್ದು ಗದ್ದಲದಬ್ಬರ
ಉಬ್ಬರಗಳ ನಡುವೆ
ರಭಸದಲಿ ಮುನ್ನುಗ್ಗಿ
ದುಮ್ಮಿಕ್ಕಿ ಹರಿವ
ಜೀವ ಪ್ರಪಾತದ
ಭೋರ್ಗರೆವ ಮೊರೆತ
ದನುರಣನದೊಳಗೆ
ದೂರ ಮೂಲೆಯಲೆಲ್ಲೊ
ಮರದ ಕೊಂಬೆಯ ಮೇಲೆ
ರೆಕ್ಕೆ ಬಿಡಿಸಿ
ಫಡಫಡಿಸಿ
ಬಂಡೆಯೆದೆಗಳ ಸೀಳಿ
ಧುಮ್ಮಿಕ್ಕಿದೆ ಚೀತ್ಕಾರ ಜಲಪಾತ
ಕ್ರೌಂಚ ಕೊರಳೊಳಗಿಂದ
ದೈತ್ಯನೆರಳನೆ ಸುರಿದು
ಭೀತಿ ತಲ್ಲಣ ಸಿಡಿದು
ಕಗ್ಗತ್ತಲೆಯ ಹಂದರ ಹಬ್ಬಿ
ಮುಗಿಲನ್ನೇ ಮೂಗು ಹಿಡಿದು
ಎಳೆದು ತಂದು
ಕೆದರಿದೆಲೆ ತಲೆಗೆ ಕೊಡೆಯಾಗಿ
ಹಿಡಿದು ಬೆತ್ತಲೆಯಾದ
ಭೂಮ ಮರಗಳು
ಕೈಗೆ ಕೈ ಹಿಡಿದು
ಸುತ್ತಲೂ ಕೋಟೆ ಗಟ್ಟಿ
ಬೆಳಕು ಗಾಳಿ ಪ್ರವೇಶಕ್ಕೆ ನಿಷೇಧಿಸಿ ಕಾವಲು ನಿಂತ

ನಿಷಾದ ಪಡೆಗಳ ನಿರಾತಂಕ
ಓಡಾಟ
ನಿಮಿಷ ನಿಮಿಷದ ಬದುಕು
ಸೋಲುಗೆಲುವಿನ ಕಣ್ಣು ಮುಚ್ಚಾಲೆಯಾಟ
ಸಾವು ಹದ್ದುಗಳ
ಚಕ್ರಾರ ಸುಳಿಯೊಳಗೆ
ಸಿಕ್ಕ ಕ್ರೌಂಚಗಳೆದೆಯ
ಮಿಡಿತದ ಸದ್ದು
ಮಂಜು ಬೆಟ್ಟಗಳನ್ನು
ಕರಗಿ ಹೊನಲಾಗಿಸಿತು
ಗೂಡೊಳಗೆ ಮರಿ ಹಕ್ಕಿ
ಮರೆಯಲ್ಲಿ ಮುದಿ ಹಕ್ಕಿ
ಸನಿಹದಲಿ ಸಂಗಾತಿ
ನಡುವೆ ತುಡಿಯಿತು
ತಾಯಿ, ಪ್ರೇಯಸಿ ಜೀವ

ನೋವು ನರಳಿನ ಸರಳು
ಹೊತ್ತು ತಂದಿತ್ತು
ಸಾವಿನಾ ಸಂದೇಶ
ರಕುತ ಚಿಮ್ಮಿತು
ರೆಕ್ಕೆ ಹರಿಯಿತು
ಜೀವ ಏರಿತು ಬಾನಿಗೆ
ವೇದನೆಯ ಚೀರ್‌ದನಿಗೆ
ಜೀವವೊಂದೂ ಮಿಡುಕಲಿಲ್ಲ.
ವಾಲ್ಮೀಕಿಯೊಬ್ಬನೂ
ಬದುಕಿ ಬರಲಿಲ್ಲ
ಒಂದು ಕ್ರೌಂಚದ ಕೂಗು
ಒಂದು ರಾಮಾಯಣಕೆ
ನಾಂದಿಯಾಯಿತು ಅಂದು
ಇಂದು ಕೊನೆಯಿಲ್ಲ
ಕ್ರೌಂಚಗಳ ಆಕ್ರಂದನಕ್ಕೆ
ಹೆಜ್ಜೆ ಹೆಜ್ಜೆಗೂ ಎದುರಾಗುವ
ನಿಷಾದರ ಲೆಕ್ಕಕ್ಕೆ ಎಲ್ಲೆಯಿಲ್ಲ

# ಕನಸುಗಳು

ಗೊತ್ತಿದೆ ನನಗೆ
ಕನಸುಗಳು ವಾಸ್ತವಗಳಲ್ಲ
ಆದರೂ ಪ್ರೀತಿಸುತ್ತೇನೆ
ಕನಸುಗಳನ್ನು
ಏಕೆಂದರೆ ಬದುಕಿನ
ಸಹನೀಯತೆಗೆ
ಕನಸುಗಳು
ಅವಾಸ್ತವ ನಂಬಿಕೆಗಳೂ
ಬೇಕಾಗುತ್ತವೆ
ನಿರ್ಜನ ನೀರವ ರಾತ್ರಿಗಳಲ್ಲಿ
ವಿರಹದುರಿ ಬೇಗೆಯಲ್ಲಿ
ನನ್ನ ಕನಸುಗಳೇ ನನಗೆ
ಶೀತಲ ಚಂದನ ಸ್ಪರ್ಷ
ಪಯಣದೇಕಾಕಿತನದಲ್ಲಿ
ಬೇಸರವ ಬಿಡಿಸಿ
ಉತ್ಸಾಹ ತುಂಬುವ
ನನ್ನಾತ್ಮ ಸಂಗಾತಿಗಳೇ
ನನ್ನ ಕನಸುಗಳು
ಶೂನ್ಯಮನದಾಕಾಶದಲ್ಲಿ
ಹೊಳೆ ಹೊಳೆದು
ಬೆಳಕು ಚೆಲ್ಲುವ ನಕ್ಷತ್ರದೀಪಗಳೆ
ನನ್ನ ಕನಸುಗಳು
ಸಮಸ್ಯೆಯ ಕಾಡುಗಳಲ್ಲಿ
ಕರಗಿ ಕಳೆದು ಹೋಗುವ
ಭೀತಿಯಲ್ಲಿ ಬದುಕುವ

ಭರವಸೆಗಳೇ
ನನ್ನ ಕನಸುಗಳು
ರಾತ್ರಿಯ ತೋಟದಲ್ಲಿ
ಅರಳುವ ಹೂವುಗಳು
ನೋವಿನೆದೆಯಿಂದ
ಹೊಮ್ಮುವ ಗೀತಗಳು
ಉದ್ವಿಗ್ನ ಚಿತ್ತವನು
ತಟ್ಟಿ ಜೋಗುಳ ಹಾಡಿ
ಮಮತೆಯಲಿ ಮಲಗಿಸುವ
ಕಾಮಧೇನುಗಳು
ನನ್ನ ಕನಸುಗಳು

# ಮಿಲನೋತ್ಸವ

ಏಳು ಹುಡುಗಿ ಏಳು
ಎದ್ದೊಮ್ಮೆ ಒದ್ದು ನಿದ್ದೆಯನು
ಕನ್ನಡಿಯಲಿ ಮುಖವ ನೋಡಿಕೊ
ಇಂದು ಎಂದಿನಂತಲ್ಲ
ಎಚ್ಚರದಲಿ ಅಚ್ಚು ಕಟ್ಟಾಗಿ
ಸಜ್ಜಾಗು ಸಿಂಗಾರವಾಗು
ಬೆಂದದ್ದು ಸಾಕು
ಬಂದವನ ಸಂಭ್ರಮದಿ
ಸ್ವಾಗತಿಸು ಬಾ ಹುಡುಗಿ

ಕಪ್ಪು ಕೂದಲ ಮುಡಿಗೆ
ಏರಿಸು ನಕ್ಷತ್ರ ಮಲ್ಲಿಗೆ ದಂಡೆ
ಹೊಳೆವ ಕಂಗಳಿಗೆ
ಕನಸು ಕಾಡಿಗೆ ಹಚ್ಚು
ಕಾರ್ಮೋಡಗಳ ಸರಿಸಿ
ಮೊಗದಲ್ಲಿ ಅರಳಿಸು
ನಗೆಯ ಬೆಳ್ದಿಂಗಳನ್ನು
ಮಿಡಿದು ಮನಸಿನ ವೀಣೆ
ಮಿಲನಗೀತವ ಹಾಡು ಜಾಣೆ

ಬಂದಾಗ ಮೊಗದಿರುಹಿ
ನಾಚಬೇಡ
ಹೇಳಬೇಕೆಂದುದನು
ಹೇಳಿ ಬಿಡು ಬೇಗ
ಕ್ಷಣ ಕ್ಷಣವೂ ಈಗ

ವಸಂತ ಗೀತಗಳ ಮೇಳ
ಗೆಜ್ಜೆ ಉಲಿದಿದೆ
ತಪ್ಪದಲೆಗಳ ತಾಳ
ಸೂರ್ಯ ಕೆಂಪನು ಹಾಸು
ಉಸಿರ ಧೂಪವ ಹಚ್ಚು
ಕೆಂದುಟಿಯ ಕಮಲಗಳ
ಬಟ್ಟಲಲಿ ಮಧುವಿಟ್ಟು
ಮಂದಹಾಸದ ಮಿಂಚು
ತೋರಣವ ಕಟ್ಟು
ಯುಗಯುಗದ ಶಾಪಗಳು
ನಿಟ್ಟುಸಿರ ತಾಪಗಳು
ಮುಗಿವುದಿಂದಿಗೆ ಹೆಣ್ಣೆ
ಮಿಲನದುತ್ಸವ ಗುಲ್ಲು
ನೆಲಬಾನಿನೊಳಗೆಲ್ಲ
ರಮ್ಯರಾಸದ ಸೊಲ್ಲು
ಮೂಡಿನಿಂತಿದೆ ನೋಡು
ನಗೆಯಕಾಮನ ಬಿಲ್ಲು

## ತೆರೆದ ಬೀದಿ

ನಿರಾತಂಕ ಮೈ ಚಾಚಿ ಮಲಗಿದೆ ಬೀದಿ
ಗೋಡೆ ಗವಾಕ್ಷ ಕಿಟಕಿಗಳೊಂದೂ ಇಲ್ಲ
ಮಳೆ ಬಿಸಿಲು ಹಿಮಕ್ಕೆ ತೆರೆದು ಕೊಂಡಿದ್ದರೂ
ಮರುಗುವುದಿಲ್ಲ ಸೊರಗುವುದಿಲ್ಲ

ಅಜ್ಜ ಮುತ್ತಜ್ಜ ಮುತ್ತಜ್ಜಗೂ ಅಜ್ಜ
ಎಲ್ಲರೂ ನಡೆ ನಡೆದು ಸಾಗಿದರು
ನೂರೆಂಟು ಕಥೆಗಳನು ವ್ಯಥೆಗಳನು
ಹಾಡಿದರು ಹಂಚಿದರು ಸವಿಗಳನು

ಕನ್ನೆ ಪ್ರಾಯಕ್ಕೆ ತೆರೆಯ ಸುಕ್ಕುಗಳಿಲ್ಲ
ಎದೆಯ ಮೇಲೆ ಮೂಡುವ ಹೆಜ್ಜೆ ಚಿತ್ತಾರಗಳು
ಮೂಡು ಮೂಡುತ್ತಲೇ ಮರೆಯಾಗುತ್ತವೆ
ಹೊಸ ಹೊಸದು ಮೂಡಿದರೂ ಉಳಿಯುತ್ತವೆ
ಒಂದಷ್ಟು ಹಳತು

ತುದಿ ಮೊದಲು ಕಾಣದ ಬೀದಿಯಲಿ
ದಿನ ನಿತ್ಯ ನೂರೆಂಟು ಮದುವೆದಿಬ್ಬಣ ಸಾಲು
ನಡು ನಡುವೆ ಹೆಣಯಾತ್ರೆ ಉರಿವ ಹಿಲಾಲು
ಸಾವು ಸಂಭ್ರಮದಲ್ಲೂ ನಿರ್ಲಿಪ್ತ ರಿಕ್ತ

ತೆರೆದ ಬೀದಿಯೊಳಗೂ ಒಂದು ಬೀದಿಯುಂಟು
ಬೀದಿ ಬೀದಿಗಳಿಗೆ ಮರಿಯಿಟ್ಟು
ಕಿರು ಬೀದಿ ಕವಲು ಬೀದಿ ಕಳ್ಳ ಬೀದಿ ಸಂತಾನ
ಯಾರ ಬಸುರಿಗೆ ಬಂದುದೋ ಬಂದುದಷ್ಟೇ ಗೊತ್ತು

ಬೀದಿಯಂಚಿನಲಿ ಕುಳಿತ ಮುದುಕ
ಕನಸ ಪುಟಗಳ ಬಿಡಿಸಿ ಕಾಣುತ್ತಾನೆ
ಅತ್ತವರು ನಕ್ಕವರು ಬಿದ್ದವರು
ಸತ್ತವರು ಸಾವವರು – ಮುಖವಾಡಗಳು ಕೆದರುತ್ತವೆ

ದಣಿದ ಕಣ್ಣಿನ ಮಸುಕು ಪೊರೆಯಾಚೆ
ಮಿಂಚು ಬೆಳಕಲ್ಲಿ ನೆನಪುಗಳು ಬಿಚ್ಚುತ್ತವೆ
ಗತಿಸಿದ್ದು ಗಸ್ತುಹೊಡೆದು ನುಡಿಯುತ್ತವೆ
ಒದ್ದೆಯಾರದ ಕೆಂಪು ಮಾಯದ ಕತೆಗಳನೆಲ್ಲ

ಹಾಡೆ ಹಗಲೇ ಇಲ್ಲಿ ಮಂದಿಸಂತೆ ನಡುವೆ
ಬೆತ್ತಲಾಗಿಸಿ ಕೊಂದವರಿಗೆ ಸಂಜೆ ಸನ್ಮಾನ
ದಿನ ಪತ್ರಿಕೆಯ ತುಂಬ ಅಭಿನಂದನೆ
ಹಿತ್ತಲಲಿ ಹೂತಿಟ್ಟ ಹೆಣದ ಗೋರಿಯ ಮೇಲೊಂದು ಬೃಂದಾವನ

ಸೀತೆ ಸಾವಿತ್ರಿ ಸಂತಾನವು ಕಪ್ಪು ಗುಲಾಬಿಗಳಾಗಿದ್ದು
ನಾಲ್ಕು ಸಾವಿರ ಮಠದ ಸ್ವಾಮಿಗಳು ಸದ್ಗೃಹಸ್ತರಾದದ್ದು
ಕಪ್ಪು ಕೂಟಗಳು ಬೇರು ಬಿಟ್ಟು ಆಳಕ್ಕೆ ಇಳಿದದ್ದು
ಚುನಾವಣೆಯ ಘೋಷಣೆಗಳಲ್ಲಿ ಭರವಸೆಗಳರಳಿದ್ದು
– ಈ ಬೀದಿ ಬದುಕಿನ ಭಾವ ತಂತುಗಳು

ನಿತ್ಯಶೂಲಕ್ಕೇರುವ ಕ್ರಿಸ್ತರ ಹೆಣಗಳ ನಡುವೆ
ಜೀವ ಗಂಗೆಯ ತರಲು ಹೊರಟ ಭಗೀರಥ
ರಾಕ್ಷಸರ ರಸಕವಳವಾಗಿ ಬಿದ್ದ ಅಸ್ಥಿ ಪಂಜರಗಳಿಗೆ
ಅಮೃತ ತರಲು ಹೊರಟ ಗರುಡನೂ ಕುರುಡಾದ

ಈ ಬೀದಿಯ ಬತ್ತಲು ಎದೆಯಲ್ಲಿ
ಖನನವಾದಷ್ಟೂ ಚೆಲ್ಲುತ್ತವೆ ಹೊರಗೆ
ಗುಟ್ಟುಗಳು ಭೂಗತವಾಗಿ ಹೋದ
ಲೆಕ್ಕವಿಲ್ಲದ ಮಂದಿಯ ರೋಚಕ ಇತಿಹಾಸಗಳು

## ಗ್ರೀಷ್ಮ ಗೀತ

ಗ್ರೀಷ್ಮದ ಬಿಸಿಲು ಬಿಸಿಲಲ್ಲ ಬೆಂಕಿ
ಸ್ತಬ್ಧ ನೀರವ ಮೌನ ಚೇತನ
ಕೆಂಡ ಕಾರುವ ಮುಗಿಲು
ಬವಳಿ ಬರಿಸುವ ಧಗೆಯ ಹೊನಲು

ಬತ್ತಿ ಬೆತ್ತಲೆಯಾಗಿ ನಿಂತ ಮರ ಸಾಲು
ನೆರಳ ಹಂಬಲಿಸಿ ಸೋತ ಕೈ ಕಾಲು
ಕಣ್ಣು ಚಾಚಿದಲ್ಲೆಲ್ಲ ಕ್ಷಾಮ ನಕ್ಷೆ
ಹಾರೈಸಿ ಅರಸಿದರು ಸಿಗಲಿಲ್ಲ ಹಸಿರುದ್ವೀಪ

ದಟ್ಟ ಹೊಗೆ ಮೋಡಗಳ
ಬಂದೀ ಖಾನೆಯೊಳಗೆ ನಿಶ್ಚೇಷ್ಟ ಮನಸು
ದೂರವಾಯಿತು ಎಂದೋ ಬಿಡುಗಡೆಯ ಕನಸು
ಕ್ರೌರ್ಯದೆದೆಯೊಳಗಿಂದ ಎಂದಾದರೂ
ಹರಿದೀತೆ ಕರುಣೆಸೆಲೆ? –
ಬಾನುಲಿಯು ನುಡಿದಿತ್ತು

ಪಂಚಾಗ್ನಿ ಪರಿಧಿಯಲಿ
ಚಡಪಡಿಕೆ ಮಂಚದಲಿ
ಪ್ರಪಾತದಂಚಿನಲಿದ್ದು
ಉಸಿರ ಕೊಂಡಿಗೆ ಜೋತುಬಿದ್ದು
ನಾಳೆ ಬರುವ ಮಳೆಯ ಮಾಂತ್ರಿಕನ
ನಿರೀಕ್ಷೆಯಲ್ಲಿ ಸುಟ್ಟು ಸಾಯದೆ
ಕಣ್ಣು ಕಾಯಾಗಿಸಿ ಕಾದಿದ್ದೇನೆ

ಸುಡುವ ಬೆಂಕಿ ಬೂದಿಯಲ್ಲೂ
ಜೀವಕಣಗಳು ಮೊಳೆತು ಅರಳುವಂತೆ
ಸಾವಿನಂತರಂಗದಲ್ಲೂ ಹುಟ್ಟಿನಂಕುರದಂತೆ
ಗ್ರೀಷ್ಮದೆದೆಯಲ್ಲಿ ಅವತರಿಸುವ
ವಸಂತನಿಗೆ ಒಲಿದು ಹಾಡುತ್ತೇನೆ

# ನನ್ನ ಮಹಲಿನೆಡೆಗೆ

ನನ್ನದು ನಾನೇ ಬಿಟ್ಟು ಬಂದ
ನನ್ನ ಮಹಲನ್ನು ಹುಡುಕ ಹೊರಟಿದ್ದೇನೆ
ಭೂತ ಕನ್ನಡಿಗಳ ಕಣ್ಣೊಳಗೆ ಬಿಗಿದು
ಬಿಟ್ಟು ಬಂದ ಬೀದಿಗಳ ನೆನಪು
ಗುರುತುಗಳ ಬೆನ್ನೇರಿ
ಸುಳಿದ ಹಾದಿಗಳನ್ನೇ ತುಳಿಯುತ್ತ
ಸಮೆಸಿದರೂ ಕಾಣಲಿಲ್ಲ ಮಹಲು

ದಿಕ್ಕು ತಪ್ಪಿಸುವ ಚಕ್ರಬಂಧದ ಕಾಡೊಳಗೆ
ಗುಕ್ಕು ಹಿಡಿದು ಅವಿತಿರಬೇಕು
ಮಹಲಿನಂಗಳದ ತುಂಬೆಲ್ಲ
ಬಿರಿದ ಮಂದಾರ ನಂದನ ಸಾಲು
ಗಮ್ಮೆಂದು ಬೀಸುವ ಗಂಧ ಗಾಳಿ
ಕೊಬ್ಬಿ ಚಾಚಿದ್ದ ಕೊಂಬೆ ಕೊರಳುಗಳಲ್ಲಿ
ಜೇನುಗಾನದ ಸೋನೆ
ಮರಗಳುಡಿತುಂಬ
ತೊಟ್ಟಿಕ್ಕಿ ತೊನೆವ ಗೊಂಚಲು ಹಣ್ಣು'

ಮೈಲಿ ಮೈಲಿಯ ದೂರ ಸಾಗಿದರು
ಸೆರೆ ಹಿಡಿವ ಗಂಧ ಗಂಧರ್ವೆಯರೆಲ್ಲ
ಯಾರ ಸೆರೆಯೊಳಗೋ ಭಗ್ನಬಿಂಬ
ರಾಮು – ಸೋಮ – ಪಮ್ಮಿಯರೊಡನೆ ಆಡಿದ್ದ
ಮರಕೋತಿಯಾಟ – ಮದುವೆಯಾಟ
ರತ್ತೋ ರತ್ತೋ ರಾಯನ ಮಗಳೆ'
ಸುತ್ತೋಲೆಯಾಟ ನೂರೆಂಟು
ನೆರಳ ಚಿತ್ರಗಳರಳಿ ಹಿಡಿವ ಬಯಕೆ

ಅರಸಿ ಹೊರಟಿದ್ದ ಮಹಲನೇ ಮರೆತೆ
ಜೊಂಪು ಕಣ್ಣುಗಳೆದುರು ನೆನಪು ಸುರುಳಿ
ಬಿಂಬಗಳು ಒಂದೊಂದು ರಾಸವಾಡಿದವು
ಸೂರ ತುಂಬೆಲ್ಲ ಚಾಚಿದ ನಕ್ಷತ್ರ ಚಿತ್ರಪಟ
ಕಿಟಕಿ ಕಿಟಕಿಯಲ್ಲೊಂದು ಚಂದ್ರ ದೀಪ
ಗೋಡೆಗಳ ಮೈಯಲ್ಲಿ ರತ್ನ ಹವಳದ ಬಳ್ಳಿ
ನಗುವ ಕಣ್ಣಿನ ತುಂಬ ನಭದ ವಿಸ್ತಾರ

ಹಾದಿ ಇಕ್ಕೆಲದಲ್ಲಿ ಭಾವೆಯರ ಭಾಮೆಯರ
ನಲಿವ ನೂಪುರದ ಝುಣಕು ಝುಣಕು
ರೆಕ್ಕೆ ರಾಣಿಯರಿಂದ ಗಂಧರ್ವ ಗೀತ ಗೋಷ್ಠಿ
ಮಧುಪಾನ ಮಧುರ ತಾನದ ಸವಿಗೆ
ಉನ್ಮತ್ತ ಚಿತ್ತ ನೆಲದ ಸೋಂಕನು ಮರೆತು
ಸ್ವರ್ಗದಾಚೆಯ ಸ್ವರ್ಗಕನಸಿನಲಿ ಜೀಕಿತ್ತು
ನೆನಪು ಸರಿದಂತೆ ನೂರು ಕಂಪನ ಸ್ಫೋಟ
ಭೀತಿ ಭೂತದ ಇರಿತ ಪಿಶಾಚಿ ಕುಣಿತ
ನೆರಳ ಹೆಜ್ಜೆಗಳಲ್ಲೇ ಹುಡುಕಬೇಕು
ನಾ ಬಿಟ್ಟು ಬಂದ ಮಹಲನ್ನು ತಲುಪಬೇಕು
ಛಲದ ಕುದುರೆಯನೇರಿ ಬಾನು ಬೆಟ್ಟಗಳಿಳಿದು
ಕಡಲು ಕಾಲುವೆಯೀಸಿ ಕಂದರಗಳ ದಾಟಿ
ಕಾಡುಗಳ ಕಡಿದು ನಡೆದಾಡಿ ಸುಳಿದಾಡಿ
ಒಳಹೊರಗೆ ನಾ ಬಿಟ್ಟ ನನ್ನ ಪಳಿಯುಳಿಕೆಗಳ
ದುರ್ಬೀನು ದೃಷ್ಟಿಯಲಿ ತಡಕಾಡಿದರೂ
ನನ್ನ ಗುರುತೂ ಇಲ್ಲ ಯಾರ ಪರಿಚಯವಿಲ್ಲ
ಮಹಲು ತಲುಪುವ ಹಾದಿ ಚಕ್ರಬಂಧ
ಕೊನೆಯಿಲ್ಲ ಮೊದಲಿಲ್ಲ ಬಾಗಿಲುಗಳೇ ಇಲ್ಲ
ಬೆಂಕಿ ತುಳಿದ ಬೆಕ್ಕಿನಂತೆ ವಿಲಿವಿಲಿಸಿ
ಅಲ್ಲಿಲ್ಲ ಇಲ್ಲಿಲ್ಲ ಎಲ್ಲಿಯೂ ಇರಲಾಗದ
ಅಂತರ್ಪಿಶಾಚಿಯಾಗಿ ಅಂಡಲೆಯುತ್ತಲೇ
ಇದ್ದೇನೆ – ಇರುತ್ತೇನೆ
ಮಹಲು ತಲುಪುವ ಗುರಿಯ
ಭರವಸೆಯೊಳಗೇ ಬದುಕುತ್ತೇನೆ

## ಒಂದು ಸಂಜೆ

ಸೊರಗಿದ ನೆರಳು ನಾಟಕ ಮುಖವಾಡಗಳು
ಬಸ್ಸು ಲಾರಿ ರಿಕ್ಷಾಗಳೊಂದಿಗೆ ಸ್ಪರ್ಧೆಯೋಟ
ಹಗಲಿಂದ ಉರಿದು ಕೆಂಪಗೂದಿದ ಸೂರ್ಯ
ಮಡದಿ ಮಕ್ಕಳ ನೆನೆದು ಮೆಲ್ಲನಿಳಿದು ನಡೆದ
ಕ್ಯಾಮೆಲ್ ಪೈಂಟ್ ಚೆಲ್ಲಿದ ಆಕಾಶದ ತುಂಬೆಲ್ಲ
ಒಡೆದ ಮಸಿ ಕುಡಿಕೆಯ ಬಣ್ಣ ಸಾರಣೆ
ಉಡಿದು ಚೆಲ್ಲಿದ ನಕ್ಷತ್ರ ಮಲ್ಲಿಗೆ ದಿಂಡು
ದೂರದಲಿ ಇಣುಕುವ ತೊನ್ನು ಹತ್ತಿದ ಚಂದ್ರ
ಹಾದಿ ಇಕ್ಕೆಲದಲ್ಲಿ ಅನಾಥಶವ ಜಾತ್ರೆ
ನಾಳೆ ಚಿಂತೆಗಳಲ್ಲಿ ದಣಿದ ಕಣ್ಣ ರೆಪ್ಪೆಗಳು
ನಿದ್ದೆ ಮುದ್ದಿನ ಮಂತ್ರಕ್ಕೆ ಹಾಯೆನಿಸಿವೆ
ನಿಸ್ಪಂದ ಜಗದೊಳಗೆ ಮಿಡಿಯುತಿದೆ ಮನವೊಂದು
ಕಾಡುವ ಹಗಲುಗಳಿರದೆ ಬೇಡುತಿದೆ ಮುದ ನೀಡುವ
ರಾತ್ರಿಗಳೆ ಇರಲೆಂದು

# ನಿರೀಕ್ಷೆಯಲ್ಲಿ

ದಿನದಿನವೂ ಕಾದು ಸೋತಿದ್ದೇನೆ
ಸೊರಗಿ ಬಾಡಿ ಹೋಗಿದ್ದೇನೆ ಪ್ರಿಯಾ
ಕಾದ ಕಣ್ಣುಗಳು ಕಾವು ತುಂಬಿ ಬೆಂಕಿಯಾದರೂ
ಬರಲಿಲ್ಲ ನೀನು – ನಿನ್ನುತ್ತರವನ್ನೂ ತರಲಿಲ್ಲ
ಗಿಳಿಯೋ ಗೊರವಂಕವೋ ಹಂಸವೊ
ಸುದ್ದಿಯಿನಿತಾದರೂ ತರಬಾರದಿತ್ತೇ
ಆ ಯಕ್ಷನೆಷ್ಟೋ ವಾಸಿ
ಕಳಸಿ ಕೊಟ್ಟ ಓಡುವ ಮೋಡವನ್ನೇ
ಹಿಡಿದು ಬರೆದಟ್ಟಿ ಸಂದೇಶ ಕಳಿಸಿಕೊಟ್ಟ

ನಿನ್ನುಪೇಕ್ಷೆಯ ಮರೆತೂ ನಿನಗಾಗಿ ಕಾದಿದ್ದೇನೆ
ಇಂದಲ್ಲ ನಾಳೆಯಲ್ಲ – ಎಂದಾದರೂ ಬರುವೆಯೆಂದೇ
ನಂಬಿ ಯುಗ ಯುಗಳಾದರೂ ಕಾಯುತ್ತೇನೆ
ಮೌನ ಕಲ್ಪನೆಯಲ್ಲಿ ನಿನ್ನ ರೂಪ ಬಿಡಿಸುತ್ತೇನೆ
ದುಂಬಿ ಝೇಂಕಾರದಲಿ ನಿನ್ನುಲಿಯನಾಲಿಸುತ್ತೇನೆ

ಆತ್ಮಗಳು ಒಂದೆಂದು ಎಷ್ಟು ದಿನ ನಂಬಿರಲಿ
ನೀ ಕೊಡುವ ವಿವರಗಳ ಕೇಳುತಿರಲಿ
ಮಾತಿಗಿಂತಲೂ ನಿನ್ನಾತ್ಮವನೆ ಕಳಿಸಕೊಡು
ನನ್ನಾತ್ಮ ಸಂಗಾತ ಸುತ್ತಿ ಬರಲಿ
ಬನ ಬನದ ಸಿರಿಯೆಲ್ಲ ನೋಡಿ ಬರಲಿ
ಮುಗಿಲೇರಿ ಕಾಮನ ಬಿಲ್ಲುಗಳ ಕಿತ್ತು ತರಲಿ
ನೆನೆಪು ಕಾಡಲು ಓಡಿ ಬರುವೆನೀನೆಂದಿದ್ದೆ
ಚಿಕ್ಕೆ ಚಂದ್ರರು ನನ್ನಂಗಳದಿ ಅರಳುವರೆಂದಿದ್ದೆ
ಮಂದ ಗಾಳಿಯ ನಿಲಿಸಿ ಮತ್ತೊಮ್ಮೆ ಕೇಳಿದ್ದೆ

ನಿನ್ನ ನನ್ನ ನಡುವಿನ ಪ್ರತಿಜ್ಞೆಗಳ ತಿಳಿಸಿದ್ದೆ
ಜೊತೆಗೊಟ್ಟು ಕಳಿಸಿದ್ದೆ ನನ್ನಧರ ಕೆಂಪು
ನನ್ನೆದೆಯ ತುಂಬಿರುವ ನಿನ್ನ ಪ್ರೀತಿಯ ತಂಪು
ಬತ್ತಿ ಬಂಜರಾಗಲಿದೆ ಬದುಕು ಬಾ ಬೇಗ
ಮೂಡಲಿದೆ ಪ್ರಣಯದಲಿ ಬಿರುಕು ಈಗ
ಪ್ರೀತಿ ಸಿಂಚನದಿಂದ ಜೀವಕೊನರಿಸು ಇನಿಯ
ಭೀಕರದ ಮೌನದಲಿ ಇಂಚರಿಸು ಸವಿದನಿಯ

# ನಮ್ಮೊಳಗಿನವನಾರು?

ಯಾರಿವನು ನಮ್ಮೊಳಗೆ ಕುಡಿಯಾಡುವವನು
ಹೆಡೆಯಾಡುವವನು?
ತುಂಟ ಪೋರನಿವನು ತಂಟೆಕೋರನು
ಇದ್ದು ಇಲ್ಲದಂತೆ ಎಲ್ಲೋ ಮಂಗ ಮಾಯ
ಬರಲು ಜೊತೆಗೇ ಬಂದು
ನಮ್ಮೆದೆಯ ಮುಗಿಲನ್ನೇ
ತುಂಬಿ ಬಿಡುವನು
ಸಾಗುವ ಜೀವನದಿ
ಕೊನರುವ ಮರಗಿಡ
ನಕ್ಕು ನಲಿವ ಚಿಕ್ಕೆಗಳು
ಹಾಡುವ ಹಕ್ಕಿಗಳು
ಇವನ ನೋಟ ಬೇಟಕೆ ಗ್ರಾಸ
ಸಳಸಳನೆ ಹರಿದಿಳಿವ ಹಾವಿನಂತೆ
ಒಳಸೇರಿ ಹೃದಯಗಳ ಬರಿದು ಮಾಡಿ
ಕಿಚ್ಚೆಸೆದು ಕುಕಿಲಿರಿದು ನಿಲ್ಲುತ್ತಾನೆ

ಶೈಶವದ ಅಜ್ಞತೆಯಲ್ಲಿ ಬಾಲ್ಯದ ಮುಗ್ಧತೆಯಲ್ಲಿ
ತಲೆ ಮರೆಸಿಕೊಂಡೇ ಚಿಗುರುತ್ತಾನೆ
ಮೊಳಕೆಯಿಟ್ಟು ಮೊಗ್ಗಾಗುತ್ತಾನೆ
ಮೊಗ್ಗೊಡೆದು ಅರಳಿ ಹಿಗ್ಗುತ್ತಾನೆ
ಪ್ರಾಯದಲ್ಲಿ ಹೊಚ್ಚು ಹೊಳೆಯಾಗಿ
ಕನಸು ಕುದುರೆಗಳ ಏರಿಸುತ್ತಾನೆ
"ಮಾದಕ ಗಂಧಗಾಳಿ ಬೀಸಿ
ಬೀಸಿದಲ್ಲಿ ಬಯಕೆಗಳ ಬಡಿದೆಬ್ಬಿಸಿ"
"ಎದೆಯೊಳಗೆ ನೋವಿನಲೆ ಬೀಸು
ಅರಕೆಗಳ ಆಸರೆಯಲ್ಲಿ ನೆಮ್ಮದ ಬದುಕು"

ಹಲವು ಹೆಸರಿನ ಹುಡುಗ
ಇದ್ದು ಇಲ್ಲದಂತೆ ಎಲ್ಲೆಲ್ಲೂ
ಅಣು ರೇಣು ತೃಣ ಕಾಷ್ಠದಲ್ಲೆಲ್ಲ ತುಂಬಿ
ಗದ್ದಲವೆಬ್ಬಿಸಿ ಗಲಿಬಿಲಿ ಗೊಳಿಸಿ
ಬಾನು ಭೂಮಿಯ ನಡುವೆ
ಜೀಕಾಡುವ ಇವನ ಆಟ ಪಾಠದ ಗುಟ್ಟು
ಅರ್ಥವಾಗದ ಪ್ರಶ್ನೆಯಾಗಿ ನಿಲ್ಲುತ್ತದೆ
ಬಾನಿನೆತ್ತರ ನಿಲುವು ಕಡಲಿನಾಳದಂತರಂಗ
ನುಡಿಸುವನು ಜೀವಜೀವದೆದೆಗಳಲಿ
ಭಾವ ಮೃದಂಗ
ಸ್ಪೃಶ್ಯಕೆ ಸಿಗದವ ಗಮ್ಯಕೆ ಬರದವ
ಒಮ್ಮೊಮ್ಮೆ ಪ್ರಭಂಜನವಾಗಿ ಬೀಸಿ
ನೆಮ್ಮದಿಯ ಕೊರಲಿರಿದು ಕೊಲ್ಲುತ್ತಾನೆ
ತಾಗಿದರೆ ಬಾನ ನುಡಿಸಿದರೆ ಪುಂಗಿ
ಜಗವೆ ತೂಗುತ ಹೆಡೆಯನಾಡಿಸುವನು

ಹೂವಾಗಿ ಮುಳ್ಳಾಗಿ ಶರವಾಗಿ ವರವಾಗಿ
ಕಣ್ಣಾಗಿ ಮಣ್ಣಾಗಿ ಕೈಗೆ ಬಾರದ ಕಾಮರೂಪಿಯಾಗಿ
ಹೊಂಚು ಮಾಡಿ ಸಂಚು ಮಾಡಿ
ಪ್ರೀತಿ ಪ್ರೇಮ ಪ್ರಣಯ ತ್ಯಾಗಗಳ ಹೆಸರಿನಲಿ
ಹಾವಳಿ ಮಾಡಿ
ಸಾವಿರ ಸಮರ ದೀಪಾವಳಿಗಳಿಗೆ
ದಾರಿ ಮಾಡುತ್ತಾನೆ
ಪ್ರಳಯ ಪಲ್ಲವದಲ್ಲೂ ಉಳಿದು
ಮೃದ್ವಸ್ಥಿ ಹೃದಯದಾಳದೊಳಗಿಳಿದು
ಬಲವೂರಿ 'ತಳವೂರಿ ಒಳಗಿಂದೊಳಗೇ
ಟೊಳ್ಳು ಮಾಡಿ ತಾ ಬಲಿತು ಬೆಳೆದು
ತನ್ನ ಸಾಹಸ ಕತೆಯ ಫೈಲುಗಳ
ಪ್ರೇತ ಸಾಕ್ಷಿಯಲಿ ಮುಂದುವರೆಯುವ
ನಮ್ಮೊಳಗಿನವಾರು
ಇವನಾರು? – ಚೀರುತ್ತದೆ ಮನಸು
ಒಡೆದು ಸಿಡಿಯುತ್ತದೆ ಕನಸು

# ನೆಹರು ಎಂದರೆ ಭಾರತ

ಕಾಶ್ಮೀರದಿಂದ ಕನ್ಯಾಕುಮಾರಿಯ
ವರೆಗೆ ಹರಿವ ಚೇತನದ
ಎಲ್ಲೆಗಳ ಗುರುತಿಸುವ ಕೆಲಸ
ನಡೆಯುವುದು ನಿರಂತರ
ಉದ್ದಂಡ ದಂಡ ಬಾಹುಗಳು
ಚಾಚಿದರೆ ಹಿಮಾಚಲ ಕಾಂಚನ ಗಂಗಾ
ಕುಬ್ಜವಾಗುತ್ತವೆ.

ಕಣ್ಣುಗಳಲ್ಲಿ ಮೂಡಿದ
ಸೂರ್ಯಚಂದ್ರರೆ ಹಗಲು – ರಾತ್ರಿಗಳು
ಹರಿಯುತ್ತವೆ –
ಕೋಟಿ ಕೋಟಿ ಜೀವಧಾರೆಗಳು
ಸೆರೆಬಿದ್ದು ಹೊತ್ತಿ ಉರಿದ
ಹೋಮ ಕುಂಡದೊಳಗಿಂದಲೇ
ಎದ್ದರಳಿ ನಲುಗದ
ಅರಳು ಕೆಂಪುಗಳಲ್ಲಿ
ಮಡಲಿರಿಯುತ್ತವೆ ಶ್ರೀಗಂಧ
ಚಂದನದ ಬಳ್ಳಿಗಳು
ಗಾಂಧಿ ನೆಹರೂ ಜೋಡಿ ಕಾಯಿಗಳಲ್ಲಿ
ಒಂದು ಉದುರಿ ಮಣ್ಣಾದರೂ
ಮತ್ತೊಂದು ಹಣ್ಣಾಗಿ
ಬೀಜವಾಗಿ ಚಿಗುರಿ ಒಡೆದು
ಬೇऽರಿಳಿದು
ಯೋಜನಯೋಜನದಾಚೆಗೂ
ಶತಶತಮಾನಗಳವರೆಗು ಹಬ್ಬಿದೆ

ದಿಕ್ಕೆಟ್ಟ ಭಾರತಕೆ ದಡವ ಕಾಣಿಸಲು
ಜ್ಞಾನನಾವಿಕನಾದ
ನೆಲವೂರಲಾಗದ ಹೆಜ್ಜೆಗಳಿಗೂ
ಭರವಸೆಗಳ ನಿಚ್ಚಣಿಕೆಯೇರಿಸಿ
ಯಕ್ಷಲೋಕಗಳ
ಬಣ್ಣಬೆಳಕುಗಳ
ಕನಸನೂಡಿಸಿಯೇ ನಿಲಿಸಿದ್ದಾನೆ
ಉಳಿಸಿ ನೆಲಕಚ್ಚದೆ

ಮಲಗಿದ್ದ ದೈತ್ಯವಿಚಾರಗಳ
ಬಡಿದೆಬ್ಬಿಸಿ ಹೊರಟಿದ್ದೇs
ಹೊರಗೆ ಸಂಚಲನ
ಜಗದಗಲವೂ ಅದರ ಅನುರಣನ

ಸತ್ತು ಸಮಾಧಿಯಾಗಿದ್ದ
ಆಸೆಗಳು ಪುಟಿದೆದ್ದು
ನೆಹರು ನೆಹರು ಎಂಬ
ಕರ್ಣಧಾರಕೆ ತೆಕ್ಕೆ ಬಿದ್ದು
ಕಾಯುತ್ತಲೇ ಬಂದಿದ್ದೇವೆ
ಹಾಲು ಹಳ್ಳಗಳಲ್ಲಿ ಮೀಯುವುದಕ್ಕೆ
ಕ್ಷಿತಿಜದಾಚೆಯ ಮಹಲು
ಗಳಲ್ಲಿ ವಾಸಿಸುವುದಕ್ಕೆ
ಅಂತರಿಕ್ಷಯಾನದಲಿ ಸಂಚರಿಸಲಿಕ್ಕೆ!

ತನ್ನಿಂದ ಮುಗಿಯದ ಕನಸುಗಳ
ಮಕ್ಕಳು ಮೊಮ್ಮಕ್ಕಳ ಮಡಿಲಿಗೊಪ್ಪಿಸಿ
ನೆನಪು ನೆರಳಿನ ಕೊಡೆಯಾಗಿ
ನಮ್ಮೊಡನೆ ಬದುಕಿ ಸಾಗಿದ್ದಾನೆ
ದೈತ್ಯ ವಟವೃಕ್ಷವಾಗಿ ಬಿಳಲು ಬಿಡಿಸಿ
ಆ ಸೇತು ಹಿಮಾಚಲವ ತಬ್ಬಿದ್ದಾನೆ

ಇಲ್ಲಿರುವುದೆಲ್ಲ ಇವನದೇ
ಇರುವುದೆಲ್ಲವೂ ಇವನೇ

ಇವನುಸಿರು ತಂಗಾಳಿ
ನೆತ್ತರಿವನದು ಪುಣ್ಯತೀರ್ಥ
ಇವನೊಡಲು ಬಂಗಾರ ಬೆಳೆವ ಭೂಮಿ
ದೇಶದಾಗಸಕ್ಕೆ ಇವನೆ ಕಣ್ಣು
ಇವನಿಲ್ಲದ ನೆನಪು ಮಾಯದ ಹುಣ್ಣು
– ಅದಕ್ಕೇ ಇವನೆಂದರೆ ಭಾರತ
ಭಾರತವೆಂದರೆ ಇವನು!!

# ಕವಿಗೆ

ಕುಪ್ಪಳಿಯ ಮೈತುಂಬ
ಪುಲಕ ಚಿಲಕರಿಸಿತ್ತು
ನಿದ್ದೆ ಅಲಸಿಕೆಯೊದ್ದು
ಹೊಗರೆದ್ದು ಹೊಸವರುಷ
ಹರುಷಹಾಡಿತ್ತು
ಉದಯ ರವಿ ಕವಿ ಪ್ರತಿಭೆ
ಪರುಷ ಸ್ಪರ್ಷಕ್ಕೆ
ಅಣು ಅಣುವೂ ಅರಳಿತ್ತು
ಬಂಗಾರ ಕಾವ್ಯವಾಗಿ

ಕವಿ ಮನೆಯ ಮೂಲೆ ಮೂಲೆಯಲ್ಲೂ
ಮಧುರ ಮಂಜುಳ ಗಾನದನುರಣನ
ಮತ್ತೆ ಮರಳಿ ಬಂದಿತ್ತಿಲ್ಲಿ ಕೊಳಲಗಾನ
ಪಿಸುದನಿಯಲ್ಲಿ ಕೇಳಿ ಬಂದಿತು
"ಜೇನಾಗುವ ಬಾ" ಎಂದು
ನಲ್ಲೆಗೆ ಆಹ್ವಾನ
ಕನಸಿನ ಲೋಕಕ್ಕೆ ಪಯಣಿಸಲು
ಹೊಸ್ತಿಲಂಚಲ್ಲಿ ನಿಂತು ಕರೆಯಿತು
ಕಾಮನ ಬಿಲ್ಲಯಾನ

ಸಂಭ್ರಮದ ಸೊಗದ ಹೆಜ್ಜೆಗಳು
ಕುಪ್ಪಳಿಯ ನೆಲದಗಲ ಸುಳಿದಾಗ
ನಕ್ಕವಿಲ್ಲಿಯ ಹೂವು ಮೊಗ್ಗು
ಚಿಮ್ಮಿ ಚೆಲ್ಲಿತು ಹೊರಗೆ
ತಡೆ ಹಿಡಿದ ಸಿಗ್ಗು

ಕಣ್ಣ ದುರ್ಬೀನಿನೊಳಗೆ
ಕಂಡದ್ದು ದೇವರ ರುಜುವಲ್ಲ
ಶಿಖರ ಕವಿ ರಸಋಷಿಯ
ಭಾವರಾಸದ ಚಿತ್ರ
ನೆಲಮುಗಿಲಿನಾಳ ವಿಸ್ತಾರಗಳ
ಕಾವ್ಯಗಂಗೆಯ ಪಾತ್ರ
ಕಟ್ಟಿರುವೆ ಕಾಜಾಣ ಕೋಗಿಲೆಗಳು
ಕದರಡಕೆ ಬಿದರಡಕೆ ಪಕ್ಷಿ ಕಾಶಿಗಳು
ಅಮರಗೊಂಡಿಹವಿಲ್ಲಿ
ಕವಿಯ ಮಾನಸಕೋಶದಲಿ
ಕಳೆವ ಅಪಾಯವದೆಲ್ಲಿ?

ಕವಿ ಶೈಲ ಸಿಬ್ಬಲುಗುಡ್ಡ
ಅಬ್ಬಿಯಬ್ಬರವೆಲ್ಲ
ಮೌನ ಸೆರೆಯೊಗೆದು
ಮಾತು ಮೊಲ್ಲೆಯ ಚೆಲ್ಲಿ
ಕವಿ ಕಳೆದ ಕ್ಷಣಗಳದ್ಭುತದ
ರಸಭಾವದಲಿ ಹೊಸೆದ ಕವಿತೆಗಳ
ರಂಗು ರಂಗಿನ ಕನಸುಗಳು ಬಿಡಿಸಿದ
ರಂಗವಲ್ಲಿಗಳೆಷ್ಟೊ
ಮೈಮರೆತು ತೋರಿದವು
ಗರಿಬಿಚ್ಚಿನಲಿದ ನವಿಲುಗಳ
ಕುಣಿಸಿದವು ತಣಿಸಿದವು

ತಮ್ಮದೆಯ ಗುಹೆಗಳಲಿ
ಕೊರೆದು ಕೆತ್ತಿದ
ನೆನಪಿನ ಶಾಸನಗಳನ್ನೇ ತೆರೆಸಿದವು
ಮುಗಿಲು ಮುದಗೊಂಡು
ನೆಲವು ಹದಗೊಂಡು
ಕವಿಗೆ ಮುಗಿದವು ಕೈಯ್ಯಿ
ಕಾವ್ಯ ಸರಸಿಯಲಿ ತೇಂಕಿ
ನಲಿಯಿತು ಮೈಯ್ಯಿ

# ಇಂದೇಕೆ ಈ ಬಾವ

ಇಂದೇಕೆ ಈ ಭಾವ
ಮನದಲ್ಲಿ ಮಧುರಾಭಾವ
ಕನಸಲ್ಲಿ ಕಂಡ ಮುಖ
ಕಾಣಬಹುದೇ ಇಂದು
ಹಸಿರಸಿರಿ ಮೈಯಲ್ಲಿ
ಹಿಮಗಿರಿಯ ಮುಡಿಯಲ್ಲಿ
ಅಚ್ಛೋದ ಸರಸಿಗಳ
ಜಲದ ಕನ್ನಡಿಯಲ್ಲಿ
ಮೂಡಿ ಬರಲಿದೆಯೇನೊ
ಮುಗ್ಧ ಮೋಹಕ ಬಿಂಬ
ವನದ ಬೀದಿಗಳಲ್ಲಿ ಕುಸುಮಗಳ ರಂಗೋಲಿ
ಮೈ ಮರೆಸಿ ತೇಲಿ ಬರುತಿದೆ ಕೋಗಿಲೆಯ ಲಾಲಿ

ಶಿಸ್ತಿನಲಿ ಸಾಲುಗಟ್ಟಿ ನಿಂತಿರುವ
ಸುಂದರ ಪುಟ್ಟ ಹಕ್ಕಿಗಳ ಕಣ್ಣಲ್ಲೂ
ಆ ಮುಖವ ಕಾಣುವ ಕಾತರ
ಕಂಡವನನಪ್ಪುವ ಆತುರ
ನುಡಿಗೆ ದಕ್ಕದ ನೋಟಕ್ಕೆ ಸಿಗದ
ನೀಲದೇಹನು ಸುಂದರನೇ
ಸೂರ್ಯ ಬೆಳಗನುಟ್ಟು
ಚಂದ್ರ ತಂಪನು ಎದೆಯಲಿಟ್ಟು
ಮಂದ ಹಾಸದಮಿಂಚನು ಹರಿಸಿ
ಕರುಣೆ ಪ್ರೀತಿಗಳ ಮಳೆಯನು ಸುರಿಸಿ
ಕಿಸಲಯ ಕೈಗಳ ಕೋಮಲವೇ
ಕಂಡು ಕಾಣದಾ ಮೊಗದ ನೆನಪಿನಲಿ

ಮನದ ನವಿಲು ನಲಿದಾಡಿ ಕುಣಿಯಿತು
ಭಾವ ಭಾಮೆಯರ ಗೆಜ್ಜೆ ಉಲಿಯಿತು
ಸಪ್ತ ಸ್ವರಗಳೂ ಗೀತವಾಯಿತು
ಮೂಡಿಬಾ ಮನದೊಲವೆ
ಹರಿದು ಬಾ ರಾಗರಸವೇ

## ಸವಿತಾ ನನ್ನ ಕವಿತಾ

ಸವಿತಾ
ನನ್ನ ಕವಿತಾ
ಕಾಣಲಿಲ್ಲವಲ್ಲೇ?
ಸದಾ ಜೊತೆಯಾಗಿ
ನನ್ನ ನಿರಂತರ ಉಸಿರಾಗಿ
ಕಣ್ಣಾಗಿ ಕೊರಳಾಗಿ
ಬೆನ್ನಲ್ಲೇ ಬರುವನೆರಳಾಗಿ
ಇದ್ದವಳು
ಈಗೆಲ್ಲಿ ಮಂಗ ಮಾಯ!
ಕಂಡೂ ಕಾಣದಂತೆ
ಒಮ್ಮೊಮ್ಮೆ
ಕಣ್ಣಮುಚ್ಚಾಲೆಯಾಡಿಸಿ
ಕೈಜಾರಿ ಓಡಿ ಕಾಡುತ್ತಾಳೆ
ಪಾತಾಳ ಗುಟ್ಟುಗಳು
ಕುಡಿಯೆದ್ದ ಪುಲಕಗಳು
ಕೊರಳ ಹಂತಕ್ಕೆ ಬಂದರೂ
ಮಾತಾಗದೆ ತೊಡಕಿಕೊಂಡು
ತಣ್ಣಗಾಗುತ್ತವೆ
ಮಸಳುವ ನೆನಪು
ಚಡಪಡಿಕೆ ಚುಮುಚುಮು
ಕಳವಳದ ಕಾರು ಮೋಡ
ನಡುವೆ ಎಲ್ಲೋ ಒಮ್ಮೆ
ಮಧುರ ಭಾವ
ತೋಡಿ ಕೊಳ್ಳಲು ಎಲ್ಲ
ಇವಳೆ ಇಲ್ಲ

ನನಗೆ ಗೊತ್ತು
ಇವಳು ಇರುವುದಿಲ್ಲ
ಹಂಸತೂಲಿಕಾ ತಲ್ಪಗಳಲ್ಲಿ
ಪ್ರಮದವನದ
ಪ್ರಣಯ ಬಾಹುಗಳಲ್ಲಿ
ಶೃಂಗಾರ ಕ್ರೀಡೆಗಳಲ್ಲಿ
ಅಚ್ಛೋದ ಸರಸಿಗಳಲ್ಲಿ
ಜಲಕ್ರೀಡೆಯಲಿ ಮೈಮರೆವ
ಹಂಸಗಳ ಒಡನಾಟದಲ್ಲಿ
ರಾಮಗಿರಿಯ ಮಣಿ ಮಂಟಪದಲ್ಲಿ
ಯಕ್ಷ ಯಕ್ಷಿಯರ
ವಿರಹ ಗೀತೆಗಳಲ್ಲಿ
ಆಕಾಶ ಬೀದಿಯಲ್ಲಿ
ಸೂರ್ಯ ಚಂದ್ರರ ಹೊನ್ನ
ತೇರುಗಳಲ್ಲಿ ಅವಳು
ಓಡಾಡುವುದಿಲ್ಲ
ಕಮಲ ಕೋಗಿಲೆಗಳ
ಗಿಳಿ ಗೊರವಂಕಗಳ ಸ್ನೇಹದಲ್ಲಿ
ಮಾವು ಮಲ್ಲಿಗೆಯ
ಪ್ರಣಯದುತ್ಸವದಲ್ಲಿ
ಮಧು ಮಾಸದ ಹಾಸದಲ್ಲಿ
ಅವಳು ಸುಳಿಯುವುದಿಲ್ಲ
ಹೆಜ್ಜೆ ಜಾಡುಗಳನ್ನು
ಇಲ್ಲಿ ಈ ನೆಲದಲ್ಲೇ ಹುಡುಕಬೇಕು
ಕೊಳಗೇರಿ ಗುಡಿಸಲುಗಳ
ಕಂಬನಿಯ ಕೊಳಗಳಲ್ಲಿ
ಹೆತ್ತೊಡಲ ಮಾಂಸವನ್ನು
ಹಂಚಿಕೊಳ್ಳುವ ಸಂಚಿನ
ವ್ಯವಹಾರಗಳ ಸಾಕ್ಷಿಯಾಗಿ
ಹಗಲು ಸಂಜೆಗಳಂತರವಿಲ್ಲದೆ
ದುಡಿವ ಜೀವಯಂತ್ರಗಳ

ಹಾದಿ ಬದಿಯ ಅನಾಥ ಶವಯಾತ್ರೆಯ
ಜೊತೆಯಲ್ಲಿ

ಹತಾಶೆ ನಿರಾಶೆಗಳ ನಿತ್ಯ
ಜಂಜಡಗಳಲ್ಲಿ
ನೆಮ್ಮದಿಯ ಕಳೆದುಕೊಂಡು
ನಿಟ್ಟುಸಿರಬೆಂಕಿಯ
ಬೇಗೆಯಲಿ ಬೇಯುತ್ತ
ಉದುರಿದ ಅಸಂಖ್ಯ ಕಂಬನಿ
ಮುತ್ತುಗಳನಾರಿಸುತ್ತ
ಅಂಡಲೆಯುತಿರಬಹುದೆ ನನ್ನ ಕವಿತಾ – ಸವಿತಾ

## ಸ್ವತಂತ್ರ ಭಾರತದ ಮಕ್ಕಳು

ಬಯಲನ್ನೇ ಬಟ್ಟೆಯಾಗಿ ಉಟ್ಟು
ನಿಟ್ಟುಸಿರನ್ನು ನೆಮ್ಮಿಕೊಂಡು
ಬತ್ತಿದ ಬೀದಿಗಳಲ್ಲಿ
ಆಸೆ ಸೋರಿದ ಕಣ್ಣುಗಳನ್ನು
ನಿಷ್ಠುರದ ನಿರ್ಮೋಡದಾಕಾಶಕ್ಕೆ
ಹರಿಯ ಬಿಟ್ಟು
ಆರಿದ ಗಂಟಲು ತೇವಕ್ಕೆಂದು
ಹನಿಹನಿಯ ಮಳೆಗೆ
ಮುಸುರುತ್ತೇವೆ
ಹಗಲಲ್ಲಿ ಮಲಗುತ್ತೇವೆ
ರಾತ್ರಿಯಲ್ಲಿ ಕನವರಿಸುತ್ತೇವೆ
ಹಗಲಿಗಿಂತಲೂ ರಾತ್ರಿಗಳನ್ನೇ
ಪ್ರೀತಿಸಿ ಬದುಕುತ್ತೇವೆ
ಬದುಕುತ್ತಿರುವ
ಬೆತ್ತಲೆತನಕೆ ನಾಚಿ
ಬೆದರುತ್ತೇವೆ
ಬೆಳಗಾದರೆ
ಗಂಡ ಹೆಂಡತಿ ಮಕ್ಕಳು
ಒಬ್ಬೊಬ್ಬರ ಕರುಣೆಯ
ಕಣ್ಣುಗಳಲ್ಲಿ ಮುದುಡಿಕೊಂಡು
ಮಾನವನ್ನು ಮುಚ್ಚಿಕೊಂಡು
ಮರ್ಯಾದೆಯನ್ನ ಕಾಯುವ
ನಾವುऽऽ
ಸ್ವತಂತ್ರ ಭಾರತದ ಮಕ್ಕಳು
ಉಣ್ಣುವ ಉಡುವ

ಉದ್ಧಾರದ ಕನಸುಗಳನ್ನು
ತುಂಬಿಕೊಂಡೇ
ಹಸಿದು ಕಂಗಾಲಾಗಿದ್ದೇವೆ
ಬೆತ್ತಲಾಗಿದ್ದೇವೆ
ಏರುವವರ ಏಣಿಯಾಗಿ
ಚಿರಯೌವ್ವನದ ಬಯಕೆಗೆ
ಕಾಯಕಲ್ಪದ ಕಷಾಯವಾಗಿ
ಸಾವಿನ ಸಂಪುಟಗಳಲ್ಲಿ
ಸೇರಿ ಹೋಗದೆ ಉಳಿದಿದ್ದೇವೆ
ನಮ್ಮ ನಡೆಸುವ ನಾವಿಕರು
ದಡಕಾಣಿಸುವ ಭರವಸೆಗಳನ್ನು
ಧ್ವನಿ ವರ್ಧಕದೊಳಗೆ
ಬಿತ್ತಿ ಬಿಟ್ಟಿದ್ದಾರೆ

ಲಕ್ಷ ಲಕ್ಷ ಯೋಜನೆಗಳ
ನಕ್ಷೆಗಳ ಬಿಡಿಸಿ
ಕೋಟಿ ಕೋಟಿಗಳ ಮಂಜೂರಾತಿಗೆ
ಮುದ್ರೆಯೊತ್ತಿ
ಮುಗಿದ ಸಂತೃಪ್ತಿಯಲಿ
ಎದುರಿಗೆ ಬರುವ
ಹೆಂಡತಿಯ ತುಟಿಯ
ತುಂಟನಗೆಯಲ್ಲಿ
ಕೊಚ್ಚಿ ಹೋಗುವುದೆಲ್ಲೊ
ನೆನಪುಗಳು

ದೃಷ್ಟಕ್ಕೆ ಅಂಟಿಕೊಂಡು
ಅದೃಷ್ಟಕ್ಕೆ ಹೊರತಾಗಿ
ಗ್ಯಾಲನ್ ಗಟ್ಟಲೆ ನೀರು ಹರಿದರೂ
ಹರಿಯಲಾರದೆ
ಒಡೆದ ಪಂಪುಗಳಲ್ಲಿ
ಅಲ್ಲೇ ಸೋರಿ

ಮನೆಯ ನಲ್ಲಿಯಲ್ಲಿ
ತೊಟಿಸಲಾರದೆ ಗೊರಗೊರ
ಗಾಳಿಸದ್ದು,
ದಿನದಿನದ ಪಯಣದಲಿ
ಬರುವ ಮರುಗಳಲ್ಲೇ
ಸಿಹಿನೀರ ಬಾವಿಯ ಬಯಸಿ
ಹಾಳು ಬಿದ್ದ ಅಂಗಳದಲ್ಲಿ
ಅರಸುತ್ತ ತುಳಸಿ
ಇಡುವ ಹೆಜ್ಜೆಗಳ ಎಣಿಕೆಯಲಿ
ಸಾಗುತ್ತೇವೆ – ಸ್ವ – ತಂತ್ರಭಾರತದ ಮಕ್ಕಳು!

## ಸ್ಥಳಾಂತರ

ಇಂದು ಬೊಂಬಾಯಿ
ನಾಳೆ ಮೈಸೂರು
ನಾಳಿದ್ದು ಮತ್ತೆಲ್ಲೊ ದೂರ ಪಯಣ
ಮುದುರಿದ್ದ ಪದರ
ಬಿಚ್ಚಿ ನೋಡುವಷ್ಟರಲಿ
ಕೆದರಿತ್ತು ಬಿಡಿ ಬಿಡಿಯ
ದಾರ – ದಾರ
ಊರಿನಿಲ್ಲುವ ನೆಲ
ಕೆಳಗೆ ಸರಿದದ್ದು ಕಂಡು
ಹೊತ್ತು ನೆತ್ತಿಯ ಭಾರ
ಮತ್ತೆಲ್ಲಿಗೋ
ಹರಿದಿತ್ತು ಹೆಜ್ಜೆ
ಮೌನ ಹಾಡಿತು ಗೆಜ್ಜೆ
ಬತ್ತಿ ಬಾಯಾರಿದ ನಾಲಿಗೆಗೆ
ಬಯಕೆಯಾಯಿತು
ಬೆಳ್ಳಿ ತಿಂಗಳ ತೊಟ್ಟು
ಸ್ಥಳಾಂತರದ ಅವಾಂತರದೊಳಗೆ
ಕಳೆದದ್ದು ಎಷ್ಟೊ ಲೆಕ್ಕವಿಲ್ಲ
ಒಂದೊಂದು ಸಲ ಬದಲಾದಾಗಲೂ
ಸಾಮಾನು ಸರಂಜಾಮುಗಳನ್ನು
ಸಾಗಿಸುವಾಗಲೆಲ್ಲ
ತೊಟ್ಟಿಲು ಕೊಡೆ ಕುರ್ಚಿ ಬೆತ್ತ –
ಒಂದೊಂದನ್ನೇ
ಮರೆವಿನಟ್ಟದಲಿ ಬಿಟ್ಟು
ಹೊರಟಿದ್ದೇವೆ

ಮೊದಮೊದಲು ಹೋದಲ್ಲಿ
ನೆರಳು ಬಿಡಿಸಿತ್ತು
ಸಾಲು ಮರಗಳ ಹೆರಳು
ಕೊಂಬೆ ಕೊಂಬೆಯು
ಮುಡಿದಿತ್ತು ದಿಂಡು ಮಲ್ಲಿಗೆ ಅರಳು
ಹಸುರಿತ್ತು ಉಸಿರಿತ್ತು
ಬಣ್ಣ ತುಂಬಿದ ಕನಸು ಬುಗ್ಗೆಯಿತ್ತು

ನಡೆದ ನೆಲ ಪುಲಕಿಸಿ
ನುಡಿದ ನುಡಿ ಕಿಲಿಕಿಲಿಸಿ
ಕಚಗುಳಿಸಿ ಗಾಳಿ
ಉತ್ಸಾಹದುಯ್ಯಾಲೆ ತೂಗಿಸಿತ್ತು
ಸುಗಮವಾಗಿದೆ ದಾರಿ
ನಾನೆ ರಾಜಕುಮಾರಿ
ನನ್ನ ಅಂತಃಪುರಕೆ ಹಾರಿ
ಬಂದು
ಚುಂಬನದ ಸವಿಗೊಟ್ಟು
ಒಲುಮೆ ಸೀಸೆಯ ನಿಟ್ಟು
ನನ್ನನಾಳುವನೆಂದು
ನಾ ಸೊಕ್ಕಿದೆ

ಇನ್ನೇನು ನನ್ನದೆಂದೇ
ನಾ ಬಿಚ್ಚಿದೆ ನನ್ನ ಬಿಡಾರ
ದಾಖಲಾಗಿಸಿದೆ ವಿಳಾಸ
ಗೂಟ ಹೊಡೆದು
ಫೋಟೋ ಏರಿಸಿ
ಅಡುಗೆಗೆ ಹೊಂಚಿ
ಮೂಟೆ ಬಿಚ್ಚಿ
ಊಟವಾಗುವುದನ್ನೇ
ಕಾದು ಕುಳಿತೆ

ಹೊರಗೆ ಬಾಗಿಲ ಸದ್ದು,
ಬರುವರಾರದು ಒಳಗೆ!
ಒಡಲ ಬಳ್ಳಿಯ ತುಂಬ
ಪುಲಕದೊಲುಮೆಯ ಅರಳು
ಹಬ್ಬಿ ಹಾಸಿತು ಮನಸು
ಬಾನಿನುದ್ದಗಲಕ್ಕೆ
ಇವನೆ ರಾಜಕುಮಾರ
ಪಿಸುನುಡಿದಿತ್ತು ಕನಸು
ಇದ್ದಲ್ಲೆ ಇರುವ
ಇದ್ದು ಬೇರಿಳಿವ ಖುಷಿ
ಖುಷಿಯ ಕೊರಲಿರಿವ
ಗುಮ್ಮ ಭೀತಿ
ಎದೆಯೊಳಗೆ ಕೊರೆದಿತ್ತು
ಸುರಂಗಗಳ
ಹೊಗಿಸಿತ್ತು ಪ್ರೇತ ಪಿಶಾಚಿಗಳ
ಇದ್ದುದಿದ್ದಂತೆ ಎದ್ದೋಡಿದೆ
ಕಂಪು ಸೊಂಪುಗಳ ಕನಸಲ್ಲಿ
ಸಮಾಧಿ ನಾನಾದೆ
ಮತ್ತೆ ಹೊರಟಿತ್ತು ನನ್ನ
ಬಯಲು ಸವಾರಿ
ಬೆಂಕಿ ದಾರಿಗಳು
ಕೆಂಡ ಕಡಲುಗಳು
ಹುತ್ತ ಬೆಟ್ಟಗಳು
ಕ್ರೂರ ಕಾಡುಗಳು
ದಾಟಿ ಹೋದರೆ ದೊರೆಯಬಹುದು
ಸ್ವರ್ಗ ದೂರು

ಕಾಸು ಬೇಕಿಲ್ಲ
ಸುಲಭದಲಿ ದೊರೆಯುವುದಂತೆ
ಕಜ್ಜಾಯ ಕಡಲೆ
ಹೊನ್ನು ಉಗುಳುವುದಂತೆ – ನೆಲ

ಹೂವು ಹಾರುವುದಂತೆ
ಹಕ್ಕಿಯಂತೆ
ಮರ ಮಾತಾಡುವುದಂತೆ
ನದಿ ನಡೆಯುವುದಂತೆ
ಎಲ್ಲ ಉಂಟಂತಿಲ್ಲಿ
ಊರಿಗೆ ಹೆಸರಿಲ್ಲವಂತೆ!

ಇಲ್ಲಾದರೂ ಇನ್ನಾದರೂ
ನಿಶ್ಚಿಂತೆಯಲಿ
ಬದಲಾಗುವ ವಿಳಾಸಗಳ
ಬೆನ್ನು ಮುರಿದು ಇರುವೆನೆಂದು
ಕನವರಿಸುವಾಗ
ಎದೆಯ ಹಕ್ಕಿ ಹಗೆಯು ಉಕ್ಕಿ
ಚೀರಿತ್ತು –
ಆ ಊರು ಸೇರುವೆಯೆಂತು?

# ರಾಷ್ಟ್ರೀಯ ಹೆದ್ದಾರಿ

ರಾಷ್ಟ್ರೀಯ ಹೆದ್ದಾರಿಗಳಲ್ಲಿ
ಅಪಘಾತಗಳು ಹೆಚ್ಚಾಗುತ್ತವೆ
ಕಾರಣ
ಅವು ರಾಷ್ಟ್ರೀಯ ಹೆದ್ದಾರಿಗಳು
ಪ್ರಪಂಚದ ಹೊರೆಯನ್ನೆಲ್ಲ
ಬೆನ್ನು ಹೊತ್ತ ದೈತ್ಯ ಲಾರಿಗಳು
ಹಿಂದು ಮುಂದುಗಳನ್ನು
ನೋಡುವುದಿಲ್ಲ
ಲಾರಿ ಚಾಲಕರ ತಮಾಶೆ ಥ್ರಿಲ್ಲು
ಗಳ ಮುಂದೆ
ಬಡಪಾಯಿಗಳ ಪ್ರಾಣ
ಯಾವ ಲೆಕ್ಕ
ಪಾಪ ! ಬಡಪಾಯಿ
ಚಾಲಕರೂ ಚಾಲಕ ವಿಧಿಯ
ಕೈಯ್ಯ ಗೊಂಬೆಗಳು
ಸಾಯಿಸುತ್ತಾ ಸಾಯುತ್ತಾ
ಸರಕನ್ನಷ್ಟೂ ಉಳಿಸುತ್ತಾರೆ

# ಕವಿಗೋಷ್ಠಿ ಮತ್ತು ಗೆಳೆಯ

ಕವಿಗೋಷ್ಠಿಗೆ ಕರೆದ ಗೆಳೆಯ
ಪ್ರೀತಿ ಸ್ನೇಹದ ಹುಡುಗ
ನಗೆ ಮೊಗದ ತುಡುಗ
ಮಾತಿನಲಿ ಖುಲ್ಲಂ ಖುಲ್ಲಂ ಕಪಟವಿಲ್ಲ
ಸ್ನೇಹದಾಹ್ವಾನ ಆತುರದ ಪಯಣ
ಬಸ್ಸಿನಲ್ಲಿ ಕುಳಿತವಳ ಕಣ್ ತುಂಬ
ಕನಸುಗಳ ನಕ್ಷತ್ರ ಹೊಳಪು
ಸ್ನೇಹ ಮುಖಿಗಳ ನೆನಪು ಕಚಗುಳಿ
ಸಾಗಿ ಸವೆದ ದಾರಿ ಮರೆತ ಪರಿವೆ
ಜಗ್ಗನೆ ಜೋಲಿ ಹೊಡೆದು ನಿಂತಾಗ
ನಿಲ್ದಾಣದರಿವಿನ ಬೆಳಕು
ಕವಿಗೆಳೆಯನ ನಗೆ ಬಲ್ಬುಗಳು
ಪಕ್ಕನುರಿದಂತೆ ಭಾಸ
ಅಡುಗೆ ಮನೆಯಿಂದಲೇ ಮಂದ ಹಾಸದ
ಕಂಪಿನ ಮತ್ತು ತುತ್ತು
ಹಸಿದ ಮನಕೆ ದಣಿದ ಒಡಲಿಗೆ
ಹಿತವೋ ಹಿತ
ತಟ್ಟೆಯಲಿ ಅವಲಕ್ಕಿಯೊಗ್ಗರಣೆ
ಜೊತೆಗಷ್ಟು ಮೊಸರಿನಭಿಷೇಕ
ರುಚಿಯ ಹೆಚ್ಚಿಸಲಿಕ್ಕೆ
ಸ್ನೇಹದುಪ್ಪಿನ ಕಾಯಿ ಸವಿಬೆರೆತ ಕಾಫಿ
ಹೊತ್ತು ಕಳೆದಂತೆ ಗೋಷ್ಠಿ ಮುಗಿದಂತೆ
ಕವಿತೆಗಳು ಕುಣಿದಂತೆ
ಬೇಸರದ ಮುಳ್ಳಿ ನಾಟ
ಪರಕೀಯ ಭಾವದ ಹೆಡೆಯ ನೆರಳು

ಸರಿದು ಸಾಗಿದಷ್ಟೂ ಬಳಿಗೆ
ದೂರ ಸರಿದಂತೆ ಸುಳಿವ ಕಣ್ಣುಗಳು
ಬೆಚ್ಚನೆಯ ಹಿತ
ಹಾತೊರೆದಷ್ಟೂ ಕೊರೆವ
ಮಂಜಿನ ಸ್ಪರ್ಷ

ಗುಜುಗುಜಿಸಿ ಭಟ್ಟಂಗಿಯಾಡುವ
ಕೀಟಲಿಸುವ ಸಲುಗೆಯಣಕದಲಿ
ಮೈಮರೆವ
ಪುಟಿವ ಸ್ನೇಹ ಬಾಹುಗಳೊಳಗೆ
ಬಂಧಿಸುವ ಗುಂಪು ಗದ್ದಲ
ಸಂಭ್ರಮದ ಸಂತೆಯಲಿ
ಮಂದಿ ಮಂದಿಯ ಸಂದುಗಳಲ್ಲಿ
ಸುಳಿದಾಡಿದಾಗ
'ನಾನೊಂದು ನಡುಗಡ್ಡೆ
ನನ್ನ ತಲುಪದ ಬಣ್ಣಗಳ
ಸ್ಪೃಷ್ಯದಲಿ ಅಸ್ಪೃಷ್ಯಳಂತೆ
ಶಬ್ದದಲಿ ನಿಶ್ಯಬ್ದದಂತೆ'
ಅಡಗಿ ಕುಳಿತ ಅರಿವು ನೋವು ಚಿಲುಮೆ
ಮುಖಾಮುಖಿಯಾದಾಗ
ಮಂದಸ್ಮಿತದಲ್ಲಿ ಜಾರಿದ
ಮಾತುಗಳ ವಂಚಿಸುವ
ಮರೆಯಲ್ಲಿ ಮೆತ್ತನೆಯ ದನಿಯಲ್ಲಿ
ಕಿಲಿಕಿಲಿಸಿ ಬೀಸಿದ ತಂಗಾಳಿಯಲ್ಲೂ
ಬಿಕ್ಕುವಾಯಾಸ
ಗೂಡು ಬಿಟ್ಟು ಹೊರಟಾಗ
ಬಿಚ್ಚಿದ ಉತ್ಸಾಹದ ಗರಿ ಕಡಿದು
ಮರಳಿ ಸೇರಲು ಗೂಡು ಎದೆಯ ತವಕ

# ಇವಳು ಅವಳೇ ಏನು?

ಇವಳು ಅವಳೇ ಏನು?
ಪುಟ್ಟ ಕಿರಿಗೆಯಲಿ
ನಾಗ ಮುರಿಗೆಯಲಿ
ನಾಗೋಲಿ ಹಸೆ
ಹೂ ಚೆಂಡುಗಳನಾಡಿದವಳು
ಚಿಮ್ಮಿ ಚೆಲ್ಲುವ ಚೆಲುವು
ಗಲ್ಲದಲಿ ಕೆದರುತ್ತ
ತುಂಟ ಕಣ್ಣಿನಲುರಿವ
ತಣ್ಣನೆಯ ಬೆಳಕಿನ
ಬೃಂದಾವನವ ರಚಿಸಿ
ನನ್ನ ಬಾಳಿನ ತುಂಬ ಕವಿತೆಗಳ
ಬರೆಯುತ್ತ ಸಪ್ತವರ್ಣದ ಕನಸುಗಳಲ್ಲಿ
ತೂಗಿ ಜೋಗುಳ ಹಾಡಿ
ತನ್ನಾಯುವನ್ನೂ ನನ್ನಾಯುವಿಗೆ
ಕೊಡುವೆನೆಂದು ಕುಕಿಲಿರಿದವಳು
ಇವಳು ಅವಳೇ ಏನು?

ನೆನಪುಗಳು ಹೊರಳಿ
ಕಿಚ್ಚು ಹೊತ್ತಿ ಉರಿಯುತ್ತದೆ
ಬಾನಿಗೂ ಒಮ್ಮೊಮ್ಮೆ
ಮಂಕು ಬಡಿಯುವುದುಂಟು
ನೀಲಿ ಪಡಖಾನೆಯಲಿ
ಮಲಗಿ ಮಲಗಿ ಸೂರ್ಯನೂ
ಸವೆ ಸವೆದು ಕರಗುವುದುಂಟು
ಹೂಮುಡಿದ ಮರ ಬಳ್ಳಿ

ನೋವಿನುರಿಯಲಿ ಉರಿದು
ಬೂದಿ ಬೆಂಗಾಡು
ಈ ಇವಳು ಮಾತ್ರ
ಯಾವ ಲೋಕದ ಅಮರತ್ವವನು
ಕಸಿದು ತಂದಿಹಳು
ಐವತ್ತೊ ಅರವತ್ತೋs...
ಲೆಕ್ಕಕ್ಕೆ ಸಿಗದ ಪ್ರಾಯ!
ಕಾಲ ಕಾಲು ಸೋತರೂ ಕರಗುವುದಿಲ್ಲ
ಹೊಸತು ಹೊಸತಾಗಿ ಪುಟಿವ
ಚೆಲುವು ಬಾಡುವುದಿಲ್ಲ
ಅಗೆದಗೆದು ಮೊಗೆದು
ಬೀಸಿ ಬಿತ್ತುವ ಬೀಜಗಳೆಲ್ಲಕ್ಕೂ
ಸುಗ್ಗಿಯಹಿಗ್ಗು
'ಗಂಧವತೀ ಫಲವತೀ'!
ಸಪ್ತಪದಿಯೊಳಗೆ ಜೊತೆ
ಜೊತೆಯಾಗಿನಡೆದು ಬಂದವಳು
ನಾ ನಡೆದು ದಣಿದು
ಹೆಜ್ಜೆ ನಿಂತರು ಹೆಜ್ಜೆ ನಿಲ್ಲದ
ಪಯಣದಲಿ ಸಾಗುವಳು ಮುಂದೆ

ನನ್ನ ಕಣ್ಣುಗಳಲ್ಲಿ
ಸಂಜೆ ಇಳಿಯಿತು
ಇರುಳುಕವಿಯಿತು
ತೆರೆಗಟ್ಟಿದ ಮೈಯೊಳಗೆ
ಸಾವಿರ ಶಿಶಿರಗಳು ಬಿರಿದು
ಹೆಪ್ಪು ಗಟ್ಟಿತು ಜೀವ
ನಳನಳಿಸಿ ನಿತ್ಯವಸಂತದಲಿ
ನಿಂತ ಅವಳ ನೋಟ
ಯಾವ ಕ್ಷಣಗಳಲ್ಲೋ
ದಕ್ಕಿಸಿ ಕೊಟ್ಟ ಸ್ನೇಹದ ಕೂಟ
ಅಜ್ಞಾತ ಗವಿಯಾಳದಿಂದ

ಫಕ್ಕನುರಿದು ಬೆಳಕಾದಾಗ
“ನಕ್ಕವು ನಕ್ಷತ್ರ ಮಲ್ಲಿಗೆ
ಒಡೆದವು ಒಲವಿನ ಚಿಲುಮೆಗಳು
ಬೀಸಿತ್ತು ಗಂಧ ಮಾದನಗಿರಿಯಿಂದ
ತಂಪು ತಂಗಾಳಿ”

# ಮುದುಕಿ ಮತ್ತು ಸಮರ

ಮಂಜು ಕಣ್ಣಲ್ಲಿ ಸಂಜೆ ಸೂರ್ಯನ
ಕೆಂಪು ಬೆಳಕಲ್ಲಿ ಹುಡುಕುತ್ತಿದ್ದಾಳೆ
ಮೂರು ಮೂವತ್ತು ವಸಂತಗಳ
ಮುದುಕಿ ನಡುಗುವ ಕೈಗಳನು
ಚೆಲ್ಲಿ ಹುಡುಕುತ್ತಾಳೆ
ಬೂದಿ ಮರಳಿನ ರಾಶಿಗಳಲ್ಲಿ
ತನ್ನ ದುರ್ಬೀನು ದೃಷ್ಟಿಗೆ
ಸಿಗುವ ಜೀವ ಕಣಗಳಿಗೆ ಕಾತರಿಸಿ
ಕೊಲ್ಲಿಯ ಗಲ್ಲಿ ಗಲ್ಲಿಗಳಲ್ಲೂ
ಗಸ್ತು ಹೊಡೆಯುತ್ತಾಳೆ
ಬಡ ಬಡಿಸುತ್ತಾಳೆ

'ಯಾವ ಪುರುಷಾರ್ಥಕ್ಕೋ
ಯಾರ ದೈತ್ಯ ಸ್ವಾರ್ಥಕ್ಕೋ'
ನನ್ನೆದೆಯ ಕುಡಿಗಳಿಗೆ ಕಿಚ್ಚು ಬಿತ್ತು
ನನ್ನ ಜೀವದ ಕಣ್ಣು ನನ್ನಾಸೆ ಗೋಪುರ
ಸಾವಿಗಾಯಿತು ಇಂದು ಸವಿಯ ತುತ್ತು
ಹಾಲುಗೆನ್ನೆಯ ಹುಡುಗ
ಮಾಸಿರಲಿಲ್ಲ ನಾ ಕೊಟ್ಟ ಮುತ್ತು
ಕೆಂಪು ಗುಲಾಬಿಗಳನ್ನು ಪ್ರೀತಿಸುವ
ಮಲ್ಲಿಗೆಯ ರಸ್ತೆಗಳಲ್ಲಿ ಸುಳಿದಾಡುವ
ಬಣ್ಣ ಬಣ್ಣದ ಹೂ ಹಸಿರುಗಳೊಡನೆ
ಒಡನಾಡುವ ಈ ಮುದ್ದು ಕಂದನಿಗೆ
ಆಕಾಶದಗಲದ ಹೃದಯ
ತುಂಬಿಕೊಂಡಿದ್ದ ಕನಸುಗಳನ್ನು
ಲೆಕ್ಕವಿಲ್ಲದಷ್ಟು; ತೀರಿ ಹೋಗದಷ್ಟು

ಬಂಗಾರ ಭವಿಷ್ಯದ ಕಲ್ಪನೆಯ ಕುದುರೆಯೇರಿ
ಹೊರಟಿದ್ದ ಯಕ್ಷ ಲೋಕದ ಕನ್ನೆಯರಸಿ
ಆದರೆಲ್ಲಿಂದಲೋ ಬಂದ
ಕ್ಷಿಪಣಿಗಳು ಷೆಲ್ಲುಗಳು
ನಂಜು ನೋವಿನ ಗಂಗೆಯನ್ನೇ ಉಕ್ಕಿಸಿತ್ತು
ಸಾವಿರದ ಸರದಾರನೆಂದು ನಂಬಿದ್ದ
ನನ್ನನಪ್ಪಳಿಸಿತ್ತು ಕ್ಷಿಪಣಿಗೂ ಮೀರಿದ ಚೀತ್ಕಾರ
ಸಮರ ಚದುರಂಗದಲಿ
ತೀರ ಕಾಣದೆ ಹಣ್ಣಾಗದೆ
ಸಾವಿನಗುರಿಯ ಪಾರಾಗದೆ
ಚಡಪಡಿಸಿದ ಮಿಲಿಯ
ಮಿಲಯ ಕಾಯಿಗಳ ನಡುವೆ
ಹುಡುಕಲೆಲ್ಲಿದೆ
ನನ್ನ ಕಣ್ಣ ಬೆಳಕು
ನೆಲದ ಋಣ ತೀರುವ
ಕ್ಷಣಗಳಲ್ಲಿ ನಿಂತವಳ
ಸಂಜೀವಿನಿ
ಬರಿ ಬೆಂಕಿ ಹೊಗೆ ಮೋಡ
ರಪರಪನೆ ರೆಕ್ಕೆ ಬಡಿದು
ಉಡಿದು ಬಿದ್ದ ಬಡ ಗುಬ್ಬಿ
ಮರಿಗಳು ರಾಶಿ ರಾಶಿ!
ಮೂಕ ಸಾಕ್ಷಿಯಾಗುಳಿದ
ಮುದುಕಿಯೆದೆ ಗುಹೆಯೊಳಗೆ
ಗವ್ವೆನ್ನುವ ಕಾಳಗಪ್ಪಿನ ಮಂಜು
ಟೊಂಗೆ ಟೊಂಗೆಯ ಕೊರಳಲ್ಲಿ
ಘೂಕ ಗಾನ
ಸುಗ್ಗಿಯ ಹಿಗ್ಗಿನಲಿ ನಡೆದಿತ್ತು
ಪ್ರೇತಗಳ ಭೂತಗಳ ರಕ್ತ ಪಾನ
ಸಾವು ನೋವಿನ ಸಂತೆಯಲಿ
ಮುದುಕಿ ಹೊರಟಿದ್ದಾಳೆ
ಹುಡುಕುತ್ತ ಹುಡುಕುತ್ತ
ಶಾಂತಿ ಪಾರಿವಾಳ

# ಶ್ರದ್ಧಾಂಜಲಿ

(ಡಾ. ಅನುಪಮ ನಿರಂಜನ ಅವರ ನೆನಪಿಗೆ)

ಹಿರಿಯಕ್ಕ ಸಿರಿಯಕ್ಕ
ಇಂದೇಕೆ ಅವನ ಒಳಗಾಗಿಸಿದೆ?
ಹತ್ತಾರು ವರುಷಗಳು
ಹೆಜ್ಜೆ ಕದಲದೆ ಕಟ್ಟಿ ಹಾಕಿದ್ದೆ
ಮೆಟ್ಟಿ ಹೊರಗೆಲ್ಲೊ ನಿಲ್ಲಿಸಿದ್ದೆ
ಸಾಕಾಯಿತೇ ನಕ್ಕ
ಇಷ್ಟು ಬೇಗದಲಿ ನಮ್ಮನಗಲಿ
ಸಾಗಿ ನಡೆದು ಬಿಟ್ಟೆ ಬಂದವನ ಹಿಂದೆ

ನಿನ್ನ ಹೆಜ್ಜೆಗಳ ನಿಶಾನೆಯೇರಿ
ನಡೆದಂತೆ ಹಿಂದೆ
ಬೆರಗು ದಿಗ್ಭ್ರಮೆ ಬದುಕು
ಮುಗುಳೊಡೆದ ಕ್ಷಣಗಳಲೆ
ಮೂರು ಲೋಕದ ಕನಸು
ಕೈ ಚಾಚಿದರೆ ಬೇಕೆಂದೆ
ನಕ್ಷತ್ರ ಹೂಗಳಷ್ಟೇ ಅಲ್ಲ
ಚಂದ್ರ ನಂದಾ ದೀಪ
ಬೆಟ್ಟದೆದೆ ಛಲದಲ್ಲಿ
ರಟ್ಟೆಯಾ ಬಲದಲ್ಲಿ
ಬೇರು ನೆಲಕಿದ್ದರೂ
ಬಯಕೆ ಬಳ್ಳಿಯನೆತ್ತಿ
ಮುಗಿಲಲ್ಲಿ ಅಲರಿಸಿದೆ
ಸುಡುವ ಬೆಂಕಿಯ ನಡುವೆ

ಬಾಡದೆಯೆ ಕುಸುಮಿಸಿದೆ
ಅವಿತದನಿಗಳ ಜಾಡಿನಲಿ
ಮುಂದೆ ನಡೆದೆ
ಮುಚ್ಚಿ ಜಡಿದ ರಸ್ತೆಗಳಲ್ಲೂ
ಇಣುಕಿ ಹದಮಣ್ಣು ಮೆದು ಮಣ್ಣು
ಕಂಡಲ್ಲಿ ಕೆತ್ತಿ ಬಿಡಿಸಿದೆ
ಪಳಿಯುಳಿಕೆಗಳ ಚಿತ್ತಾರ
ಅಡುಗೆ ಮನೆ ಅಂತಃಪುರದ
ಸರಳುಗಳ ಸಂದುಗಳಲ್ಲಿ
ಕಟ್ಟಿದ ಕೊಳೆಗೆ ಹೇಸರಿಸಿ ಹೇವರಿಸಿ
ಬಯಲತಾಜಾಗಾಳಿ ತಂಗಿಯರಿಗೆ
ಬರಲೆಂದು ಇರಲೆಂದು
ಕತೆ ಕಟ್ಟಿದೆ ಮನ ಮುಟ್ಟಿದೆ
ಸ್ಮೃತಿಯ ಗೋರಿಗಳಲ್ಲಿ
ಹಿಮದ ಹೂವಾಗುಳಿಯದೆ
ಅರಳುತ್ತ ಬೆಳೆಯುತ್ತ
ಸಾಹಿತ್ಯ ಸೌಗಂಧಿಕೆಯ
ಗಂಧ ಮಂಜರಿಗಳನು
ಹಂದರದಿ ಹಬ್ಬಿಸಿದೆ
ಹೆಜ್ಜೆಗಳಿಗೂ ಹೆದರಿ
ನಿರಾಸೆಯು ಕಾರ್ಮೋಡಗಳನ್ನು
ತುಂಬಿಕೊಂಡವರ
ಕೊಳೆಗೇರಿ ಕೊಂಪೆಗಳಲ್ಲಿ
ಮಿಡುಕುವ ಭಾವದೆಳೆಗಳ
ನೆಳೆದೇ ಕಲೆಯ ಬಲೆಗಳ ಹೆಣೆದೆ
'ಸ್ತ್ರೀ ಮುಕ್ತಿ, ಸಮಪಾಲು ಸಮಬಾಳು
ಘೋಷದನುರಣನದಲಿ
ಅಪ್ಪಳಿಸಿ ಕೇಳಿದ್ದು ನಿನ್ನ ದನಿ ಮೊಳಗು
ಹೆರುವ ಹೊರುವ ದುಡಿವ
ಗಡಿಯಾರದ ಮುಳ್ಳುಗಳ ಜೊತೆ
ಗಾಣ ಸುತ್ತುವ ನಮ್ಮ ಗುಲಾಮತನದ

ಸಂಕೋಲೆಗಳೆಸೆದು
ಅಳಿಸಲಾಗದ ಹೆಜ್ಜೆ ಬೇರುಗಳ ನೆಟ್ಟೆ
ನಿನ್ನ ಬದುಕಿನ ಹಕ್ಕಿ ಮುಡಿ ತುಂಬ
ಹಾರ ತುರಾಯಿ ಕೀರ್ತಿ ಪ್ರಶಸ್ತಿಗಳ
ಬಣ್ಣ ಗರಿಗಳ ಮುಡಿಸಿ ತೊಡಿಸಿ
ನೀನೊಂದು ಕತೆಯಾದೆ
ಸಾವಿನ ಸೆಣಸಾಟದಲ್ಲಿ ಸೋತರೂ
ಸೋಲದ ಮಹಾಕಾವ್ಯವಾದೆ
ನಿನ್ನ ತಂಗಿಯರ ಹತಾಶೆ ಗೂಡುಗಳಲ್ಲಿ
ನಂದದುರಿವ ನಂದಾದೀಪವಾದೆ

## ಸಾಮರಸ್ಯದ ಚಿಂತೆಯಲ್ಲಿ

ಸರಸ ಜನನ ವಿರಸ ಮರಣ
ಸಮರಸವೇ ಜೀವನಾ
ಗೋರಿಯಾಯ್ತು ಭಾವನಾ
ಮುರಿದ ಮಗಿಲು
ಸಿಡಿದ ಕಡಲು
ಮುತ್ತಿ ಮುಸುಕಿದ ನಕ್ಷತ್ರ ಲೋಕದಲ್ಲಿ
ಉರಿದೊಡೆದ ಕ್ರಾಂತಿ ಗೀತೆ
ನಿದ್ದೆಗೆ ಬಿದ್ದ ಕೃಷ್ಣನೆದ್ದು
ಹಾಡಲಿಲ್ಲ ಶಾಂತಿ ಗೀತೆ
ನಕ್ಕು ನಲಿದು ಸ್ನೇಹಗಣಿತದಲಿ
ಹೆಣೆದಿದ್ದ ಸಾವಿರಾರು
ಹೂ ಬಣ್ಣಗಳೇನಾದುವೋ!
ರೇಶಿಮೆಯ ಮೆದುವೆದೆಯು
ಕುದಿವ ಕುಲುಮೆ
ಮರಳು ಗಾಡಾಯ್ತಿಲ್ಲಿ ನಲುಮೆ ಒಲುಮೆ
ಭಾವ ಬಿಸುಪನು ಅಗಿವ
ಸಾವು ನುಂಜಿನ ಬೆಟ್ಟ
ಅಡ್ಡಗೋಡೆಗಳೆದ್ದು ಎದೆ ಮೀರಿ ಬೆಳೆದು
ಆಪ್ತತೆಯ ಕೊರಳಿರಿದು
ಕನಸುಗೊಂಡು ಕಟ್ಟಿದ್ದ
ರಾಮರಾಜ್ಯದೆದೆಯಾಳದಿಂದ
ಹೊಮ್ಮಿ ಹೊಗರೆದ್ದಿದೆ
ಸಾವು ಸೂತಕ ಗಂಧ
ನಗುವ ನಂದನಕಿಷ್ಟು ಕಿಚ್ಚು ಹಚ್ಚಿ
ಖಾಂಡವದ ಕತೆಗಳನು

ಮತ್ತೆ ರಚಿಸಿ
ವ್ಯಕ್ತಿಯ ಶಕ್ತಿ ಶೂಲವಾಗಿಸಿ
ಚಪ್ಪಾಳೆ ಮದ್ದಳೆಗಳ ಹಿಮ್ಮೇಳಕ್ಕೆ
ಹಿರಿಹಿರಿದು ಹಿಗ್ಗುವ ಸ್ವಾರ್ಥ ರಾಕ್ಷಸ ನೆರಳು
ಯಾವ ಟೊಂಗೆಯ ಕೆಳಗೆ
ಹೇಳು ಕನಸೇ!
ಕೋಟಿ ಎದೆಗುಡಿಗಳಲಿ
ಉರಿವ ದೀಪಗಳೆಷ್ಟೋ
ನಂದಿ ನರಕವಾಯಿತು ಬಾಳು
ಸಾವು ಸುತ್ತಿಗೆಯೇಟು
ಮಸಣ ಮಹಾಸಾಮ್ರಾಜ್ಯ
ಕೋಗಿಲೆಯ ದನಿ ಇಲ್ಲ
ದನಿಯಲ್ಲಿ ಇಂಪಿಲ್ಲ
ಹೆಜ್ಜೆಯಲಿಗತಿ ಇಲ್ಲ
ಗತಿಗೆ ಸ್ವರ ಸಂಗತಿಯಿಲ್ಲ
ಯಮುನೆಯಾಯ್ತು ಕಾಲಕೂಟ
ತುಳಸಿಯೆಲ್ಲ ಮುಳ್ಳುಕಂಟಿ
ಕೃಷ್ಣ ಕೊಳಲದು ಕಹಳೆಯಾಯ್ತು
ಖಡ್ಗಖಣಿಲು ಘಾತವಾಯ್ತು
ದ್ವೇಷಹೊತ್ತಿ ಸ್ನೇಹಬತ್ತಿ
ಅಮ್ಮನೆದೆಗೆ ನೂರು ಚೂರಿ
ಕೆಂಪು ಕೆಸರು ಬಾನದಾರಿ
ಬೆಳ್ಳಿ ಬೆಳಕು ಮಿಂಚುಚಳಕು
ಕನಸುಕೈಗೂ ಸೊನ್ನೆಯಾಗಿ
ಮರಳು ಗಾಡೆ ಮುಂದೆ ಇರಲು
ಮಲ್ಲೆ ಕಂಪು ಎಲ್ಲಿದೆ?
ಭಾವಬೆಸುಗೆಯಾಸೆ ಹೊತ್ತ
ಕವಿತೆಗೆಲ್ಲಿ ಗೆಲುವಿದೆ?

# ಕಾಡದಿರು

ಕಾಡದಿರು ಮನದನ್ನ
ಭಾವಶೂನ್ಯದ ಬದುಕು
ಬಣ್ಣಗಳು ಕಳೆದು
ಮೌನರಾಗ – ವಿರಾಗದಲಿ
ನಿಂತ ಬಾಹುಬಲಿ ನಾನು

ಎಂದೆಂದೊ ಕೊಟ್ಟ
ಮುತ್ತುಗಳ ಮತ್ತು ಸೋರಿ
ಕವಿದ ಕನಸುಗಳು ಜಾರಿ
ಸವಿಯುಳಿದು ವಿಷವುಳಿದು
ಸಾವಿನಂಚಿಗೆ ಸರಿದ ಸಂಜೆ ನಾನು

ಮೈಯರಳಿ ಮನವರಳಿ
ಕೊಂಬೆ ಕೊಂಬೆಯ ತುಂಬಿ ಬಂದ
ವಸಂತನಿಗೀಗ ಶಿಶಿರ ಪ್ರಾಯ
ಹೇಳಿ ಬಿಟ್ಟಿದ್ದಾನೆಂದೊ ವಿದಾಯ
ಗ್ರೀಷ್ಮ ಸ್ನೇಹ ಬಯಕೆಯಲಿ ನಿಂತ
ಹಿಮದ ಬೊಂಬೆ ನಾನು

ಸದ್ದಡಗಿ ಶವವಾಗಿ
ಅರ್ಥಕಳೆದ ವ್ಯರ್ಥ ಕವಿತೆಯಾಗಿ
ಗಂಧ ಕಳೆದ ಮಂದಾರ ನಾನಾಗಿ
ನನ್ನಲ್ಲೇ ನಾ ಕರಗಿ ನಾಸ್ತಿಯಾಗುವ
ತತ್ವವೇ ನಾನು!
ಬಯಸಿ ಬರಲೇನುಂಟು

ಕೊಡಲು ಮನದನ್ನ?
ಕೊಡಲಿಷ್ಟೆ ಉಳಿದಿದೆ
ಅಸ್ವಸ್ಥ ಮನಸಿದೆ
ನೋವು ನರಳಾಟಗಳ
ನೈವೇದ್ಯವಿಲ್ಲಿದೆ

## ನಾ ಬರುವ ದಾರಿಯಲಿ

ಸದ್ದಡಗಿ ಸತ್ತ ಹಗಲಿನಬ್ಬರ ಬೊಬ್ಬೆ
ಸಂಜೆ ತಂಪಿನ ಕಂಪು
ಬುವಿಯ ಪರಿವರಣ
ಗಾಳಿಯಲೆಯಲೆಯೊಳಗೆ
ದಿಗ್ವಿಜಯದುನ್ಮಾದ
–ಗೀತದನುರಣನ

ಹೆಜ್ಜೆ ಹೆಜ್ಜೆಯೊಳಗೊಂದೊಂದು
ಹೂವರಳಿ ತೇಲುವ ಕನಸು
ಗಾಳಿ ಕುದುರೆಯನೇರಿ
ವೈಹಾಳಿಗೆಳೆಸಿತು ಮನಸು
ಬಾಡು ಮುಖಗಳ ಹಿಂದೆ
ಮುಗ್ಧ ಮುದಗಳ ಕೇಕೆ

ಚಿಕ್ಕಿ ಚಂದ್ರರ ಬೆಳಕು
ನೂರು ಕಥೆಗಳ ಥಳಕು
ಮುತ್ತಿ ಮುಸುಕಿದ
ಕರಿಯ ಸೆರಗಿನ ತುಂಬ
ಮಾತು ಮೀರಿದ ಗುಟ್ಟುಗಳ
ಬೆಚ್ಚನೆಯ ಹಿತ

ನಡೆದಂತೆ ನಡುವೆ
ಅರಿಯದ ಮೂಲೆಗಳಿಂದ
ಜಗ್ಗನೆ ಸಿಡಿದು ಬಿಚ್ಚಿಕೊಳ್ಳುವ
ಕಿರಣಗಳು ಕೈ ಬೀಸಿ ಕರೆಯುತ್ತವೆ

‘ನಾಳೆ’ ಚಿಂತೆಗಳಿಂದ
ಮಂದಾರ ಮಕರಂದ ಲೋಕಕ್ಕೆ
ನವ ಜೀವ ಭಾವಕ್ಕೆ
ನವ ಶೃತಿಯ ರಾಗಕ್ಕೆ
‘ಬಾ ಬಾರ ಬಾರೆಂದು
ಸನ್ನೆಯಲಿ ಉಲಿಯುತ್ತವೆ

# ವೃತ್ತದೊಳಗೆ

ಕಿಟಕಿ ಬಾಗಿಲಿಲ್ಲದ ಚಕ್ರ ವೃತ್ತದ ಒಳಗೆ
ಚಡಪಡಿಸಿ ಏಕಾಕಿ ಬಂದಿ ನಾನು
ಕತ್ತಲುಬ್ಬರದೊಳಗೆ ಕರಗುವ ಬೆಳಕು
ಕಣ್ಣಿಗಷ್ಟು ಕತ್ತಲು ಮೆತ್ತಿ
ಅಂಗುಲಂಗುಲ ಅಳತೆ ಹಾದಿಗಳನ್ನೂ
ತಡಕುವ ತುಡಿತಗಳ ತಿವಿತ
ವೃತ್ತದ ಗೋಡೆಗಷ್ಟು ಕಿವಿಗೊಟ್ಟು
ಅಸ್ಪಷ್ಟ ಹೆಜ್ಜೆಗಳ ಲೆಕ್ಕವಿಡುತ್ತಾಽಽ
ಕಣ್ಣು ಬಿಟ್ಟಾಗ ಕಂಡದ್ದು
ನನ್ನ ಬಳಸಿದ ನಿರ್ವಾತ ವೃತ್ತ
ತೆವಳುತ್ತಿದ್ದ ನಾನು ಬೆಳೆದು
ಎತ್ತರವಾದರೆ ಈ ವೃತ್ತದ
ಸುತ್ತಳತೆ ಮೀರಿ ಸಿಡಿವ ನಂಬಿಕೆಯ
ಕೊಕ್ಕೆಗೆ ಜೋತು ಬಿದ್ದೆ
ತೆವಳಿದೆ
ಅಂಬೆಗಾಲಿಟ್ಟೆ
ಅಂಬೆಗಾಲನು ಬಿಟ್ಟು
ಕಾಲ ಮೇಲೆ ನಿಂತು ನಡೆದೆ

ಕಂಡ ಕಂಡದ್ದೆಲ್ಲ ಉಂಡ
ಶೈಶವ – ಬಾಲ್ಯಗಳು ಜಾರಿ
ಮಲಗಿ – ಎದ್ದ
ನನ್ನೊಳಗಿಂದ ಹೊರಟ ಹೊಗರು
ಸ್ಮೃತಿಯ ಮರೆಸಿತ್ತು
ಕಣ್ಣು ನಾಲಗೆದೇಹ

ಅಸ್ವಸ್ಥ ಸ್ಥಿತಿಯಲ್ಲು
ದೂಡಿ ನಡೆಸಿತು ಮುಂದೆ
ಅಗೆದ ಆಕಾಂಕ್ಷೆಗಳ ಸಂಭೋಗಕ್ಕೆ
ತೊದಲಿ ಸಾಗಿದ ಹೆಜ್ಜೆಗೆ
ರೆಕ್ಕೆ ಮೂಡಿ ಹಾರ ಬಯಸಿ
ಹಾರಿ ಹಾರಿ ಹಾಽರಿ – ಏರಿ

ವೃತ್ತದೆಲ್ಲೆಯ ಸುತ್ತ ಸುತ್ತಿ–
ಸುತ್ತಿ ಗಿರಕಿ ಹೊಡೆದು
ಹೊರಟ ಹಾದಿಗೇ ಹೊರಳಿ
ಸಿಡಿಮಿಡಿಸಿ
ವೃತ್ತದೊಂದಿಗೇ ಉರುಳುರುಳಿ
ಬಂಡೆಗಪ್ಪಳಿಸಿ
ತಪ್ಪಿಸಿಕೊಳ್ಳ ಬಯಸಿದರೆ
ನಾನೆ ತಲೆ ಕೆಳಗು – ಕೆಳಗೂಽ

ಮುಂದೆ ಕದಲದ ವೃತ್ತ
ನಿಟ್ಟುಸಿರಿನಿರಿತ
ಹಲ್ಲಿಯಾಗಿ ಅಂಟಿಕೊಂಡ ದೇಹಕ್ಕೆ
ತುರುಚೆ ಗಿಡದ ಸೋಂಕು
ಕೈ ಬಿಟ್ಟರೆ ಸಾಕು ಸಾವಿರ ಹೋಳು !
ತೋಳಿನೊಂದಾಸರೆಯ ಆಸೆಯಲಿ
ಅರಚಿದೆ
ಸಿಡಿಲಾಗಿ ಸೀಳಿದೆ
ಅಸಹಾಯಕತೆಯ ಆಕ್ರಮಣಕ್ಕೆ
ಕಂಬನಿಯ ಜಲಪಾತವೂ
ಬಾವಿಯಾಳದ ಬೆಂಕಿಗೆ
ಕುದಿದು ಆವಿಯಾಯ್ತು
ಅಂಟಿಕೊಂಡ ತೊಟ್ಟಲ್ಲೇ ಕಾಯಿ ಹಣ್ಣು
ಇದ್ದಲ್ಲೇ ಬಿದ್ದು ಬೀಗುವ ಗೊಬ್ಬರ
ನನ್ನ ಬಳಸಿದ ವೃತ್ತವೇ
ನನ್ನ ಸಮಾಧಿಗೆ ಶ್ರೀಕಾರ

## ನಗರದಲ್ಲಿ ಬೆಳಗು

ತಾರ ಸಪ್ತಮದಲ್ಲಿ
ಸ್ಯೆರನ್ನು ಕರೆದಾಗ
ಬಿಸಿ ಕಾಫಿ ಕಪ್ಪುಗಳು
ಟಣಟಣಿಸಿ ಕುಣಿದಾಗ
ಹೋಟಲುಗಳ ಹೊಸ್ತಿಲಲ್ಲಿ
ಸರದಿ ಸಾಲಿನ ಗಿರಾಕಿಗಳು
ಹನುಮ ಬಾಲವಾದಾಗ
ನಗರದಲಿ ಬೆಳಗಾಗುವುದು

ಕಪ್ಪು ಕಂಬಳಿಯೊಳಗಿಂದ
ಹೊರಗೆ ನುಸುಳುವ ಸೂರ್ಯ
ಮೂಡಲದ ಮಡುವಿನಲಿ
ಮುಳುಗೆದ್ದು ಮೈ ತೊಳೆದು
ಮೊದ್ದು ನಿದ್ದೆಯಲಿ ಮಲಗೆದ್ದ
ಮಂಪರಲಿ ಮೈಮರೆತ
ಜಗವ ತಟ್ಟಿ ಜೀವರಸ
ಸಿಂಪಡಿಸಿದಾಗ
ನಗರದಲಿ ಬೆಳಗಾಗುವುದು

ರಸ್ತೆಗಳ ಮೈ ತುಂಬ
ಬಸ್ಸು ಆಟೋ ಲಾರಿ ಸೈಕಲ್ಲು ಮೋಟಾರು
ಸರಿದಾಡಿ ಹರಿದಾಡಿ
ಹಾರನ್ನು ಸ್ಯೆರನ್ನು
ಸಪ್ಪುಳದ ತಾಳಕ್ಕೆ
ದಿನದ ಬದುಕಿನ ಹಾಡು

ಮೂಡಿ ನುಡಿಯುವುದಾಗ
ನಗರದಲಿ ಬೆಳಗಾಗುವುದು
ಆತುರವೆ ಗಡಿಬಿಡಿಯಾಗಿ
ಸ್ಫುಟ್ನಿಕ್ಕು ವೇಗದಲ್ಲಿ
ಹೆಜ್ಜೆಗಳು ಸಾಗಿದಾಗ
ನಗರ ಬೆಳಗಿನಲೊಂದು
ಕನಸೂ ಕೆರಳುವುದಿಲ್ಲ
ಅರಳುವುದಿಲ್ಲ
ದುಂಬಿಯಪ್ಪುಗೆಯಾಟದ
ಸೊಗಸುಗಳು
ಬಿರಿದ ಬಣ್ಣಗಳೆದೆಯ
ಕಂಪುಗಳು
ಬಳ್ಳಿ ಗಿಡ ಮುಡಿಯಲ್ಲಿ
ಮೊಗ್ಗಿಟ್ಟ ಹಿಗ್ಗುಗಳು
ಹಸಿರ ಮೈತುಂಬ ಮೊಳೆತ
ಸೊಂಪುಗಳು
ದಡಗುಟ್ಟಿ ದುಡಿವ
ಯಂತ್ರ ಜೀವನ ಮಧ್ಯೆ
ಬರಿಯ ಕಾಡಬೆಳ್ದಿಂಗಳು
ಹಾಳು ಹಂಪೆಯ ಕಂಗಳು

ಹೆಜ್ಜೆಯೋಟದ ರಭಸ
ನಾಳೆ ನಾಳೆಯ ಚಿಂತೆ
ಗಲಿಬಿಲಿಯ ಬರಿ ಸಂತೆ
ಬೆಟ್ಟದಲೆಗಳ ನಡುವೆ
ದಂಡೆ ಕಡಲನು ಮುಟ್ಟಿ
ನೀಲಿ ಮುಗಿಲೊಳಗಿರುವ
ಚಕ್ರಾರ ಕನಸುಗಳ
ಹಿಡಿದೆಳೆದು ಭೂಮಿಯಲಿ
ನೆಡಲು ನಡೆದಿರುವಾಗ
ನೆನ್ನೆಯಂತೆಯೆ ಇಂದು

ನಗರದಲಿ ಬೆಳಗು
ನೆನ್ನೆ ನಾಳೆಗಳೆಲ್ಲ
ಇಂದಿನೊಡಲಿನ ರೂಪ
ಒಳಗಿನಾಳದಲೆಲ್ಲ
ಅನ್ನ ಹಣದುರಿ ತಾಪ
ಭಾವ ಸಲಿಲದ ಗಂಗೆ ಬತ್ತಿದಾಗ
ಶೂನ್ಯದೆದೆ ಬಾನು ಬಿಚ್ಚಿದಾಗ
'ನಾನು' 'ನನ್ನದು' ಎಂಬ
ಹಮ್ಮು ಬಲೆಯಲಿ ನನ್ನ ನಾನೇ ಮರೆತಾಗ
ನನ್ನ ನಗರದಲಿ ಬೆಳಗಾಗುವುದು

## ಶಕುಂತಲೆಯ ಸ್ವಗತ

ಅಮ್ಮ ಅಪ್ಸರೆಯಾದರೇನಂತೆ
ಬದುಕುವುದನ್ನು ಕಲಿಸಲಿಲ್ಲ
ಕಲಿಯುವ ಬುದ್ಧಿಯನ್ನೂ ಉಳಿಸಲಿಲ್ಲ

ಸಣ್ಣ ದುಂಬಿಗೆ ಸಿಲುಕದವಳು
ರಾಜದುಂಬಿಯ ಬಲೆಗೆ ಬಿದ್ದದ್ದು
ಅರ್ಥವಾಗುವುದಿಲ್ಲ
ನನ್ನ ಹರಣವಾದ ಹರಿಣ
ಕರುಳ ಬಳ್ಳಿಯಂತೆ ಬೆಸೆದುಕೊಂಡಿದ್ದ
ಬಳ್ಳಿ 'ವನ ಜ್ಯೋತ್ಸ್ನೆ'ಯ ಪ್ರೀತಿ
ಕಣ್ಣಾಗಿ ಕಾಯುವ ಜೀವ ಸಖಿಯರ ಸ್ನೇಹ
ಗಳ ಮರೆತೇಕೆ
ಈಮುಳ್ಳಿಗೇ ಮುತ್ತು ಕೊಟ್ಟೆ?

ಥಳಕು ಬೆಳಕಿನ ಬೇಟೆಗಾರ
ಕಾಣದಂತೆ ಮರೆಸಿದ್ದ ಬಿಲ್ಲು ಬತ್ತಳಿಕೆ ಬಾಣಗಳ
ಮರೆತು ಪ್ರೀತಿ ಸೊದೆ ಸವಿಗೊಲಿದು
ಜಾರಿ ಬಿದ್ದೆ
ಬಳ್ಳಿ ಹೂವು ಬಾನು ಕಾನು
ಮುಗಿಲು ಹಗಲು ಗಿರಿಯು ದರಿಯು
ಚಿಕ್ಕಿ ಚಂದ್ರ ಬೆಳಕು ಆಟ
ಆಟ – ಅಂತ
ಕಾಮ ಯಜ್ಞಕ್ಕೆ 'ಹವಿ'ಯಾದೆ
ಹೂವಿನ ನೋವಿಗೆ ನರಳಿದೆ ನುಲಿದೆ
ಜೀವ ಹಿಂಸೆಗೆ ಸೋತು ಸೊರಗಿದೆ

ಜೀವ ಜೀವಕ್ಕೂ ಸ್ನೇಹ ಕೊಟ್ಟವಳು
ಸ್ನೇಹವಂಚನೆಗೆ ಬಲಿಯಾದೆ
ನಗರ ನಾಗರಿಕ ನಯವಂಚನೆಯ
ಗಂಧವಾದರೂ ಸೋಂಕಲಿಲ್ಲ
ಕಣ್ಣನೋಟಗಳು ಪ್ರೇಮ ಬೇಟಗಳು
ಕಥೆಯಗುಟ್ಟನು ಹೇಳಲಿಲ್ಲ
ಪ್ರಾಯದಾಸೆಗಳ ಬಿಗಿದು ಭರಣಿಯಲಿ
ಸರ್ಪಕಾವಲಿನಲ್ಲಿ ಕಾದು ನಿಂತವಳು
ಮೋಹ ಮಾಟಗಳ ಹುಚ್ಚು ರಭಸಕೆ
ಇದ್ದುದೆಲ್ಲವನು ಚೆಲ್ಲಿ ಕೊಟ್ಟೆ
ಉಕ್ಕು ಪ್ರಾಯದ ಸೊಂಪು ಸುಗ್ಗಿಯನು
ನೆಚ್ಚಿ ಮೆಚ್ಚಿ ನಾ ಮೇಯ ಬಿಟ್ಟೆ

ಜನುಮಜನುಮದ ನಂಟು ಗಂಟೆಂದು
ಬೀಗಿ ಬೊಗಳೆಯಾಡಿದ್ದನ್ನು
ನಂಬಿ ನನ್ನಂತರಂಗವನೆ ತೆರೆದು ಕೊಟ್ಟೆ
ಕಾವಲಿಲ್ಲದ ಪ್ರಾಯ ಕೋಟೆಗೆ ಲಗ್ಗೆ ಇಟ್ಟಾಗಲೂ
ಕಣ್ವ ಪ್ರೀತಿಯ ಕವಚ ನೆನೆಯಲಿಲ್ಲ

ಉಕ್ಕು ಇಳಿದು ಸೊಕ್ಕು ಮುರಿದು
ಮೊದಲ ಮಳೆಗೆ ಹದಗೊಂಡು
ಪುಲಕರಿಸಿದ ಎದೆಯೊಳಗೆ
ನೆನಪು ಮುಳ್ಳೊಂದು ಚಿಟುಕಾಡಿತು
ವನದೇವಿ ಭೂದೇವಿ
ಬುವಿ ಬಾನು ನಕ್ಷತ್ರ ಮುಗಿಲ ಸಾಲು –
ಪ್ರಣಯ ಪರಿಣಯಕಿರಲು ಸಾಕ್ಷಿ
ಅರಸನಂತಃಪುರದಿ
ಮಾನ ಭಂಗಿತಳಾಗಿ
ನಿಂತರೂ ನಿಲಲಿಲ್ಲ ಸಾಕ್ಷಿ
ರಾಣಿಯಾಗುವ ಕನಸಿನಲಿ
ಕತೆ ಕಟ್ಟಿದ ಕಣ್ಣ ಕುಡಿ ಮಿಂಚುಗಳ

ಬಲೆ ಬೀಸಿ ಸೆಳೆವವಳು ಮಾಯಾವಿನಿ
ನಾ ಕಂಡೆನಿಲ್ಲವಳ ವಂಚಕೀ ವನಿತೆ'
– ದೂರಿ ಧರ್ಮದ ಕೊಲೆಗಾರನವನು
ನುಡಿಯ ಖಡ್ಗದಲಿರಿದು
ನನ್ನಾಸೆ ರೆಕ್ಕೆಯ ಕಡಿದು
ನನ್ನ ಬದುಕಿನ ಸೂರ್ಯನ
ಕಣ್ಣನ್ನೇ ತಿವಿದುಕೊಂದ
ನಿಟ್ಟು ಸಿರಿಗಿಲ್ಲ ಎಲ್ಲೆ
ನಾನನಾಥೆ ನನಗಾರು ದಿಕ್ಕು?
ಚೀರುವಂತರ್ದನಿಗೆ
ಸೋಲಬಾರದು ಸಾಯಬಾರದು

ವಿರಹ ಬೇಗೆಯಲಿ ಬೇಯಲಾಗದೆ
ಕಮಲ ತಲ್ಪದಲಿ ಮಲಗಿ ಶ್ರೀಗಂಧದಲಿ ನಲುಗಿ
ಹಿಮದ ಸರಸಿಯಲಿ ಮುಳುಗೇಳುತ್ತಿದ್ದ
ಮುಗ್ಧಶಕುಂತಲೆಯಲ್ಲವೀಗ
ನನ್ನೊಳಗೆ ಕುಡಿಯೊಡೆದ
ಕುಲದೀಪಕನಿಗೆ ಅವನದೇ ಹೆಸರಿಟ್ಟು
ನನ್ನದೇ ಉಸಿರು ಕೊಟ್ಟು
ಅವನ ಅಸಲೀತನದ ಬಣ್ಣ
ಬಯಲು ಮಾಡುತ್ತೇನೆ
ಅವನೆದೆಯ ತುಂಬ ನನ್ನ
ಪ್ರತಿ ಬಿಂಬಗಳ ಕೆತ್ತುತ್ತೇನೆ

# ಕುಬ್ಜೆ

ಮಣ್ಣು ಮುಸುಕಿನ ಮೂಲೆ
ತೇಲಿ ತೆವಳುವ ಹುಳು
ಬೆಳ್ಳಿ ಬಂಗಾರ ಕನಸುಗಳ
ಬಳ್ಳಿ ಮೋಡ
ನೆಲದ ಪದರದಾಚೆಗೆ
ಹಬ್ಬಿರುವ ಕಿಟಕಿಯಾಕಾಶ
ಏರಲಿರುವುದೊಂದೇ ಬಯಕೆ ಏಣಿ...

ಕೋಟಿ ಹುಟ್ಟನು ದಾಟಿ
ಬೆನ್ನಲ್ಲೇ ಬಂದ ನಿಟ್ಟಿಸಿರು
ಹೊಳೆವ ಸೂರ್ಯನ ಮೋರೆ
ಪರಚಿ ಬತ್ತಲಾದ ಕತ್ತಲಿನ
ಬಂದಿಯಾದೆ

ಕೀವು ಗಟ್ಟಿದ ಬಾವು
ಕುತಕುತನೆ ಕುದಿವ ಮನಸು
ಬೆನ್ನಲ್ಲೇ ಗುದ್ದುವ ಭೂತ
ಒತ್ತಿ ಹಿಡಿದಿದೆ ಉಸಿರು
ಚಕ್ರಸಾಗದು ಮುಂದೆ
ಬರಿಯ ಕೆಸರು
ಉಪ್ಪು ನೀರಿನ ಕುಂಟೆ
ಕಡಲಾಗಿ ಕೊಚ್ಚಿದೆ
ನಗೆಯ ಹಡಗು
ಈಜಿ ದಡ ಸೇರಬೇಕು
ಸೋತ ಕೈಕಾಲುಗಳ ಬಡಿದು

ಬಡಿದು ದಡ ಸೇರುವ
ಕನಸಿಗೂ ಭೀತಿ ನೆರಳು
ಉರಿಯನುಂಡರು ಸುಡದೆ
ಉಸಿರಾಟ ಲೀಲೆಯಲಿ
ಉಳಿದಿತ್ತು ಹೇಗೋ
ಕರುಳ ಬಳ್ಳಿ
ಕೊರೆವ ಆಸೆಯ ಕೀಟ
ಅಂಗುಲಂಗುಲ ವಿಳಿದು
ಮಣ್ಣ ಪದರವು ತಪ್ಪಿ
ಕೆಳಗೆ ಬಿತ್ತು

ಗಗನ ಚುಂಬನಕಾಗಿ
ಸ್ಪರ್ಧೆಯಾಟದಲೀಗ
ದೊರತದ್ದು ಬಹುಮಾನ
ಗಾಳಿ ಮಣ್ಣು
ಅಸ್ವಸ್ಥ ಚಿತ್ತ
ಹುಣ್ಣ ಕಣ್ಣಿನ ಮೈಯ್ಯಿ
ಹೆಜ್ಜೆ ಇಡಲೆಡೆಯಿಲ್ಲ
ಗಾಳಿ ಹಡಗಿನ ಪಯಣ
ಅಂಡಲೆವದಣಿವು
ಅಂಕಿಯಿಲ್ಲದ ಸೊನ್ನೆ
ಇಂದಿಲ್ಲ ಮುಂದಿಲ್ಲ
ಇಲ್ಲ ನೆನ್ನೆ

ಹುಟ್ಟು ಹಾಕಲು ಬೇಕು
ತಾಕತ್ತು ಲೇಹ
ಶಾಪಗ್ರಸ್ತ ಕುಬ್ಜೆ
ಬೆನ್ನಲೆದ್ದಿದೆ ಹುತ್ತ
ಸಾಲದ್ದಕ್ಕೆ ಜೊತೆಗೆ ಗಂಧ
ತೇಯುವ ಕರ್ಮ
ಗಂಧ ತೇಯುತ್ತ ತೇಯುತ್ತಲೇ

ಬಾಳಿನಲಿ ಗಂಧ ಕ್ಷಾಮ
ಕೃಷ್ಣ ಭರವಸೆಯೊಂದೆ ಊರುಗೋಲು

ಯುಗ ಯುಗದ ಒಡಲಲ್ಲಿ
ಬೆರೆತ ನಿಟ್ಟುಸಿರಲ್ಲಿ
ಯಾಚನೆಯ ಮೊರೆಗೆ
ಕರಗಿಕೃಷ್ಣ
ಹೊನಲಾಗಿ – ಬೆಳಕಾಗಿ
ಕರುಣೆಯೇ ಕಡಲಾಗಿ
ಹೆಳವ ಮನದರಮನೆಗೆ
ಒಲಿದು ಬರಲಿ
ಕುಬ್ಜತೆಯ ಕಳೆವುದಕೆ ನಲಿದು ಬರಲಿ

# ನಾನು ಮತ್ತು ಬಸ್ ಸ್ಟಾಪು

ಮಧ್ಯಾಹ್ನದ ಬಿಸಿಲ ಝಳ
ಹೆಜ್ಜೆ ಇಟ್ಟರೆ ಸಾಕು
ಕೆಂಡ ತುಳಿದ ಅನುಭವ
ಎದೆಯೊಳಗೆ ಕೆನ್ನಾಲಗೆಯ ಕುಲುಮೆ
ಗಜಿಬಿಜಿಸಿ ಆತುರದಿ
ಜನ ಸಮುದ್ರವ ದಾಟಿಕೊಂಡು
ಹೇಗೋ ಸೇರಿದೆ ಬಸ್ ಸ್ಟಾಪು
ಒಂದರ ಮೇಲೊಂದು ಬಸ್ಸು
ಸರದಿ ಸಾಲಿನಂತೆ ಸಾಗಿದರೂ
ನನ್ನ ಬಸ್ಸು ಮಾತ್ರ ಬರಲಿಲ್ಲ
ಆದರೂ ಕಾಯಲೇಬೇಕು
ಕಾಯುವ ಬೇಸರಕ್ಕೆ
ಮೈ ಪರಚಿಕೊಳ್ಳುವ ಬಯಕೆ
ಸರ್ಕಾರಾಮಾದಂತೆ ಕಣ್ಣು ತಿರುಗಿಸಿದೆ
ಮನದಲ್ಲೇ ಅಡ್ಡಾಡಿದೆ
ಥಟ್ಟನೊಂದು ಮುಖ ಎದುರಿಗೆ!
'ಹಲೋ... ಇಲ್ಲಿ ನಾನು
ನೆನಪಿಲ್ಲವೇನೇ?
ಹೆಸರು ಕುಂತಿ ನಿನ್ನ ಗೆಳತಿ
ಈಗಲಾದರೂ ನೆನಪಾಯಿತೇ?'
– ಒಂದೇ ಸಮನೆ
ಮಾತಿನ ಜಲಪಾತ!
ನೆನಪಿದ್ದರೂ ನೆನಪಾಗದ ಮುಖ
ನನ್ನುತ್ತರಕ್ಕೆ ಕಾಯದೆಯೇ
ಮಾತು ಮುಗ್ಗರಿಸದೆ

ಮುಂದೆ ಸಾಗಿತ್ತು
ಮದುವೆಯಾಯಿತೇನೆ?
ನಿನ್ನ ಆ ರೋಮಿಯೋ ಏನಾದ?
–ಮುಸಿ ಮುಸಿನಕ್ಕು ಕೀಟಲಿಸಿದಳು
ಮಾತಲ್ಲಿ ಪೋಲಿತನದ ವಾಸನೆ
ಕಣ್ಣುಗಳಲ್ಲಿ ಬಿರಿದಿತ್ತು ತುಂಟನಗೆ
ಮಾತು ಮಾತಾಡುತ್ತಲೇ
ಕೆದರಿದಳು ಕಂತೆ ಪುರಾಣ
ಜುಆಲಜಿ ಕ್ಲಾಸಿಗೆ ಚಕ್ಕರ್ ಹೊಡೆದದ್ದು
ಸಿನಿಮಾಗೆ ಹೋಗಿದ್ದು
ರಾತ್ರಿ ಬಸ್ಸಿಗೆ ಕಾದಿದ್ದಾಗ
ಕಾಲ್ ಗರ್ಲ್ಸ್ ಎಂದು ಕರೆದು
ನಮ್ಮ ರೇಟು ಕೇಳಿದ್ದು
ಕಾಲೇಜಿನ ಕಕ್ಕಸು ಗೋಡೆಗಳ
ಮೇಲೆಲ್ಲ ಹಮೀದಾ ಮತ್ತು
ಐಯ್ಯಾಂಗಾರಿಯ ಮದುವೆ
ಆಹ್ವಾನ ಪತ್ರಿಕೆಗಳನ್ನು ಅಂಟಿಸಿದ್ದು
ಇಂಗ್ಲಿಷ್ ಮೇಷ್ಟರನ್ನು ಉಬ್ಬಿಸಿ ಕುಣಿಸಿದ್ದು
ಪ್ರಿನ್ಸಿಪಾಲರಾದ ಪಂಕಜಾಕ್ಷಿಯ
ಪ್ರಣಯ ಕತೆಗಳನ್ನು ಪ್ರಕಟಿಸಿದ್ದು
ಪರಮೇಶಿಯ ಜೊತೆ ಪರಾರಿಯಾದದ್ದು
ಅಳುವ ಹುಡುಗಿಯ ಆತ್ಮಹತ್ಯೆಯಾದದ್ದು
–ಎಷ್ಟೊಂದು ಸುದ್ದಿಗಳು
ಸುದ್ಧಿಗಳು ಸತ್ಯವಾದರೂ
ತನ್ನ ಸುದ್ಧಿಗಳಲ್ಲಿ ಮಾತ್ರ
ತಾನೆಲ್ಲೋ ಆಳದಲ್ಲಿ ಅಡಗಿದ್ದಳು
ಅಕ್ಷರಕ್ಷರದಲ್ಲಿಯೂ ಬೊಗಳೆತನದ
ವಾಸನೆಯ ಘಾಟುಗಪ್ಪೆಂದು ಹೊರಟಿತ್ತು
ಕಣ್ಣೆತ್ತಿ ಅವಳ ಮೊಗದಲ್ಲಿ ನೆಟ್ಟು ನೋಡಿದೆ
ಅವಳ ನಗುವಿನ ರೇಖೆಯ ಒಳಗೆ
ಕಂಡದ್ದು ಕತ್ತಲೆಯ ಗಂಭೀರ ಪ್ರಪಾತ

ನೆನಪುಗಳ ಗರಿ ಬಿಚ್ಚಿಕೊಂಡು
ನಿಲ್ಲುವಷ್ಟರಲ್ಲಿ ನನ್ನ ಬಸ್ ಬಂತೆನಿಸಿ
ನೋಡದೆಯ ನುಗ್ಗಿದೆ
ನೂಕು ನುಗ್ಗುಲಲಿ ಹೆಗಲ ಮುರಿದುಕೊಂಡು
ಇಳಿದಾಗ
ಬರಿಯ ಕತ್ತಲೆ ಕಾಡು
ದಾರಿಗಳೆ ಇರಲಿಲ್ಲವೆನಿಸಿತು
ಬ್ಲೋಕಳೆದ ಬ್ಲಾಡರಿನಂತೆ
ಹತಾಶಳಾಗಿ
ಗುರುತಿಲ್ಲದ ಬೀದಿಗಳಲ್ಲಿ
ಜನವಿಲ್ಲದ ಜಾಗಗಳಲ್ಲಿ
ರಾಬಿನ್‌ಸನ್ ಕ್ರೂಸೋನಂತೆ
ಒಂಟಿಯಾಗಿ ಒಬ್ಬಂಟಿಯಾಗಿ
ಅಲೆದೆ ಅಂಡಲೆದೆ
ಹಗಲಿಗಾಗಿ ಹೆಗಲಿಗಾಗಿ
ಕಾಯುತ್ತ ಯುಗ ಯುಗಗಳನೇs
ಕಳೆದೆ

## ಅವರೆಲ್ಲ ಹೇಳುತ್ತಾರೆ

ಹೆಣ್ಣಾಗುವುದೆಂದರೇನೆ ಭಯ!
ಅವರೆಲ್ಲ ಹೇಳುತ್ತಾರೆ –
ಅವಳಿಗೆ ತಲೆಯಿಲ್ಲ
ಯೋಚಿಸಲು ಆಗುವುದಿಲ್ಲ
ಮೈಯೊಳಗೆ ಕಸುವಿಲ್ಲ
ದುಡಿಯಲಾಗದ ದಂಡ
ಅದಕ್ಕೆಂದೇ ಅವಳಿಗೊಂದು
ಸಾಮ್ರಾಜ್ಯವನ್ನು ಕಟ್ಟಿಕೊಟ್ಟಿದ್ದಾರೆ
ಅಲ್ಲಿ ಅವಳೇ ಸಾಮ್ರಾಜ್ಞಿ
ಅದೇ ಅವಳ ಅಡುಗೆ ಮನೆ
ಊದು ಕೊಳವೆ ಸೌಟು
ಒಲೆ ಕೊಳದಪ್ಪಲೆ
ಜೀರಿಗೆ ಸಾಸಿವೆ ಡಬ್ಬಗಳ
ಜಗತ್ತಿನ ಒಡನಾಟದಲ್ಲಿ
ಬೆಳಗು ಸಂಜೆ ರಾತ್ರಿಗಳನ್ನು
ಕನವರಿಸುತ್ತ ಬದುಕುವುದೇ
ಅವಳ ಬದುಕು

ಬಿತ್ತಿದ ಬೀಜಕ್ಕೆ ನೆಲವಾಗಿ
ಸುಂದರ ಹೂವುಗಳನ್ನು
ಅರಳಿಸುತ್ತಾ ಹಣ್ಣಾಗಿಸುತ್ತ
ಮತ್ತೆ ಬೀಜ ಮಾಡುತ್ತ
ಹುಟ್ಟುಗಳ ಹುಟ್ಟು ಹಾಕುವ
ಜೀವ ಯಂತ್ರವಾಗಿ
ಮಳೆ ಬಿದ್ದಾಗಲೆಲ್ಲ

ಹದಗೊಳ್ಳುತ್ತಾ ಮೆದುವಾಗುತ್ತ
ಮರಮರಳಿ ಪುಲಕರಿಸುತ್ತ
ಜೀವಿಸುವುದೇ ಅವಳ ಬದುಕು

ಅವರು ಹೇಳುತ್ತಾರೆ –
ಅವಳಿಗೆ ಮಾಡುವುದಕ್ಕೆ ಏನೂ ಇಲ್ಲ
ಮನೆಯೊಳಗಿನ ಕಿಟಕಿಗಳನ್ನು ಎಣಿಸುತ್ತಲೋ
ಕಂಬಗಳ ಸುತ್ತುತ್ತಲೋ
ಅಕ್ಕಪಕ್ಕದಲ್ಲಿ ಹರಟೆ ಕೊಚ್ಚುತ್ತಲೋ
ಸಂಜೆಗೆ ದಣಿದು ಬರುವ
ಗಂಡನನ್ನು ಸಿಂಗಾರವಾಗಿ
ಬರಮಾಡಿಕೊಂಡು ಸತ್ಕರಿಸುತ್ತ
ಬದುಕುವುದೇ ಅವಳ ಬದುಕು

ಅವರು ಹೇಳುತ್ತಾರೆ –
ಅವಳು ಅವರೊಳಗಿನ
ಎಲ್ಲ ಪ್ರಾಣಿಗಳನ್ನು ಪಳಗಿಸಿಕೊಂಡು
ಗರ್ಜಿಸಿದರೂ ಆಕ್ರಮಿಸಿದರೂ
ಎದೆ ಬಗಿದು ಚೀರಿ
ಪರಚಿ ಗಾಸಿಗೊಳಿಸಿದರೂ
ಕಣ್ಣ ಹನಿಸದೆ
ನೋವಿನಲಿ ನರಳದೆ
ತಣ್ಣಗೆ ಉಳಿದು
ಅಳಿಯುವುದೇ ಅವಳ ಬದುಕು

ಅವರು ಹೇಳುತ್ತಾರೆ –
ಅವಳಿಗೆ ಮಾತು ಬರುವುದಿಲ್ಲ
ಏನನ್ನೂ ಪ್ರಶ್ನಿಸುವುದಿಲ್ಲ
ಪ್ರಶ್ನೆಗಳ ಕೊರಳಿರಿದು ಕೊಂಡು
ಸ್ಪಂದಿಸದೆ
ಬೀಳುವ ಉಳಿಯ ಪೆಟ್ಟುಗಳನ್ನು

ಸಹಿಸಿ ತನ್ನದಾಗಿಸಿಕೊಳ್ಳುತ್ತಾ
ಬಂಡೆಗಲ್ಲಿನ ಒಡಲೊಳಗಿಂದ
ಅರಳುವ ಸುಂದರ ಶಿಲ್ಪವಾಗುವುದೇ
ಅವಳ ಬದುಕು

ಅವರು ಹೇಳುತ್ತಾರೆ –
ಅವಳು ಅಸ್ವಸ್ಥವಾಗಿ ಚಡಪಡಿಸುವ
ರಾತ್ರಿಗಳಲ್ಲಿ ಉಕ್ಕು ಪ್ರಾಯದ
ನಗೆಯ ಮಲ್ಲಿಗೆ ಚೆಲ್ಲಿ
ಹೆಪ್ಪುಗಟ್ಟಿದ ಎದೆಯ ನೋವನ್ನು
ಬದಿಗಿರಿಸಿ
ರತಿ ರಹಸ್ಯದ ಗಂಟುಗಳ ಬಿಡಿಸುತ್ತ
ಮಂಚದಲಿ ಜೋಡಿ ಅಂಚೆಯಾಗಿ
ಮಧು ಚಂದ್ರವಾಗಿ
ಸುಖದ ಸವಿಯುಣಿಸುಗಳ
ಉಣಿಸುವುದೇ ಅವಳ ಬದುಕು

ಅವರು ಹೇಳುತ್ತಾರೆ –
ರಾತ್ರಿ ಹಗಲುಗಳಲ್ಲಿ
ಬೆಂಕಿ ಬಿಸಿಲುಗಳಲ್ಲಿ ಬೇಯುತ್ತ
ದುಡಿದುಡಿದು ಕಡೆಗೆ
ತುಟ್ಟಿಯಾದಾಗಲೂ ಸೀಮೆ ಎಣ್ಣೆ
ಆತ್ಮಾಹುತಿಗೆ
ಸಹಗಮನಕ್ಕೆ
ಸಿದ್ಧವಾಗಿರುವುದೇ ಅವಳ ಬದುಕು

## ರಾಧೆ

ಬೃಂದಾವನದ ಬೀದಿಗಳಲ್ಲಿ
ಯಮುನೆಯದಂಡೆಗಳಲ್ಲಿ
ಅವಿಶ್ರಾಂತಳಾಗಿ
ಅವನಿಗಾಗಿ ಅರಸುತ್ತಿದ್ದಾಳೆ
ಕನಸಿನಲಿ ಕನವರಿಸಿ
ಎದೆಯೊಳಗೆ ತಳಮಳಸಿಸಿ
ಅವನ ಮುಖ ಕಾಣುವಾತುರದಿ
ಚಡಪಡಿಸಿ ಚೀರುದನಿಯಲಿ
ನೆನಪಾಗದೆ ಕೃಷ್ಣ
ನಮ್ಮೆದೆಯ ತೀರದ ತೃಷ್ಣ?
– ಎಂದು ಕೇಳುತ್ತಾರೆ
ಕಾಡು ಹಕ್ಕಿಗಳ
ಇರುಳು ಚುಕ್ಕಿಗಳ
ಒಡನಾಟದಲ್ಲಿ ಒಡನಾಟ
ಹೊನಲ ಹಾಡಿಗೆ
ಅಲೆಯ ತಾಳಕೆ
ಮೈಯ ಮರೆತು
ಕುಣಿದ ಹೆಜ್ಜೆ ಉಲಿವ ಗೆಜ್ಜೆ
ನೆನಪುಗಳು
ರಾಧೆಯಂತರಂಗಕೆ ಶೂಲಗಳು

ಇರಬಹುದೆ ಇವನಿಲ್ಲಿ
ನೀಲಿ ಕಡಲಲ್ಲಿ
ತೇಲಿ ಹೋಗುವ ಮೋಡದೊಡಲಲ್ಲಿ?
ಕೊಳಲ ದನಿ ಮೌನಕ್ಕೆ

ಕತೆಯಾಗಿ ಹೋದ ರಾಸಕ್ಕೆ
ಬದಲಾದ ಅವನ ವೇಷಕ್ಕೆ
ಬೆರಗಾದ ರಾಧೆಯ ಕಣ್ಣುಗಳಲ್ಲಿ
ಎದ್ದ ಪ್ರಶ್ನೆಗೆ
ಅವನ ನೆನಪೇ ಉತ್ತರ !

# ನನ್ನ ಕಾಲೇಜು ದಿನಗಳಲ್ಲಿ

ಹೊಂಬಣ್ಣದ ಹಗಲಿನ ನೆನಪುಗಳೊಂದಿಗೆ
ಹೆಮ್ಮೆಯಲಿ ಬೀಗಿ ನಡೆಯುತ್ತೇನೆ
ಮೌನವಾಗಿ ರಸ್ತೆಗಳು ನನ್ನ
ಸ್ವಾಗತವನ್ನು ಹಾಡುತ್ತವೆ
ಹಾದಿ ಇಕ್ಕೆಲದ ಮರಗಳು
ಹೂ ತುಂಬಿದ ಕೈಗಳಿಂದ
ಬೀಸಿ ಸುಪ್ರಭಾತವನ್ನು ಹೇಳುತ್ತವೆ

ಸುತ್ತಲೂ ಗೆಲುವಿನ ಹೊನಲ ಹಾಡು
ರಾತ್ರಿಯ ನನ್ನ ನಿಟ್ಟುಸಿರು
ಸುತ್ತಮುತ್ತಿರುವ ಸದ್ದುಗದ್ದಲದಲ್ಲಿ
ಕರಗಿ ಹೋಗುತ್ತದೆ
ಹಕ್ಕಿಗಳ ಚಿಲಿಪಿಲಿ
ವಾಹನಗಳ ಕಹಳೆ ಗಂಟೆ
ಪುಟಾಣಿಗಳ ಕಲರವ
ಕನಸುಗಳನ್ನು ತುಂಬಿಕೊಂಡು
ಶಾಲೆಗೆ ಹೋಗುವ ಹುಡುಗರು

ನಡೆದು ಸಾಗುತ್ತಿರುವ ನನ್ನ ಹೆಜ್ಜೆಗಳು
ಥಟ್ಟನೆ ನಿಲ್ಲುತ್ತವೆ
ಭೂತಾಕಾರದ ಕತ್ತಲು ಎದ್ದು ನಿಲ್ಲುತ್ತದೆ
ಎಲ್ಲ ಬಾಗಿಲುಗಳೂ ಮುಚ್ಚಿವೆ
ಭರವಸೆಯ ಬುಡ್ಡಿ ದೀಪಗಳು
ಬಣ್ಣ ಬಣ್ಣದ ಚಿಟ್ಟೆಗಳು
ಒಮ್ಮೆಲೇ ಸಾಯುತ್ತಿವೆ

ಚೀರುತ್ತೇನೆ ಎತ್ತರದ ದನಿಯಲ್ಲಿ
ಬಿಡಿಸಿ ಯಾರಾದರೂ ನನ್ನ
ಸರಳುಗಳ ಸೆರೆಯಿಂದ
– ಕೊಂಡಿಗಳು ಕಳಚಿದ ಸದ್ದು
ಮತ್ತೆ ಹಾದಿಗಿಳಿಯುತ್ತೇನೆ – ಮುಕ್ತಳಂತೆ

## ಅಮ್ಮ

ನನ್ನಮ್ಮ ಹಿಂದೂ ಮಹಾಸಾಗರ
ಆಳ ವಿಸ್ತಾರಗಳ ಅಳತೆಗೇ ಸಿಗದವಳು
ಲೆಕ್ಕವಿಲ್ಲದ ಪ್ರೀತಿ ಹೊನಲುಗಳು
ಹರಿಹರಿದು ತುಂಬಿಕೊಂಡರೂ
ತಣಿಯದವಳು
ಪ್ರೀತಿ ಬಯಸಿದವರಿಗೆಲ್ಲ
ಅಲೆಯ ಕೈಗಳನೆತ್ತೆತ್ತಿ
ನೀಡುವಳು
ಮುಗಿಲದಾಹಕ್ಕೆ ಆವಿಯಾಗಿ
ಅರ್ಪಿಸಿಕೊಂಡು ತಣಿದು
ಇಳಿವಳು ಬುವಿಗೆ
ತಣ್ಣನೆಯ ತುಂತುರಾಗಿ
ಮನಸು ನೆಮ್ಮದಿಯಿದ್ದಾಗ
ಮೌನ ಶಾಂತದಲಿ ನಿಶ್ಚಲದಿ ನಿಲ್ಲುವಳು
ಎದೆಯ ಕಲಕಿದರೆ ಸಾಕು
ಉತ್ಸಾಹದಲಿ ಉಬ್ಬುಬ್ಬಿ
ಕಾವ್ಯದಲೆಗಳ ರಚಿಸಿ
ಕುಣಿಯುವಳು
ನನ್ನಮ್ಮನಂತರಾಳದಲಿ ಕೈಯಾಡಿಸಿದರೆ
ಕಪ್ಪೆ ಚಿಪ್ಪುಗಳಲ್ಲ ಮುತ್ತು ಹವಳ ರಾಶಿ ರಾಶಿ
ಆದರೂ ತೆರೆದುಕೊಳ್ಳುವುದಿಲ್ಲ
ಮನಸ್ಸು ಯಾರ ಮುಂದೂ ಎಂದೂ !
ಜ್ವಾಲಾಮುಖಿಯೂ ಉಂಟು
ಪ್ರೀತಿ ರಸ ಕಾರಂಜಿಯೂ ಉಂಟು
ಒಮ್ಮೊಮ್ಮೆ ಅಕ್ಕರೆಯುಕ್ಕು ಉಕ್ಕಿ

ಬಾನಿಗೂ ಚಾಚಿ ಚಾಚಿ
ಚಂದ್ರನಿಗೂ ಮುತ್ತೊತ್ತಿ ಮುದ್ದಾಡುವಳು
ಹೆಪ್ಪುಗಟ್ಟಿ ಕುಳಿತ ಉರಿ ಬೆಂಕಿಯಾದಾಗ
ಕಿಚ್ಚಾಗಿ ಸಿಡಿಯುತ್ತಾಳೆ
ಅದುಮಿಟ್ಟ ರೋಶ ಆಸ್ಫೋಟಿಸಿ
ಅಲೆಯೆಬ್ಬಿಸಿ ಅಬ್ಬರಿಸಿ
ಮೊರೆಯುತ್ತಾಳೆ
ಬಂಧನವಿಲ್ಲದ ಬಂಧನದೊಳಗೆ
ಅಕ್ಷಯದ ಎದೆ ತೆರೆದು ನಿಂತು
ಗಮ್ಯವಿಲ್ಲದ ಗತಿಯಲ್ಲಿ
ಹರಿದು ಬರುವ ಎಲ್ಲ ತೊರೆಗಳನ್ನೂ
ಅಪ್ಪಿಕೊಂಡು ಒಪ್ಪಿಕೊಂಡು
ತಾನೇ ಒಂದು ಗಮ್ಯವಾಗುತ್ತಾಳೆ

## ಮೌನಿ

ಮಾತು ಬಂದರೂ ಮೌನ
ಯೋಗದಲಿ ನಿರತ
ಸದಾ ಹೊಳೆವ ಮಿಂಚಿನ ಕಣ್ಣು
ತುಟಿಯಂಚಿನಲ್ಲಿ
ಮಂದ ಹಾಸದ ಕಿರಣ
ಚಿಣ್ಣರ ಕಣ್ಣರ ತುಂಟಾಗಳಿಗೂ
ಬಿರಿಯದ ಮೌನ
ತಳದಲ್ಲಿ ತಿಳಿಯಾದ ಪುಲಕ !
ಕಡಲಬ್ಬರ ಉಬ್ಬರಗಳಿಗೆ
ಬಿರಿವ ಭೂಮಿಯ ಗುಡುಗಿಗೆ
ಕರಗದೆಯೇ ಕರಗಿಸಿ ಎದೆಯ ಪ್ರೀತಿಯನ್ನು
ಹನಿ ಹನಿಸಿ ಹಂಚುತ್ತಾನೆ
ಕರುಳ ಕುಡಿಗಳ ಬೇರಿನಭ್ಯುದಯಕ್ಕೆ
ವಾತ್ಸಲ್ಯ ಕೊಡಗಳ ಸುರಿದು
ಮಗಳ ಬಾಳಿನ ಕಮಲ ಅರಳುವುದನ್ನು
ಬಣ್ಣಗಳಲ್ಲಿ ಮೂಡುವುದನ್ನು
ಕನವರಿಸುತ್ತಲೇ
ಕಾಯುತ್ತಾನೆ: ಹೊಂಬಣ್ಣದ
ಸೆರಗ ನೇಯುತ್ತಾನೆ
ನಿರೀಕ್ಷೆಯ ದಿನಗಳ ಮೊದಲಿಗೇ
ಸ್ವಯಂ ಶಿಲ್ಪವಾಗಿ
ತನ್ನ ಬದುಕಿನ ರೂವಾರಿ
ತಾನೇ ಆಗಿ ನಿಂತ ಮಗಳ
ಎದೆಯಲ್ಲಿ ಹುಡುಕಿದರೆ
ತನ್ನ ನೆರಳೂ ಇಲ್ಲ!!

ತನ್ನ ಮೌನಕ್ಕೆ ಮೌನ ಕವಿತೆಗೆ
ದಕ್ಕಲೇ ಇಲ್ಲ ಯಾವೊಂದು ಹೂವು
ಇಲ್ಲ; ಹಾವೂ ಇಲ್ಲ.
ಊರೇ ಹುಯಿಲೆದ್ದರೂ
ಕ್ರಿಸ್ತಳಾಗಿಸಿ ಮಗಳ
ಮಾತು ಮೊಳೆಗಳ ಜಡಿದರೂ
ಮೌನಿಯ ಮೌನ ಸಿಡಿಯಲಿಲ್ಲ
ಕಚ್ಚಿ ಹಿಡಿದ ತುಟಿಗಳಲ್ಲಿ
ಬಿರುಕು ಕಾಣಿಸಲಿಲ್ಲ
ಅಂತರಂಗದ ಕದಗಳ ತೆಗೆದಿರಿಸಿದ
ಅಕ್ಷತೆಯ ನಕ್ಷತ್ರಗಳನೆರಚಿ
ಎದ್ದು ಎತ್ತಲೋ ಕತ್ತಲಗವಿ
ಯರಸಿ ಹೊರಟ; ಹೊಕ್ಕ
ಕತ್ತಲಲ್ಲಿ ಕರಗಿ ಬೆತ್ತಲಾದ
ಬೆತ್ತಲಾಗಿ ಉರಿದು ಬೆಳಕಾಗಿ
ನಿಲಿಯಾಗಸದೆದೆಯಲ್ಲಿ
ಇಳಿದಿಳಿದು ಮೌನ ಸಮಾಧಿಯಾದ

# ನಿನ್ನೆಯ ಇತಿಹಾಸ ನಾಳಿನ ಇತಿಹಾಸಕ್ಕೆ

ನಿನ್ನೆಯ ಇತಿಹಾಸ ನಾಳಿನ
ಇತಿಹಾಸಕ್ಕೆ ಹೇಳಿತಂತೆ –
ಬರೆದುಕೋ ಮಗು ಬರೆದುಕೊ
ಬದುಕಿದ್ದವು ಇಲ್ಲಿ
ಕೋಮಲ ಪುಷ್ಪಗಳು
ಕಮಲಗಣ್ಣಿನ ಕಾಮಿನಿಯರು
ಸಂಜೆ ಮುಂಜಾವುಗಳಲ್ಲಿ
ಓಡಾಡಿದವರು ಆಡಿದವರು
ಕತೆಯಾಗಿ ಕವಿತೆಯಾಗಿ
ಉಸಿರಾಡಿದವರು
ನಿಟ್ಟುಸಿರಿನ ನೀಲಿ ಬೆಟ್ಟಗಳೇರಿ
ತೂಗಿ ತೊನೆದಾಡುವ
ನಕ್ಷತ್ರಗಳನ್ನು ಹಿಡಿಯ
ಬೇಕೆಂದು ದುಡಿದವರು
ನಾಳೆ ಮೂಡುವ ಪ್ರಥಮ
ಕಿರಣ ಚುಂಬನ ಪುಲಕ
ದೂರ ತೀರಗಳ ತಲುಪುವ
ತವಕಗಳ ಹೊತ್ತು
ನಿರಾಳ ನಿದ್ರಿಸಿದವರು
ಕನಸು ತಿಳಿದು ಏಳದೆಯೆ
ಹೆಜ್ಜೆ ಜಾಡುಗಳನ್ನು ಬಿಟ್ಟು
ಅಜ್ಞಾತ ಕತ್ತಲ ಹಾದಿಗಳಲ್ಲಿ ಕರಗಿದವರು
ಮಲತಾಯಿ ಮುನಿಸು ಮತ್ಸರ

ಮೈ ಕೊಡವಿ ಬೇತಾಳ ಬಾಯಿ
ತೆರೆದು ಗರ್ಭಗುಡಿಯಲಿ
ಸೆರೆಗೊಂಡು ಸಾಲುಗಟ್ಟಿ ನಿಲ್ಲಿಸಿದವರೆಲ್ಲ
ಅಸ್ಥಿಪಂಜರಗಳಾಗಿ
ಹೇಳಿದ ಮೂಕ ಕಥೆಗಳ
ವ್ಯಥೆಗಳ – ಬರೆದುಕೋ
ಕಲ್ಲು ಕಾಂಕ್ರೀಟು ಕೋಟೆ ಚಪ್ಪಡಿ
ರಾಶಿ ನಡುವೆ ಬದುಕುಳಿದ
ಜೀವ ಸಸಿ ಹೆಮ್ಮರವು
ಸಾವುನೋವಿಗೆ ಸಾಕ್ಷಿ
ಖಾಂಡವದ ಕತೆ ಮರಳಿ
ಜೀವ ಜೀವಗಳೆಲ್ಲ
ಉರಿವ ಕೊಳ್ಳಿ
ಮೆತ್ತನೆಯಕರ ಸ್ಪರ್ಷ
ಕರುಗುವುದು ಕಾಲ
ಬೊಕ್ಕೆ ಬೊಬ್ಬೆಗಳಾರಿ
ಸ್ವಾತಿಯ ಸಂತಾಪದ ಹನಿಗಳುದುರಿ
ಎಲ್ಲವೂ ತಂಪು
ಬೀಸುವುದಾಗ ಹಸಿರ ಸೊಂಪು
ಮತ್ತದೇ ಸೂರ್ಯ
ಅದೇ ಚಂದ್ರ
ಆದರೆ ರಾಹು ವಿಮುಕ್ತ
ಅಪರಂಜಿ ಮೆರಗು
ಜೀವನದಿ ದಂಡೆಗಳ ನಡುವೆ
ಹರಿದು ಅಲ್ಲಲ್ಲಿ ಸಿಡಿಯುವುದು
ರಸದ ಕಾರಂಜಿ
ಭೂಗರ್ಭ ಶೋಧಕರ
ಶೋಧನೆಯ ಪುಟಗಳಿಗೆ
ಭೂಮಿಯಂತರಂಗದ

ಗುಟ್ಟುಗಳು ಗುಬ್ಬಿಗಳು
ರೋಮಾಂಚದ ಕವಿತೆಗಳು
ತೆರೆದು ಕೊಳ್ಳುವುದನ್ನು
ಬರೆದುಕೋ ಮಗು ಬರೆದುಕೊ.

## ಬಂಜೆ ಗಿಡಗಳು

ಇಂದು ರವಿವಾರ
ಕೆಲಸಕ್ಕೆ ರಜೆ
ಅಲಸಿಕೆ; ಆಕಳಿಕೆ
ನುಲಿವ ನಿದ್ದೆ
ಹಾಸಿಗೆಯೇ ಮುಳ್ಳಾಗಿ
ಹಿತ್ತಲಿಗೆ ನಡೆದೆ
ಬಣ್ಣ ಬಣ್ಣದ ಚಿಟ್ಟೆ ಹೂ
ಮುಡಿದು ನಿಂತ ಗಿಡಗಳ
ಪೊದೆಗಳ ನಡುವೆ
ಎಡ್ಡಾದಿಡ್ಡಿ ಬೆಳೆದು
ಭೂತದಂತೆ ನಿಂತ
ಕಾಡಗಿಡವೊಂದು ಸೆಟೆದದ್ದು
ಕಂಡು ಕಿನಿಸಿದೆ
ಯಾವ ಬೀಜದ್ದೋ
ಯಾವ ನೆಲದ್ದೋ
ಹೂ ಬಿಡುವ ಗಿಡಗಳ ನಡುವೆ
ಬಂಜೆ ಗಿಡ! – ಹೇವರಿಸಿದೆ
ಮೊದಲೇಕೆ ಇದು
ಕಾಣಲಿಲ್ಲ!!
ಎಷ್ಟೊಂದು ಸುಂದರ
ಹೂ ಗಿಡಗಳು
ದುಂಬಿ ಮೊರೆತಕ್ಕೆ ತೊನೆವ
ತೀಡುಗಾಳಿಗೆ ತೂಗಿ ನಲಿವ
ನಗೆಯ ಕಂಪನು ಸಿಂಪಡಿಸಿ
ಸೊಗದ ಗೆಜ್ಜೆಯ ಕುಣಿಸುವ

ಇವುಗಳ ನಡುವೆ ನಿಂತ
ಬಂಜೆ ಗಿಡದ ಮೌನ
ಎದೆಯ ಮೀಟಲಿಲ್ಲ
ಹೂವಿಲ್ಲ ಕಾಯಿಲ್ಲ
ಕಾಯುವ ಬೀಜವಿಲ್ಲ
ಎರೆವ ನೀರು ಕುಡಿದು
ಸೂರ್ಯಶಾಖವ ಪಡೆದು
ಏನೊಂದನೂ ಕೊಡದೆ
ಕಬಳಿಸುವ ಬಂಜೆ ಗಿಡ !
ಕತ್ತರಿಸಿ ಎಸೆಯ ಬೇಕು
ಮತ್ತೆ ಚಿಗುರದಂತೆ
ಕತ್ತು ಹಿಸುಕಿ ಕೊಲ್ಲಬೇಕೆನಿಸಿ
ಬುಡಕ್ಕೆ ಕೊಡಲಿಯಿಟ್ಟಾಗ
ಸಿಡಿದ ಚೀತ್ಕಾರಕ್ಕೆ
ಬೆಚ್ಚಿ ಕಣ್ಣಾಡಿಸಿದಾಗ
ಕಂಡದ್ದು ಗಿಡವಲ್ಲ
ನಾನೆ ಗಿಡವಾಗಿದ್ದೆ

## ನಾನೇನು ಮಾಡಲಿ ಪ್ರಿಯ?

ಮೊದಲ ವಸಂತಗಳಲ್ಲಿ
ಮೈತುಂಬಿ ಕೊಂಡಿದ್ದೆ
ನಳನಳಿಸಿ ಹಸಿರುಟ್ಟು
ಮುಡಿ ತುಂಬ ಹೂವಿಟ್ಟು
ಸವಿರಸದ ಕೊಡಪಾನ
ನಿನಗೆ ನಿವೇದನೆಗಿರಿಸಿ
ಯುಗ ಯುಗಗಳಲ್ಲೂ
ಕನಸನ್ನೇ ಕಾಮಿಸಿ ನಿಂತಿದ್ದೆ

ನೀಲಿ ಪತ್ತಲ ಮಿಂಚಿನಂಚು
ನಕ್ಷತ್ರ ಕಾಂತಿ ತಂತುಗಳು ಹೆಣೆದ
ನವರಾಗ ಚಿತ್ತಾರ ಹೊತ್ತ ಸೆರಗು
ನೆನಪಿನಾಭರಣ ಒಡಲ ಶೃಂಗಾರದಲಿ
ವಿರಹ ಗೀತೆಗಳಲ್ಲಿ ಎದೆಯಾಳದ
ಮಧುರ ಪ್ರೀತಿಯ ತನಿಯ ತುಂಬಿದ್ದೆ

ಈಗೇನು ಮಾಡಲಿ ಪ್ರಿಯ?
ನೆನಪಿಗೆ ದಕ್ಕಿಸಿ ಕೊಳ್ಳುವ ಮೊದಲೇ
ಜಾರಿದ ವಸಂತಗಳು
ಗಂಟಲು ಕಟ್ಟಿದ ಕೋಗಿಲೆಗಳು
ಉತ್ಸಾಹದಲೆಗಳು ಉದುರಿ
ಬೋಳು ಬೆತ್ತಲಾಗಿ
ಎದೆಯ ಕತ್ತಲು ತುಂಬಿ
ನುಗ್ಗಿದ ಶಿಶಿರಗಳಲ್ಲಿ
ಮಂಜುಗಟ್ಟಿದ್ದೇನೆ

ಶೀತಲದಲಗಿನ ಮೊನಚು
ಮೈತುಂಬ ಗಾಯ
ಮುರಿದೊಡೆದ ಕನಸು
ಸೊನ್ನೆಯಾದ ಮನಸು
ತೆರೆಗಟ್ಟಿದ ಒಡಲು
ಪೊರೆಗಟ್ಟಿದ ಕಣ್ಣು
ಚೆಲುವಿಲ್ಲ ಒಲವಿಲ್ಲ
ನಾಳಿನ ಹಗಲುಗಳ ಭರವಸೆಯಿಲ್ಲ
ನೀ ಪ್ರೀತಿಸಬೇಕೆನುವ
ವಸಂತ ನಾನಲ್ಲವೀಗ
ನಿಸ್ಪಂದ ನೀರವ
ಕರಗಲೊಲ್ಲದ ಮಂಜು ಶಿಲ್ಪ ನಾನು

# ಕಡಲದಂಡೆಯಲಿ ನಿಂತವಳು

ದಿನಾ ದಿನಾ
ಪ್ರತಿದಿನಾ
ಹೀಗೇಕೆ ಬಂದು ನಿಲ್ಲುತ್ತಾಳೆ
ಕಡಲದಂಡೆಯಲ್ಲಿ
ಮರಳಲ್ಲಿ ಮನೆಗಳ ಕಟ್ಟುತ್ತಾ
ಅಲೆಗಳುಯ್ಯಾಲೆಯಲಿ ಆಡುತ್ತ
ಹಣೆಗೆ ಕೈಯಿಟ್ಟು
ದೂರ ದೂರ ದೂರದಾಚೆಯ
ದಂಡೆಗಳ ಕಡೆಗೆ
ಬಾನಿನಾಚೆಯ ಕ್ಷಿತಜದೆಡೆಗೆ
ನೋಡುತ್ತಲೇ ಇದ್ದಾಳೆ
ಕಡಲಿನೇರಿಳಿತದ
ಲೀಲೆಗಳನ್ನು ಈ ಬಾಲೆ
ಒಮ್ಮೆ ಉತ್ಸಾಹದೊಂದಿಗೆ
ಮತ್ತೊಮ್ಮೆ ಹತಾಶೆಯೊಂದಿಗೆ
ನೋಡಿ ನೋಡಿ ನಿಟ್ಟುಸಿರನ್ನು
ಉಪ್ಪು ನೀರಿನಲ್ಲಿ
ಕರಗಿಸಿ ಬಿಡುತ್ತಾಳೆ
ಹಗಲು ಸಂಜೆ ರಾತ್ರಿಗಳಲ್ಲೂ
ದಂಡೆಗಳಲ್ಲಿ ದಟ್ಟವಾಗಿ ಕಾಯುತ್ತಾಳೆ
ಯಾರಿಗೋ ಯಾವ ಕ್ಷಣಕ್ಕೋ!
ಹಡಗುಗಳು ಸಾಗುತ್ತವೆ
ದೋಣಿಗಳು ತೇಲುತ್ತವೆ
ಇವಳ ನೋಟದ ಹಕ್ಕಿ
ಆಲೋಕ ಈ ಲೋಕ

ಲೋಕಾಲೋಕಗಳಲ್ಲಿ
ಗರಿಗೆದರಿ ಗಿರಕಿಸಿ
ಸಮುದ್ರ ದೀಪ ಶಿಖರದಲಿ
ನಿಲ್ಲುತ್ತದೆ
ದಣಿಯದ ನಿರೀಕ್ಷೆಗಳಲ್ಲಿ
ಆಸೆಗಳ ಆಸರೆಯಲ್ಲಿ
ಬೆಳಕಿನೂರಿನ ಇನಿದನಿಯ ಸೋನೆಮಳೆಗೆ
ಚಾತಕವಾಗಿ ಹೀಗೇ ದಂಡೆಗಳಲ್ಲಿ
ದಾರಿ ಕಾಯುತ್ತಾಳೆ

# ಒಂದು ಸಂವಾದ

ಏನೆಂದೆ ಆನಂದ
ಮರುಹುಟ್ಟು ಬೇಡವೆಂದೆನೆ ನಾನು?
ಯಾಕೋ ನನ್ನದೆಯಲ್ಲಿ
ಗೂಡು ಕಟ್ಟಿದೆ ಮತ್ತೆ
ನೋವು ನೂರು
ಮರಮರಳಿ ಹೆಡೆಯರಳಿ
ಘೂತ್ಕರಿಸಿದೆ ಸಾವು
ತುಡಿಯುತಿದೆ ಕ್ಷಣ ಕ್ಷಣವು
ಮೌನ ಹೃದಯ

ಕಪಿಲವಸ್ತುವಿನ ಬೀದಿಗಳಲ್ಲಿ
ಅಲೆಯ ಬೇಕಿದೆ ನನಗೆ
ನನ್ನ ಮೋಕ್ಷದ ಕನಸು
ಜೇನುಂಡು
ಬಿಟ್ಟು ಬಂದೆನವಳಿಗೆ
ಬೆಂಕಿ ಮುಳ್ಳು
ಯಾವ ತಪ್ಪಿಗೆ ನನ್ನ
ಮುದ್ದುಕಂದನ ಮರೆತು
ಅಪ್ಪನಿಲ್ಲದೆ ಅನಾಥನಾಗಿಸಿದೆ
ಪ್ರೀತಿಯೆಲ್ಲವ ಹಿಂಡಿ
ಮೈಕಸುವು ನೀಡಿದ
ಅಪ್ಪ ಅಮ್ಮನ ಎದೆಗೆ
ಬಾವು ನಾನು
ಸ್ವರ್ಗದಪ್ಸರೆಯರ
ಅಹಂಕಾರಕ್ಕೆ ಕಿಚ್ಚಿಟ್ಟು

ರತಿರಮ್ಯ ಚೆಲುವನ್ನು
ಸುರಿಸುರಿದು ತಣಿಸಿದ
ರಂಭೆ ರಾಗಿಣಿಯರ
ಚಿನ್ನ ಸರಪಳಿಯೆಲ್ಲ
ನೆನಪಾಗುತಿದೆ ಆನಂದ

ನೋಡಬೇಕಿದೆ ನನಗೆ
ನಾ ಕೊಟ್ಟದ್ದು ಕೊಂಡವರೆಷ್ಟು ಮಂದಿ
ಅವಿಶ್ರಾಂತ ಸಾಗಿದ ಹೆಜ್ಜೆಗಳ
ಅಳೆಯಬೇಕಿದೆ ನನಗೆ
ಹುಟ್ಟು ಸಾವು ನೋವುಗಳ
ಸಂಕೋಲೆ ಮುಕ್ತ
ಮನುಜ ಲೋಕದ ಸೊಬಗ
ಕಾಣಲೆದೆ ತುಡಿಯುತಿದೆ
ಹಚ್ಚಿಟ್ಟ ದೀಪಗಳ
ಬೆಳಕುರಿವ ತನಕ ಹಾದಿ
ಕತ್ತಲ ಭೀತಿಗಳು
ನನ್ನ ಕಾಡುವುದಿಲ್ಲ
ಮಾಡಿದ್ದು ಮುಗಿಯಿತೇ?
ಆಕಾಶ ಅಂಗೈ ಸೇರಿತೇ?
ಮಾಟಕ್ಕೆ ಮುಗಿವೆಲ್ಲಿ!
ನನ್ನ ಪಯಣದ ನಿಲ್ದಾಣವೆಲ್ಲಿ
ಶೂನ್ಯ ಕಮರಿಯ ಬಾಯಿ
ಗಂಭೀರ ನಿನದ
ತೋರು ಹಾದಿಗಳ
ತೆರೆದಿರಿಸಿದ್ದೇನೆ
ಮತ್ತೇನು? ಮತ್ತೇನು?!
ಪ್ರಶ್ನೆ ಮೊಳಗು!

ನಿಷ್ಕ್ರಿಯ ಸ್ಥಿತಿ
ಬೇಸರದ ಕೋಟೆಯಲಿ ಬಂದಿ!

ಬೇಡಿ ಕರೆಯುವುದೇನು
ಭೂಮಿ ಮತ್ತೆ ನನ್ನ!
ಆನಂದ: ಚಿತ್ರಮಿದು ಬಯಕೆ ಭಗವನ್
ಮತ್ತೆ ಹೊರಳಿತೆ ಮನಸು
ಮನುಜ ಲೋಕದ ಕಡೆಗೆ!
ಬೇಡ ಭಗವನ್ ಬೇಡ
ನಿನ್ನೂರು ನಿನ್ನ ನೆಲೆ ನಿನ್ನ ಬೆಲೆ
ಬೇಕು ಯಾರಿಗೆ ಹೇಳು
ಈ ಯುಗದ ಮಂದಿಗೆ
ಬೇಕಿದ್ದರೆ ಬದಲಾಯಿಸು
ನಿನ್ನ ಕಾಣ್ಕೆಗಳನ್ನು
ಹಳೆ ಕಂತೆ ಪುರಾಣಗಳು
ಧೂಳುಗಟ್ಟಿ ತಿಪ್ಪೆಯಾಗಿದೆ
ಕಾಲಚಕ್ರವದುರುಳಿ
ವಿಸ್ಮೃತಿಯ ಕತ್ತಲಗಲ್ಲಿಗಳಲ್ಲಿ
ಕೇಳು ಅನುರಣಿಸುವುದನ್ನು
–ಕೇಳು ಭಗವನ್ ಕೇಳು
"ಸಂಸಾರವೇ ಸಾರ
ಪುಣ್ಯವೇ ಅತಿ ಭಾರ
ಆಸೆಯೊಂದೇ ಬದುಕು
ಜರಾಮರಣ ಸ್ವರ್ಗ ನರಕಗಳಲ್ಲಿ
ನರಸತ್ತವರ ಬರಿಯ ಕನಸು
ಬದುಕಲೊಂದೇ ದಾರಿ
ಈ ನೆಲದ ಮನುಜರಿಗೆ
ಹಿಂಸೆಗಳ ಕೊನರಿಸು
ದ್ರೋಹಗಳನರಳಿಸು
ನೋವು ಸಾವುಗಳೆಲ್ಲ
ನಿತ್ಯ ರಾಮಾಯಣ
ಹಿಂಸೆ, ಕೊಲೆ, ಸ್ವಾರ್ಥಗಳೆ
ಪಾಾರಾಯಣ
ಸತ್ತವರ ಬದುಕಿಸುವ

ಇದ್ದವರ ಕೊಲ್ಲುವ
ರೋಗಗಳ ಗೆಲ್ಲುವ
ನೂರು ದಾರಿಗಳುಂಟು
ನಿನ್ನ ಹಂಗಿಲ್ಲ ಹೆಸರಗುಂಗಿಲ್ಲ!
ವರ್ಷಕೊಮ್ಮೆಯೆಲ್ಲೋ
ಕೇಳಿ ಬರುವುದು ಹೆಸರು
ಪ್ರತಿಮೆ ಪಟಗಳಿಗೆಲ್ಲ
ತುಂಬಿ ಬರುವುದು ಉಸಿರು
ಕೋಳಿ ಕೂಗಿತೋ ಮತ್ತೆ!
ಅದೇ ಧೂಳು ಚರಂಡಿಗಳೂ!!
ನೀ ಬಿಟ್ಟ ಕ್ಷಣದ ಚೀತ್ಕಾರಗಳು
ನೀನೆಲ್ಲೋ ನಾನೆಲ್ಲೋ
ಬರಿ ಒಡಕು ಸೊಲ್ಲು!

ಬುದ್ಧ: ಅದಕೆಂದೆ ನಾನೆಂದೆ ಆನಂದ
ಹೋಗ ಬೇಕಿದೆ ನನಗೆಂದೆ
ಜನನ ಮರಣಗಳಾಚೆ
ಉಳಿಯ ಬೇಕೆಂದೆ
ನನ್ನ ತೊರೆದರೆ ಅವರು
ನಾ ತೊರೆಯಲುಂಟೆ ನನ್ನವರ !
ಆರ್ತಮೊರೆ ಹಾಹಾಕಾರ
ಲಾರಿ, ಓಟು, ಸಿಡಿಗುಂಡು!
ಮರೆತ ಪಾಠಗಳನ್ನು
ಮರಳಿ ಕಲಿಸುವ ಮರುವಿನಂತೆ
ಮತ್ತೊಮ್ಮೆ ನಡೆಯಲಿ
ನನ್ನ ಅವತಾರದ ಆವರ್ತನ!
ಬೂದಿ ಚೆಲ್ಲಿದೆಡೆಯಲ್ಲಿ
ಹನಿಸುತ್ತೇನೆ ಸುಧೆಯ ಮಳೆ
ಹರಿಸುತ್ತೇನೆ ಪ್ರೀತಿಯ ಹೊಳೆ
ಹಿಂಸೆ ಕಂಸರ ಎದೆಯ
ತಂತುಗಳನೆಳೆದೆಳೆದು

ಹೊಮ್ಮಿಸುವೆ ಮಧುರ ಗೀತೆ
ವೇದನೆಗಳೊಡಲಲ್ಲಿ
ಸಂತಸದ ಮಲ್ಲಿಗೆಯ
ಕಂಪ ಸಿಂಪಡಿಸುತ್ತೇನೆ
ದಳ ದಳವ ಅರಳಿಸುತ್ತೇನೆ
ಆನಂದ ಬಾ ತಮ್ಮ
ಬಿದ್ದ ಲೋಕವ ಹೊದ್ದು
ಎದೆ ತುಂಬಿಕೊಳ್ಳೋಣ
ಕತ್ತಲಿನ ಕೊರಳಿಗೆ
ಬೆಳಕ ಹಾರವ ತೊಡಿಸಿ
ಸತ್ಯಶಾಂತಿಯನೊಮ್ಮೆ
ಬಿತ್ತಿ ಬೆಳೆಸೋಣ

# ಬರುವೆಯಾದರೆ ಬಾ ಗಾಂಧಿ

ಈ ಶತಮಾನಕ್ಕೆ ಇದೋ ಗಾಂಧಿ
ಇದೇ ಕಡೆಯ ಹುಟ್ಟುಹಬ್ಬ !
ಆದರೆ ಈ ಹುಟ್ಟು ಹಬ್ಬ ಈಗ
ಬಂದದ್ದು ಸರಿಯಲ್ಲ
ಏಕೆನ್ನುವೆಯಾ –
ಅತಿಯಾದ ಗಾಂಧಿಗಳ
ಹಾವಳಿಯಲ್ಲಿ ನಿನ್ನ ಹೆಸರಿನ ಹಾಳೆ
ಹಾರಿ ಹೋಗುವ ಅಪಾಯ!

ಚುನಾವಣೆಯ ಬಿರುಗಾಳಿ
ಯಾರಿಗಿದೆ ಪುರಸೊತ್ತು
ನಿನ್ನ ವಿಚಾರ ಕಂತೆಗಳ
ಬಿಚ್ಚಿ ಧೂಳು ಕೊಡವಿ
ಹೆಕ್ಕಿ ತೆಗೆದು ಅಣಿಮುತ್ತು
ಜೇಬಿಗಿಳಿಸಲು !
ನಮ್ಮ ರಾಜಕಾರಣಿಗಳು
ತಮ್ಮ ಭವಿಷ್ಯಭಾರದ
ಚಿಂತೆಯಲು ಗದ್ದುಗೆಗೆ
ಹದ್ದುಗಳಾಗಿ
ಪಹರೆಯಲ್ಲಿ
ಗಸ್ತು ತಿರುಗುತ್ತಿದ್ದಾರೆ
ಆದರೂ ಮರೆತ ಮರೆವಿನ
ಗೋರಿಯೊಳಗಿಂದ
ಮಿಸುಕಾಡಿದೆ ಒಂದಿಷ್ಟು
ನೆನಪಿನ ಜೀವ

ಹಾರತುರಾಯಿ ಉದ್ಘೋಷಗಳು !
"ವೈಷ್ಣವ ಜನತೋ...
ರಘುಪತಿ ರಾಘವ...
"ಎಂದು ಒಂದಷ್ಟು ಹೊತ್ತು
ಭಜನೆ, ನಿನ್ನ ಬಲಿದಾನಗಳ
ಬಣ್ಣ ಗಟ್ಟಿ ಹಾಡಿ ನಿನ್ನ ಹಾದಿಯಲಿ
ನಡೆವ ಪ್ರಮಾಣ ವಚನ !
ಮಿಣುಕು ದೀಪಗಳಲ್ಲಿ
ಸಂಜೆಗತ್ತಲಲ್ಲಿ
ಪಂಚತಾರಾ ಹೋಟೆಲಿನ
ಪಮೇಲ ಸೂಸಿಯರ
ಬೆಚ್ಚನೆಯ ಮೆತ್ತನೆ,
ಬೆತ್ತಲಿಗೆ ಮೆತ್ತಿ
ಮಲಗಿದರೆ
ಮುಗಿಯಿತು ಅಕ್ಟೋಬರ್ ೨
ಎದೆಯಂಗಳ ಬರಿದಾಗುತ್ತದೆ
ಮೊಳಕೆಯೆದ್ದ ಬೀಜಗಳು
ಸೀದು ಸಾಯುತ್ತವೆ
ಶತಮಾನದೆಲ್ಲೆ ಹಾದು
ದಶಕಗಳು ದಾಪುಗಾಲಿಟ್ಟರೂ
ಹಸಿರೊಡೆದದ್ದು ನೆನಪು
ನಿನ್ನ ಪುಣ್ಯವೇ ಪುಣ್ಯ!
ನಾಳೆ ಹುಟ್ಟುವ ಶತಮಾನಕ್ಕೆ
ಏನಿದೆ ನಿನ್ನ ಹಬ್ಬದ ಖಾತ್ರಿ!!

ನಾವೆಷ್ಟು ಬೆಳೆದಿದ್ದೇವೆ
ಗೊತ್ತೇನು ಗಾಂಧಿ!
ಕಲ್ಲು ಬಂಡೆಗಳಾಗಿ
ಭಾವದಾಘಾತಗಳನ್ನು
ನುಂಗಿ ನಂಜುಂಡರಾಗಿದ್ದೇವೆ
'ಬಡವರ' ಬಾಧೆಗಳನ್ನು ಕಿತ್ತೆಸೆದು

ಬಡತನವನ್ನೇ ಸಾರಿಸಿ ಬಿಟ್ಟಿದ್ದೇವೆ
ಕಟ್ಟಿದ ಚರಂಡಿಗಂಟಲಿಗೆ
ಅತ್ತರ ನೆತ್ತರು ಹಾಯಿಸಿದ್ದೇವೆ
ಕ್ಷಿಪಣಿ ಕಂಪ್ಯೂಟರ್‌ಗಳಲ್ಲಿ
ವಿಶ್ವದೊಡನಾಟ ನಡೆಸಿದ್ದೇವೆ
ಮುಲಾಜು ಮೀರಿದ್ದೇವೆ
ರಿವಾಜು ಮರೆತಿದ್ದೇವೆ
ಬರುವೆಯಾದರೆ ನೀನು
ಮತ್ತೊಮ್ಮೆ ಹುಟ್ಟಿ ಬಾ
ನಿನಗೆ ಕೇಳಿಸಲುಂಟು
ಕತೆಗಳು ನೂರೆಂಟು!

ನೀ ಬಂದರೆ ಬದುಕಿ
ಉಳಿಯುತ್ತೀಯೆಂಬ ಸತ್ಯಕ್ಕಿಂತ
ಬೆಚ್ಚಿ ಸಾಯುತ್ತೀ ಎಂಬುದೇ ಸತ್ಯ!
ನೀನಿದ್ದಾಗ ಇದ್ದ ಒಬ್ಬನೇ ಗೋಡ್ಸೆ
ಈಗೆಲ್ಲ ಗಲ್ಲಿಗೊಬ್ಬ
ಬೀದಿಗೊಬ್ಬ ಗೋಡ್ಸೆಗಳು
ಲೆಕ್ಕವಿಲ್ಲ!!
ಕೊಲುವ ಕಣ್ಣಲ್ಲಿಯೇ
ಗಸ್ತು ತಿರುಗುತ್ತಾರೆ!
ಅದಕ್ಕೆ ನಿನಗೆ ನಿನ್ನ
ಹುಟ್ಟು ಹಬ್ಬಕ್ಕೆ ವಿದಾಯ
ಹೇಳುತ್ತೇನೆ!
ಗಾಂಧೀ...
ವಿದಾಯ ಹೇಳುತ್ತೇನೆ

# ಅಡಿಗೆ ಮನೆ

ಅಡಿಗೆ ಮನೆ ನನ್ನ ಪುಟ್ಟ
ಜಗತ್ತು ಕನಸಿನ ಗೋಳ
ಅರಳಿ ನಿಲ್ಲುವ ಆಸೆಗಳ
ಹೂದೋಟ
ಕಿಲಕಿಲನೆ ನಗುವ
ಭಾವತರಂಗ ರಂಗ!

ಇದೊಂದು ರಂಗ ಶಾಲೆ
ಕುಣಿವ ಹೆಜ್ಜೆಯ ಗತಿಗೆ
ಸಮನಾದ ತಾಳಲೀಲೆ
ತಟ್ಟೆ ಲೋಟ ಡಬರಿಗಳ
ಮುಗಿಯದ ಸದ್ದುಗಳ
ಸಂಗೀತ ಕಛೇರಿ
ಪಟ ಪಟನೆ ಸಿಡಿವ
ಸಾಸಿವೆಯ ಪದಘಾತ
ಕೊತ ಕೊತಿಸಿ ಕುಣಿವ
ಕುದಿವನ್ನದ ಜಿಗಿತ
ಸೊಯ್ಯೆಂದು ಮೂಡುವ
ಹೆಂಚಿನಾಗಸದಲ್ಲಿ
ದುಂಡನೆಯ ದೋಸೆಯ
ಚಂದ್ರನ ಮಂದಹಾಸ!
ಸಿಡಿವರಳಿನ ಅಮೋಘ
ನೃತ್ಯ ವಿಲಾಸ
(ಭಿನ್ನರುಚೈರ್ಜನಸ್ಯ
ಬಹುಧಾಪ್ಯೇಕಂ ಸಮಾರಾಧನಂ)

ಜಲತರಂಗ ಸರಸಿಗಳ
ಸಂಗಮವು ಇಲ್ಲಿದೆ
ಗಂಗೆಯಮನೆಯರಿಗಿಲ್ಲದ
ಬಣ್ಣಗಳುಂಟು
ರುಚಿಗಳೂ ಉಂಟು!
ಹಾಲು ಹಳ್ಳಗಳು
ಕೆಂಪು ಕಡಲುಗಳು
ನೀಲಸಾಗರ ಜೊತೆಗೆ
ಅಚ್ಛೋದ ಸರಸಿಗಳು!
ಬೀರು ನೀರು ಸಾರು ಸಾಂಬಾರು
ರಂಗುರಂಗಿನ ಹೆಸರ ದೀಕ್ಷೆ!
ಇದೊಂದು ಪುಟ್ಟ ಸಂಗ್ರಹಾಲಯ
ಎಲ್ಲೆಲ್ಲೋ ಬೆಳೆದದ್ದು
ಕೊಂಡದ್ದು ಕಂಡದ್ದು
ಗಂಭೀರ ಶಿಸ್ತಿನಲಿ
ಕಪಾಟು ಕಟ್ಟೆಗಳಲ್ಲಿ
ರೂಪರುಚಿ ಬಣ್ಣ ಆಕಾರಗಳಲ್ಲಿ
ಜಾತಿ ನೀತಿಗಳಲ್ಲಿ
ಬೇರೆಯೇ ಬೇರೆ!
ಪಾತ್ರೆ ಪರಡಿ ಮಿಕ್ಸರ್ ಗ್ರೈಂಡರ್
ಒರಳು ಒನಕೆಗಳು
ಸದ್ದಿಲ್ಲದೆ ಮೂಲೆ ಸೇರಿ
ಮರೆ ನಿಂತ ಪೊರಕೆಗಳು
ಚಾಕು ಚೂರಿ ಹಣ್ಣು ತರಕಾರಿ
ಲೆಕ್ಕವಿಲ್ಲದ ಲೆಕ್ಕಾಚಾರದಲ್ಲಿ
ಎಲ್ಲವೂ ಇಲ್ಲಿವೆ!!
ಒಮ್ಮೊಮ್ಮೆ ಮೊಳಗುವುದು
ಸಮರ ಕಹಳೆ
ಸಿಡಿದು ಜಗ್ಗನೆ ಉರಿದು
ಬಿಚ್ಚುವುದು ಕೋಪ ಜ್ವಾಲೆ
ಚಮಚೆ ಸೌಟುಮಗಚುಕೈಗಳ

ಶಸ್ತ್ರಾಸ್ತ್ರ ಸಂಘಾತ
ಎದುರಾಳಿಗಳ ಎದೆ ನಡುಕ

ಇದೇ ನನ್ನ ಕರ್ಮಭೂಮಿ
ನನ್ನ ಇದರ ನಡುವೆ
ಬೆಸುಗೆ ಮಾತು ಮೀರಿದ ಸಂಗೀತ
ಈ ಭೂಮಿ ಕರ್ತಾರನ ಕಮ್ಮಟ
ಅದರಲ್ಲಿ ನಡೆಯುತ್ತದೆ
ನನ್ನ ಕನಸಿನಾಟ
ಉಣಿಸುತ್ತದೆ ಇದು ನನಗೆ
ರಸಕಾವ್ಯದ ಊಟ
ಕೆರಳುತ್ತವೆ ರುಚಿಗಳು
ಅರಳುತ್ತವೆ ಕವಿತೆಗಳು
ಉಲಿಯುತ್ತಿವೆ ಭಾವಗಳು

ನನ್ನ ಖಾಸಗಿತನವನ್ನು
ಕಾಯುವುದಕ್ಕೆ ಕಲ್ಪನೆಯ
ಗುಂಗುಗಳು ಕುಡಿಯೊಡೆಯುವುದಕ್ಕೆ
ಇದೇ ಹಸನಾದ ಬೀಡು
ಮನದ ಗುಬ್ಬಿಯ ಗೂಡು
ಹುಟ್ಟು ಸಾವಿನ
ಬದುಕು ಬವಣೆಯ
ಗೋಜಲುಗಳು ಬಿಚ್ಚಿಕೊಳ್ಳುತ್ತವೆ
ದಣಿದೆಡೆಗೆ ಕಿಲಕಿಲಿಸಿ ಕರೆದು
ಪ್ರೀತಿಯೆರೆಯುತ್ತದೆ
ಒಡಲ ಬೆಂಕಿಯ ತಣಿಸುತ್ತದೆ
ನನ್ನೆಲ್ಲ ಗುಟ್ಟುಗಳು
ಪುಟ್ಟ ಪುಟ್ಟ ಡಬ್ಬಿಗಳಲ್ಲಿ
ಜೋಪಾನ ಉಳಿಯುತ್ತವೆ
ಎದೆಭಾರದ ಹಿಮಕರಗಿ
ಮೌನ ಹೊನಲಾಗಿ
ಹರಿಯುತ್ತದೆ

## ನಿನಗರ್ಥವಾಗಲಿಲ್ಲ

ಅಂದಿನ ಕಾಳರಾತ್ರಿಯ
ಕ್ರೂರ ಕ್ಷಣಗಳಲ್ಲಿ
ಯಾವ ಮಾಯಾಂಗನೆಯ
ಮೋಹಕ ಚುಂಬಕ
ಸೆಳೆದೊಯ್ದಿತೋ ನಿನ್ನ!

ನೀನೇನೋ ಹೊರಟು ಬಿಟ್ಟೆ
ನನ್ನ ಅಂತಃಪುರದ ಕತ್ತಲಿಗೆ
ಬೆಳಕಿನ ರೆಕ್ಕೆ ಮೂಡಲೇ ಇಲ್ಲ
ಅಲ್ಲೊಂದು ದೂರ ಮೂಲೆಯಲಿ
ನನ್ನುಸಿರನ್ನೇ ಉರಿಸಿ
ಸೂಜಿ ಬೆಳಕಿನ ದೀಪವಿರಿಸಿದ್ದೇನೆ

ಗಳಿಗೆ ಗಳಿಗೆಗೂ ಉರುಬುವ
ಉದ್ವಿಗ್ನ ಭಾವಗಳು
ಬೆಂಕಿ ಅಳಲಿನ ಹೊಳೆಯ
ನೆರೆಯುಬ್ಬರ
ದಿನಚರಿಯ ಪುಟಗಳಲಿ
ಅರಳಿಸಿದ್ದೇನೆ
ಕೆಂಡದಕ್ಷರ ಸಾಲು ಸಾಲು

ಹೂ ಮಡಿಲ ಹಾಸಿನಲಿ
ನುಣುಪು ಗುಲಾಬಿ ತುಟಿಯ
ಮೇಲೆ ಮುಗ್ಧ ಮಂದಹಾಸದ
ಮಿಂಚು, ಮೈಮರೆತು

ಮಲಗಿದ್ದ ನಮ್ಮೊಲವಿನ
ಬಂಗಾರ ಗೋಪುರವ
ಒದ್ದವರ ವಿಧಿಗೊಡ್ಡಿ
ಹೋಗಬಹುದೇ?

ದಿವ್ಯ ನಿದ್ದೆಯಲಿ
ಮಾತು ಬಾರದ ಕನಸು ಕಾಣುವ
ಮಗುವು ನಾಳೆ ಕಿರಣದ
ಸ್ಪರ್ಷಕೆದ್ದು ಕೇಳಿದರೇನು
ಉತ್ತರ ಹೇಳು
ಬೆಂದ ಎದೆಯಲ್ಲಿ?
ಸಪ್ತಪದಿಗಳ ತುಳಿದ
ಧರ್ಮೇಚ ಅರ್ಥೇಚ
ಕಾಮೇಚ ನಾತಿ ಚರಾಮಿ'
– ಎಂದದ್ದು ಮರೆತೆಯೇನು?
ಮಮತೆಮೋಹವನಿರಿದು
ಅಪ್ಪಿದ್ದ ಆಸೆ ಬಾಹುಗಳ ತರಿದು
ನೀ ಹೀಗೆ ಎದ್ದೊಡಿ
ಹೋಗಬಹುದೇ?
ನಿನ್ನ ಸ್ವಾರ್ಥದ ಹವನಕ್ಕೆ
ಅಜ್ಯವಾಗಿಸಬಹುದೆ
ಹೇಳು ನಮ್ಮ?

ಕಪಿಲ ವಸ್ತುವಿನರಮನೆಯ
ಗೋಡೆ ಕಿಟಕಿಗಳ
ಬಿರುಕುಗಳಲ್ಲಿ ಬಿಕ್ಕುಗಳು
ಅನುರಣಿಸುತಿವೆ
ನೆನಪು ಚೂರಿಗಳು ಇರಿಯುತ್ತಿವೆ
ಕತ್ತಲು ರಾತ್ರಿಗಳು
ಕನವರಿಸುತ್ತಿವೆ ಹಗಲುಗಳ
ನೋವು ಸಾವುಗಳ ಗೆಲುವ

ಬಯಕೆ ಬೆನ್ನೇರಿ ಹೊರಟವನು
ಈ ಪ್ರಿಯೆಯ ನೋವು
ನಿಟ್ಟುಸಿರು ನಿನ್ನ ತಾಕಲಿಲ್ಲವೆ?
ಯಾರ ನೋವಿಗೋ ನುಲಿದು
ಮೋಕ್ಷ ಬೇಕೆಂದೊಲಿದು
ಮುದ್ದು ಕಂದನ ಪ್ರೀತಿಗೆ
ಎರವಾಗಬಹುದೇ ಹೀಗೆ!

ಹುಟ್ಟುಸಾವಿನ ಚಕ್ರಸುಳಿ
ಯಾಟದ ಗೂಢಗಳನೊಡೆದು
ಗೆದ್ದ ಸಂಭ್ರಮದ ಸವಿ
ನಿನಗಾಗಬಹುದು
ನನ್ನ ಸಾರ ಸುಖವನ್ನೆಲ್ಲ
ನಿನಗೊಲಿದು ಇತ್ತುದನು
ಸುಲಭದಲಿ ಕೊಡವುತ್ತ
ಹೋಗಬಹುದೇ?
ಹೋಗಬೇಕೆಂದೆನಿಸಿದಾಕ್ಷಣ
ನಿನ್ನಂತರಾಳದ ಶೂಲಗಳಲರ್ಥ
ನಿನ್ನ ಅರ್ಧಾಂಗಿ ನನಗೆ
ನೀಡಬಾರದಿತ್ತೇ?
ನಿನ್ನೆದೆಯ ಕಡಲ ಕಲಕಿದ
ಬಿರುಗಾಳಿಗೆ ಅಡ್ಡನಿಂತು
ಶಾಂತ ತಂತುವ ಮೀಟಿ
ಉಳಿಸುತಿದ್ದೆ
ಹೊರಟೇ ಹೊರಟೆಯಾದರೆ
ಹೆಜ್ಜೆ ಹೆಜ್ಜೆಗೆ ನಿನ್ನ
ನನ್ನ ಜೋಡಿಸುತಿದ್ದೆ
ಕಲ್ಲು ಮುಳ್ಳಿನ ಹಾದಿಗಳ
ಹಾಯುವಾಗೆಲ್ಲ
ಸೀತೆ ದಮಯಂತಿಯರಂತೆ
ಒಲುಮೆಗಂಬಳಿ ಹಾಸಿ

ಕರೆದೊಯ್ಯುತಿದ್ದೆ
ನಿನ್ನ ಧ್ಯೇಯದ ದಿಕ್ಕು
ಹಿಡಿದು ಪಯಣಿಸುತಿದ್ದೆ

ಬಿಸಿಲುಮಳೆ ಚಳಿಗೆಲ್ಲ
ಪ್ರೀತಿ ಕೊಡೆಗಳ ಹರಡಿ ಹಿಡಿಯುತಿದ್ದೆ
ಒತ್ತುವ ಕತ್ತಲುಗಳಲ್ಲಿ
ಕಣ್ಣ ಬೆಳಕಿನ ಪಂಜು
ಉರಿಸುತಿದ್ದೆ
ಹಸಿವು ಬಾಯಾರದೊಲು
ಸ್ನೇಹ ಸವಿಯನುಉಣಿಸಿ
ತಣಿಸುತಿದ್ದೆ
ಮೌನ ಚಿಂತನ ಕೋಟೆ
ಬಿರುಕಾಗದೊಲು ನನ್ನ
ಭದ್ರ ಬಾಹುಗಳಲ್ಲಿ ಬಿಗಿಯುತಿದ್ದೆ

ಮುಪ್ಪು ಮರಣಕ್ಕೆಲ್ಲ
ಸಂಜೀವಿನಿಯ ಹುಡುಕ ಹೊರಟವನು
ನೀನಾದರೂ ನೀ ಬೆಳೆದ
ಎತ್ತರವ ಕಾದವಳು ನಾನು
ಮರೆತೆಲ್ಲವನು ನನ್ನ
ನನ್ನ ಪಾಡಿಗೆ ಬಿಟ್ಟು ಹೊರಟೆಯಲ್ಲ!
ನೀನೆಟ್ಟ ನೋವು ಮುಗಿವುದಿಲ್ಲ
ಸುರಿವ ಕಂಬನಿ ಹೊಳೆ ನಿಲ್ಲುವುದಿಲ್ಲ
ನೀ ಬರುವವರೆಗೆ ನಾ ಬರೆವ
ಹಾಡು ನಿಲ್ಲುವುದಿಲ್ಲ
ಈ ಕೂಸು ಎಚ್ಚರಾಗುವುದಿಲ್ಲ
ಆದರೂ ಕಾಯುತ್ತೇನೆ
ಶುದ್ಧೋಧನನನ ವಂಶವೃಕ್ಷದ
ಬೀಜಕ್ಕೆ ಕಾವು ಕೊಟ್ಟು ಉಳಿಸುತ್ತೇನೆ
ನೀ ಬಯಸಿ ಬೇಡಿದರೆ

ನೀನೊಡ್ಡುವ ಜೋಳಿಗೆಗೆ
ನನ್ನೀ ಕಂದನ ಹಾಕಿಬಿಡುತ್ತೇನೆ

ಅರಮನೆಯ ರುದ್ರಮೌನವ
ಸೀಳುವ ನಿಟ್ಟುಸಿರುಗಳ ನೀ
ಕೇಳಬೇಕು
ಕಿಟಕಿ ಬಾಗಿಲುಗಳೂ
ಬಿಕ್ಕುವುದನ್ನು
ದುಃಖ ಉಕ್ಕುವುದನ್ನು
ಆಸೆಗಳು ಕೊಚ್ಚಿಹೋಗುವುದನ್ನು
ನೀನೊಮ್ಮೆ ಬಂದಿಲ್ಲಿ ನೋಡಬೇಕು

ಇನಿಯ ಇದೆಲ್ಲ ನಿನಗೆ
ಅರ್ಥವಾಗುವುದಿಲ್ಲ
ಆಸೆಯೇ ದುಃಖಕ್ಕೆ ಮೂಲವೆಂದವನಲ್ಲವೇ
ನನಗೂ ನೀನು ಅರ್ಥವಾಗುವುದಿಲ್ಲ
ನಿನ್ನ ನೆಚ್ಚಿದ ಮೆಚ್ಚಿದ
ಜೀವಿಗಳ ವಂಚಿಸಿ
ಕಾಣದುದರ ಕಡೆಗೆ ಕೈ ಚಾಚಿ
ಪರಾರಿಯಾದದ್ದು
ನನಗೂ ಅರ್ಥವಾಗುವುದಿಲ್ಲ!!

# ಹೀಗೊಂದು ಕ್ಷಣದಲ್ಲಿ

ಹುತ್ತಗಟ್ಟಿದ ಗೂಡು
ಹೆಡೆಯಾಡಿದೆ ನಾಗರ
ಮೊದಲ ಮಳೆ ಘಮ್ಮೆದ್ದು
ಹೊಮ್ಮಿದೆ ಮಣ್ಣು
ಕೆಂಪು ಕನಸಿನ ಗುಂಗು
ಮೃದುಮಾಂಸದ ಕಂಪು
ಕದಪು ಕೆಂಗುಲಾಬಿ
ರಕ್ತವರ್ಣದ ಸಂಜೆ
ಹೊಗರಿನ ಮೆತ್ತನೆಯ ತುಟಿ
ಅತ್ತರಿನ ಘಾಟು
ಚುಂಬಕ ಸೆಳೆತ
ಕಚಗುಳಿಯ ರೋಮಾಂಚ
ತಡೆದುಬಿದ್ದ ಕನಸು
ಸೋರಿದ ಸಂಯಮ
ನೆಲಬಾನಿನ ಮಿಲನ

ಹುಚ್ಚೆದ್ದ ರತಿ ಗೀತೆ
ಪುಲಕರಿಸಿದೆ ಇಳೆಯ
ಒಡಲ ವಾಸನೆಯುನ್ಮತ್ತ
ಮಂತ್ರದಂಡದ ಬೀಸು
ಸ್ತಬ್ಧ ನಿಸ್ತಬ್ಧ ನೀರವ
ರತಿಲೀಲೆಯ ಸೊಗಸು
ತಣಿದು ತೇಗಿದೆ ಭೂಮಿ
ಮಳೆಬಿಲ್ಲು ತೊಟ್ಟಿಲಲಿ
ಕಿಲಕಿಲನೆ ನಗುವ

ಬಂಗಾರ ಕೂಸು
ಮೈತುಂಬ ಕೋಟಿ
ಕಿರಣದ ಕವಚ
ದಿವ್ಯಕ್ಷಣದಲ್ಲಿ ಉದುರಿದ
ಮುತ್ತು ಮಿಂಚುಗಳ
ಥಳಿಸಿ ನಕ್ಕಿತ್ತು
ಎದೆಹಾಲು ಉಕ್ಕುಕ್ಕಿ
ಹರಿದ ಹೊನಲಿನ
ಅಲೆಗಳುಯ್ಯಾಲೆಯಲಿ
ಬಂಗಾರ ತಟ್ಟೆ
ನಡುವೆ ಸೂರ್ಯನ ಬಿಂಬ
ತೇಲುತ್ತ ತೇಲುತ್ತ
ತೇಲುತ್ತ ಕಾಣದ ದಂಡೆಗಳ
ಹುಡುಕುತ್ತ ಸಾಗಿತ್ತು
ಪಯಣ

# ಸದ್ದುಗಳ ಬೆನ್ನಲ್ಲಿ

ಹದ್ದುಗಳು ಕದ್ದ ನಿದ್ದೆ
ಅಸ್ಪಷ್ಟ ಕನಸುಗಳ
ಮುಳ್ಳಿನಿರಿತದ ನೋವು
ನಿರಂತರ ಸೊಳ್ಳೆಗಳ ಸಂಗೀತ
ಒಳಗೆದ್ದು ಕುಳಿತ ನೆನಪು
ಭೂತ ಭೇತಾಳಗಳು
ರೆಪ್ಪೆ ಮಿಟುಕುವ
ನಕ್ಷತ್ರ ಕಾಂತಿಯಲೂ
ಉರಿವ ಧಗೆ
ಭೀತಿಯಿರಿತದ ಮೌನ
ರಾತ್ರಿಯಲಿ ಇದ್ದಕ್ಕಿದ್ದಂತೆ
ಸದ್ದುಗಳ ಗುದ್ದು
ಬೆನ್ನಲ್ಲೇ ಹೆಡೆ ಬಿಚ್ಚುವ
ಅರ್ಥಗಳು ಅನರ್ಥಗಳ
ನೆರಳು ನಾಟ್ಯ

'ಖೊಕ್' ಖೊಕ್ ಖೊಕ್ಕೆಂದು
ಕೆಮ್ಮುವ ಮುದಿ ಜೀವದ
ಚಡಪಡಿಕೆ ತೂಗಾಡುವ
ಬೇನೆ ತಂತುವಿನ ಬಲೆ
ತೊಂಬತ್ತೈದು ವಸಂತಗಳಲ್ಲೂ
ಕನಸುಗಳ ಮೋಹ
ಲೆಕ್ಕವಿಲ್ಲದ ಬಾರಿ
ಸಾವಿನಂಚುಗಳಲ್ಲಿ
ಕುದುರೆಯೇರಿ

ಮೃತ್ಯು ಸವಾರಿ ವಿಹಾರಿ
ಪಾತಾಳ ಭೀತಿಯ ದಾಟಿ
ಮತ್ತೆ ಮರಳಿ ಬಂದಾಗ
ಬಯಲ ತಂಗಾಳಿ ಹಿತ
ಮರುಕ್ಷಣವೇ ನಿಟ್ಟುಸಿರು!
"ಇಂದೂ ಜೀವಕಿಲ್ಲವೇ
ಸಾವಿನ ಕರುಣೆ
ಪ್ರಶ್ನೆಯೊಂದೇ ಮುದಿ
ಜೀವಕ್ಕೆ ವರ್ತಮಾನ!
ಸೊರಸೊರ ಗೊರಗೊರ
ನಲ್ಲಿ ನೀರಿನ ಸದ್ದು
ತೆರೆದಿಟ್ಟ ಬಾಯಿ ಬಿರಡೆ
ಧಾರಾಕಾರ ಸುರಿವ
ನೀರಿನ ಒರತೆ
ಗುಜರಾತು ರಾಜಾಸ್ಥಾನಗಳ
ಕೋಟಿ ಕಣ್ಣೀರ ನಡುವೆ
ನಮಗೆಲ್ಲಿದೆ ನೀರಿನ ಕೊರತೆ?

ಧಡಧಡ ಹೆಜ್ಜೆ ಸಪ್ಪಳ
ಸಾಲುಸಾಲಾಗಿ ನಡೆದಾಡುವ
ಹೆಜ್ಜೆಗಳ ನೆರಳು
ಲೋಡುಗೊಂಡ ಲಾರಿಯಿಂದ
ಉರುಳಿದ ದಿಂಡು ದಿಂಡು
ಮರದ ದಿಮ್ಮಿಯ ದಂಡು
ಕಾಡ ಬಸುರನು ಸೀಳಿ
ಸಾಗಿಸಿ ತಂದ ಕಳ್ಳಮಾಲು!
ದೇಶ ಸಂಪತ್ತು? ರಕ್ಷಣೆಯೇ
ನಮ್ಮ ಸವಾಲು!!
ಸದ್ದಿಗೆ ತೆರೆದುಕೊಂಡ
ಕಿವಿಗೆ ನೂರೆಂಟು
ಪಿಸುದನಿಗಳ ಧಾಳಿ

ಕವಿದ ಕತ್ತಲೆಯ ನಿರ್ವಾತ
ನಿದ್ದೆಯಿಲ್ಲದೆ ಜಾಗರದ
ಗಂಟೆ ಮೊಳಗು
ಬಿಚ್ಚಿಕೊಂಡವು
ಬೆಳಕಿನ ದಳಗಳು
“ರಾತ್ರಿ ಸದ್ದುಗಳು ಸಾಯುವುದಿಲ್ಲ
ಮುಲುಗುವ ರಾತ್ರಿಗಳು
ತಪ್ಪುವುದಿಲ್ಲ” ಚೀರಿತ್ತು ಮನಸು
ಬಗೆಹರಿಯದ ಪ್ರಶ್ನೆಯೊಂದು
ಇಣುಕಿತ್ತು ಎದುರು
‘ಇಂಥ ಸದ್ದುಗಳು
ಕಾಡುವ ನಿದ್ದೆಗಳು
ಆ ಯಶೋಧರೆಗೆ ಇರಬಾರದಿತ್ತೇ?

# ನಿಲ್ದಾಣಗಳನ್ನು ಹಾಯುವಾಗ

ಕುರುಡುಕತ್ತಲ ಟನಲುಗಳಲ್ಲಿ
ಸಾಗಿಹೊರಟ ಪಯಣ
ಬಿಟ್ಟ ಕಣ್ಣಿಗೂ ಎಟುಕದ
ಬೆಳಕಿನ ಮಾಲೆ
ಬೆಚ್ಚನೆಯ ಅಪ್ಪುಗೆಯ ಹಿತ
ಪಸೆಯಾರದ ಸವಿ ತೀರದ
ಮೊಲೆಹಾಲಿನ ಮಾದಕತೆ
ಮರೆವಿನ ಮಾಂತ್ರಿಕತೆ
ಮುಚ್ಚಿದ ಕಿಟಕಿ ಬಾಗಿಲು
ಬಿಸಿಲು ತಂಗಾಳಿ ಸೋಂಕಿಲ್ಲದೆ
ನಿರಾಳ ! ನಿರಾಳ !

ಸೀಟಿ ಕೂಗಿತು
ಚುಕುಬುಕು ಚುಕುಬುಕು
ಸಾಗಿತ್ತು ರೈಲು
ನಿಲ್ದಾಣಗಳ ಹಾಯುತ್ತಿತ್ತು
ಕಿಕ್ಕಿರಿದ ಪ್ಲಾಟ್‌ಫಾರಂ
ನೂಕುಗಾಡಿ ಅಂಗಡಿಗಳಲ್ಲಿ
ಆಟಿಗೆಗಳು ರಾಶಿ ! ರಾಶಿ !
ಚೆಂಡುದಾಂಡು ಗೋಲಿ ಬ್ಯಾಂಡು
ಬಾರ್ಬಿ ಬೊಂಬೆ ಟೆಡ್ಡಿಬೇರು!
ಇನ್ನೂ ಎಷ್ಟೆಷ್ಟೋ ಪುಟ್ಟ ಪುಟ್ಟ
ಸಾಮಾನು ಸರಂಜಾಮು
ಆಸೆ ಕೆರಳಿಸುವ
ಬಣ್ಣ ಬಣ್ಣದಾಟಿಗೆ ನೂರೆಂಟು!

ನಡುವೆ ತೂಗಿದೆ ಅಲ್ಲಿ
ಹೈಟೆಕ್‌ನ ಹಲಗೆ ಬಳಪ
ಕಿರಿಯರ ವಿಶ್ವಕೋಶ!
ಕೆನೆ ಕೆನೆದು ಕುಣಿದಿತ್ತು ಮನ
ಅರಳಿತ್ತು ಕಣ್ಣು!!
ಗೋಲಿ ಬೊಂಬೆಯ ಜೊತೆಗೆ
ಹಲಗೆ ಬಳಪದ ಖರೀದಿ
ಅಕ್ಷರಾಭ್ಯಾಸ!
ತಿದ್ದಿ ತಿದ್ದಿ ಬರೆದದ್ದೇ ಬರೆದದ್ದು!
ಕೆರಳಿತು ಓದುವ ತವಕ

ಕ್ಯಾಸೆಟ್ಟಿನಂಗಡಿ ಸಾಲು ಸಾಲು
ಕಣ್ಣು ಕುಕ್ಕಿತು ಮುಂದಿನ
ನಿಲ್ದಾಣದಲ್ಲಿ
ನೂಕುನುಗ್ಗಲು ಮಂದಿ
ಹಿಪ್ಪಿಸಿಪ್ಪಿಗಳು ದಂಡು ದಂಡು!
ಕಿವುಡಿಸುವ ಬ್ಯಾಂಗ್ ಬ್ಯಾಂಗ್
ರಾಕ್ ಸಂಗೀತದ ಗದ್ದಲ
ನಡುವೆ ನಡುಗುವ
ಶಂಕರಾಭರಣ ಮಾಯಾಮಾಳವಗೌಳ
ಒಪ್ಪಂದದಪ್ಪುಗೆಯಲ್ಲಿ
ಫ್ಯೂಷನ್‌ನ ಫ್ಯಾಷನ್
ತೇಲಿ ಬಂದ ನಾದ ಸುನಾದ
ಕಚಗುಳಿಯ ಪುಳಕ
ಕ್ಲೋಸಪ್ ಪೆಪ್ಸಿಗಳ
ಪ್ರಣಯ ಪ್ರಪಂಚ!
ಕಾಲೇಜು ಪುಸ್ತಕಗಳ
ಹಾಳೆಗಳ ನಡುವೆ
ಪ್ರಣಯೋಲ್ಲಾಸದ ಭಾವಚಿತ್ರ
ಭಂಗವಾಗದ ಕನಸು
ಕುದುರೆಗಳೇರಿ

ಭಾಂಗಿಯಮಲಿನಲಿಸವಾರಿ
ಪ್ರಳಯದಲ್ಲೂ ಪ್ರಶಾಂತ ತೀರ!
ಚುಕ್ ಚುಕ್ ಚುಕ್ ಚುಕ್!
ಯಾವುದೀ ನಿಲ್ದಾಣ
ಇಕ್ಕೆಲದಲ್ಲಿ ಹಸಿರ ತಂಪು
ಮಾಮರ ಮಲ್ಲಿಗೆಯ ಕಂಪು
ಸಾಲು ಮರಗಳಲ್ಲಿ
ತೂಗಿ ತೊನೆಯುವ
ರಸಪೂರಿ ಹಣ್ಣು ಗೊಂಚಲು ಗೊಂಚಲು
ಅಲ್ಲಲ್ಲಿ ನಡುವೆ
ತೂಗಿವೆ ಹಕ್ಕಿ ತೊಟ್ಟಿಲು
ಬಿಸಿಲ ಬಿರುಸು ತಗ್ಗಿದೆ
ಬೀಸಿ ತಣಿಸಿದ ಗಾಳಿ
ದುಡಿದು ದಣಿದ ದೇಹಕ್ಕೆ
ಈಗಷ್ಟೇ ಹಾಯೆನಿಸಿದೆ!
ನಿಲ್ಲಬಾರದೆ ಇಲ್ಲಿ
ಇನ್ನಷ್ಟು ಹೊತ್ತು?
ಕಿಲಿ ಕಿಲಿಸಿ ನಗುವ ಹಕ್ಕಿ
ಮಧುರ ಮಂಗಳ ಗೀತೆ
'ಮಾಂಗಲ್ಯಂ ತಂತುನಾನೇನ...
ಮೊಳಗಿನ ಗುಂಗು
ವೇಗ ತಗ್ಗಿದೆ ರೈಲಿನೋಟ
ಅಪಾಯದ ಸೂಚನೆಯೇ?
ಪಯಣದಲಿ ಕಂಡ
ಗೆಳೆಯರ ಒಡನಾಟದ
ಸವಿಯ ಚಪ್ಪರಿಕೆ
ಹಂಚಿಕೊಂಡ ಹಾಲು ಜೇನು
ವಿರಸ ವಿಷಾದಗಳೇನು!
ಬೇಸರದ ಬಳಲಿಕೆ ಇಲ್ಲದೆ
ಸವೆದಿತ್ತು ಹಾದಿ
ಗೆಲುವಿನ ಹೂಗಳ ಹಾಸಿತ್ತು ಬೀದಿ!

ಮತ್ತೆ ಮುತ್ತಿತು ಈ
ಹಳಸಲು ಅಲಸಿಕೆ
ನಿದ್ದೆಯ ಮಂತ್ರದಂಡ
ಕೈಯಾಡಿಸಿತ್ತು
ಕೆದರಿತ್ತು ಆಕಳಿಕೆ
ಬೆನ್ನುಹುರಿಯಲ್ಲಿ ಮಾಯದ
ಮುಳ್ಳು ನೋವು
ಮಂಜುಗಣ್ಣು ಅಸ್ಪಷ್ಟನೋಟ
– ಹೀಗೆಯೇ ಸಾಗುವುದು
ಹಿಂಸೆಯೋ ಹಿಂಸೆ!
ಪಯಣ ಮುಗಿಯಲೆಂದಿತು
–ಮನಸು
ಚೂರು ಚೂರಾದ
ಬಣ್ಣ ಗಾಜಿನ ಕನಸು!

ಇದ್ದಕ್ಕಿದ್ದಂತೆ ಹೆಚ್ಚಿದೆ ವೇಗ
ಕೊರಕಲು ದನಿಯಲ್ಲಿ
ನಡುಗುವ ಸಿಳ್ಳು!
ಯಾಕೀ ರಭಸದ ಓಟ
ಕಡೆಯ ನಿಲ್ದಾಣ
ಕರೆದಂತೆ ಬಳಿಗೆ
ನಿಲ್ಲಬೇಕಿತ್ತು ಆಮೆಯಂತೆ !
ನಿಲುಗಡೆಯ ನಿಲ್ದಾಣ
ಬೋರ್ಡಿಗೆ ತಡಕಾಡಿದೆ
ಕಮರಿದ ಕತ್ತಲೋಕತ್ತಲು
ಢಡಗುಟ್ಟಿವೆ ಹಳಿಗಳು
ಅಪಘಾತವೇ? ಅಯ್ಯೋ!
ಕಮರಿಯ ಗರ್ಭದ
ಹೆಬ್ಬಾಯ ತುತ್ತಾಗುವುದೇ?
ನಡುಗಿತ್ತು ಎದೆ
ಗುಡುಗಿತ್ತು ರೈಲು

ಧಡ್ಡೆನುವ ಸದ್ದು
ಕೇಳಿ ಬಂದದ್ದೆಷ್ಟೋ ಅಷ್ಟೆ!
ಚೀರಾಟ... ಗಭೀರ
ಬದುಕುಳಿದರೆ
ನಾಳಿನಾಹಗಲು
ಮುಂದಿನ ನಿಲ್ದಾಣ!!

# ಚೆನ್ನದ ಪುತ್ಥಳಿ

ಅಶ್ವಮೇಧದ ಯಾಗ ಪೀಠ
ಧರ್ಮಾರ್ಥ ಕಾಮ ಮೋಕ್ಷದ
ಸಹಚರಿ ಸೀತೆಯ
ಮಾತು ಬಾರದ
ಮೂಕ ಪುತ್ಥಳೀ
ನಕ್ಕು ನುಡಿದಿತ್ತು
ಪುಣ್ಯ ಪುರಷಾರ್ಥದ
ಬಯಕೆಯಲಿ
ಇವನ ಯಾಗ ದೀಕ್ಷೆ!
ಜನುಮ ಜನುಮದ
ಸಹಚರಿಯ ಭಾಷೆಗೊಂಡು
ಅನುಮಾನದ ಅಲಗಿನಿಂದ
ಕೊಂದು ನನ್ನ ಬೊಂಬೆಯು
ನಿನಗೆ ಬೇಕಾಯಿತೇ

ಲಂಕೆಯ ಅಂಕೆಯಲ್ಲಿ
ಲಂಕೇಶನ ದೃಷ್ಟಿ ಸೆರೆಯಲ್ಲಿ
ಕಾಮ ಪ್ರೇಮದ ಕವಿತೆಗೂ
ಕಿವುಡಾಗಿ ಕ್ಷಣವೆಲ್ಲ ಯುಗವಾಗಿ
ವಿಹ್ವಲತೆಯುರಿಯಲ್ಲಿ
ಬೆಂದೆ ನಾನು
ಚಳಿಗಾಳಿ ಮಳೆ ಬಿಸಿಲು
ಬೇಯುತ್ತ ಬಾಡುತ್ತ
ನಿನ್ನ ನೆನಪಿನ ಸಂಜೀವಿನಿಯ
ನೆಮ್ಮಿ ಬದುಕಿದ ಜೀವ

ನಿರಾಸೆಯ ಕಾರ್ಗತ್ತಲಲ್ಲಿ
ಆಸೆ ಕಿಡಿಯಾಂತು ಕುಳಿತು
ಬವಣೆ ಭಾರವನೆಲ್ಲ
ಮರೆತು ನಿನ್ನ ಹಾದಿಯಕಾದೆ
ಪದರಜದ ಕುಂಕುಮಕೆ
ಪರಮ ಪಾವನ ಪದದ
ಮೃದು ಹೆಜ್ಜೆ ಸಪ್ಪಳಕೆ
ನೀಲ ದೇಹದ ಕಾಂತಿ
ಕಿರಣತೇಜಕ್ಕೆ
ಮಂದಹಾಸದ ಮಿಂಚು
ಹೊಳಪಿಗೆ ಹಲುಬಿ
ಹಂಬಲಿಸಿ ಹರಿಯಿಸಿದೆ
ವ್ಯಥೆಯ ಹೊನಲು
ಉರಿವ ಲಂಕೆಯ ನಡುವೆ
ರಾಮ ಮಂತ್ರದ ರಕ್ಷೆ
ನನಗಿರುವುದೆಂದೆನುತ
ಹಿಗ್ಗಿ ನಲಿದೆ

ಬಂದು ಬಂದೇ ಬಂದು
ಗೆಲುವು ನಲಿವನೆ ತಂದು
ವಿರಹ ಗೀತೆಗೆ ಇನ್ನು
ಕೊನೆಯಾಯಿತೆಂದು
ಭರವಸೆಯ ಮನಕಿತ್ತು
ಮಿಡಿವ ಕಂಬನಿ ಮುತ್ತು
ಪೋಣಿಸುತ ಉಸಿರಲ್ಲಿ
ನಿನಗೆಂದು ನಾನಲ್ಲಿ ಕಾಯುತಿದ್ದೆ
ಅಯೋಧ್ಯೆ ಅಂತಃಪುರ
ರಾಜರಾಣಿಯ ಪಟ್ಟ
ಪದವಿ ಕನಸುಗಳಲ್ಲಿ
ನಾಳೆ ನಾಳೆಗಳ ರಂಗು ರಂಗಿನ
ರಂಗೋಲಿಗಳ ಬಿಡಿಸುತಿದ್ದೆ

ಆದುದೇನು ಬಂದುದೇನು
ಲಂಕೆಯ ಬೆಂಕಿಯಲ್ಲೇ
ಸಂಭ್ರಮ ಸವಿಗನಸುಗಳನ್ನು
ನಿರೀಕ್ಷೆಗಳನ್ನೂ ಸುಟ್ಟು ಬಿಟ್ಟೆ
ಯಾತನೆಯ ಕಡಲಲ್ಲಿ
ಮುಳುಗಿಸಿಟ್ಟೆ
ಅಗಸನಾಡಿದ ಒಡಕು ಮಾತಿಗೆ
ಪ್ರೀತಿ ಕೋಟೆಯ ಕೆಡವಿಟ್ಟೆ!

ನೆರಳಿನಂದದಲಿ ನಿನ್ನ
ಬೆನ್ನಲೇ ನಡೆದು ಬಂದುದನು
ಮರೆತೆಯಾ?
ಮುಳ್ಳುಪಥಗಳನಗುತ
ತುಳಿದುದು
ನನ್ನ ಸುಖಕ್ಕೆಂದರಿದೆಯಾ?
ನನ್ನ ನಿನ್ನ ಪ್ರೀತಿ ಬಲವನು
ಮುರಿದೆ ಹೇಗೆ ನಿಷ್ಠುರಿ!
ಕಾಡ ಬಾಳಿಗೆ ಕೊನೆ ಇದೆಂದು
ನಲಿವು ಗರಿಗಳ ಬಿಚ್ಚಿ ಕುಣಿದೆ
ನನ್ನ ಬದುಕು ಸ್ವರ್ಗವಾಯಿತು
ನನ್ನ ಪುಣ್ಯವು ಫಲಿಸಿತೆಂದು
ವಿಧಿ ವಿಧಾತನ ಹೊಗಳಿದೆ
ಲಂಕೆಗಿಟ್ಟು ಲಗ್ಗೆ ಶತ್ರುವ
ಕೊಂದು ತಂದೆ ಏಕೋ ನನ್ನ?
ಆತ್ಮಸಾಕ್ಷಿಯ ಕೊರಳನಿರಿದು
ಮಾತನೊಲ್ಲದೆ ನೆಪಗಳೊಡ್ಡಿ
ಮತ್ತೆ ಕಾಡಿಗೆ ದೂಡಿದೆ
ಬೆನ್ನ ಬಿಡದೆ ಕಾಡಿದೆ
ತೊರೆದು ನನ್ನ ಬೊಂಬೆ
ತಂದು ಉಸಿರನೂದುವ
ಭ್ರಮೆಯದೇಕೋ

ಧರ್ಮಪತ್ನಿಯ ದೆಸೆಯ
ಕೆಡಿಸಿ ಧರ್ಮಯಾಗದ
ಸೋಗದೇಕೋ!
ಜೀವ ನನ್ನದು ಬಲಿಯ ಕೊಟ್ಟು
ಮತ್ತಾವ ಜೀವದ ಬಲಿಗೆ ನಿಂತೆ
ಎದೆಯನೊಮ್ಮೆ ಬಗಿದು ನೋಡು
ಆತ್ಮಸಾಕ್ಷಿಗೆ ಕಿವಿಯ ನೀಡು
ಅಗ್ನಿ ದಿವ್ಯವು ಸಾಲದಾಯ್ತೇ
ಪ್ರೀತಿ ಮುತ್ತು ಒಡೆದುಹೋಯ್ತೇ?
– ಚೀರಿದಂತೆ ಕೇಳಿ ಬೆಚ್ಚಿದ
ಬದಿಯ ಬೊಂಬೆಯ ನೋಡಿದ
ಬೊಂಬೆಯಿತ್ತು ತಣ್ಣಗೆ
ನಗುತಲಿತ್ತು ಮೆಲ್ಲಗೆ

## ಶೃತಿ ಮಾಡಿಟ್ಟ ವೀಣೆ

ಗಾಳಿ ಬೆರಳಿನ ಸೋಂಕು
ಮಂದಾರ ಗೀತ ಹೊನಲು
ಲೆಕ್ಕವಿಲ್ಲದ ಭಾವರಾಗಗಳು
ನೂರೆಂಟು
ನೇಹದಲಿ ನೇವರಿಸು
ನುಡಿಯುವೆನು ಒಲುಮೆ
ಮಧುರ ಸಂಗೀತ ಚಿಲುಮೆ

ನಿನ್ನಕಂಠ ನನ್ನ ಮಿಡಿತ
ಸ್ವರ ಸಮರಸವಾಗಲಿ
ಸೃಷ್ಟಿಯಲ್ಲೆ ಕಾಣದಂಥ
ದಿವ್ಯಗಾನ ಮೊಳಗಲಿ
ಪ್ರೀತಿ ನಿನ್ನ ಬೇಕಿದೆ
ಅದರಲೆನ್ನ ಉಸಿರಿದೆ

ಮನಮಾನಸ ಸರಸಿಯಲ್ಲಿ
ಜೋಡಿಯಂಚೆ ತೇಲುವಾ
ಮನದ ಪಟವ ಹಾಯಿಬಿಟ್ಟು
ಬಾನ ತೀರ ಸೇರುವಾ

ಶೃತಿಗೆ ಸಂದ ತಂತಿಯಿರಲು
ಬೆರಳಾಡಿತು ಮೆಲ್ಲನೆ
ಎದೆಯಾಳದ ರಾಗರಸವ?
ಹೊನಲುಕ್ಕಿಸಿ ಹರಿಸುವೆ
ನಾಳೆಯೇನೋ ನಾಳೆ ಹೇಗೋ

ಬಿರುಗಾಳಿಯ ಬೀಸಿಗೆ
ಬಿದ್ದರಿನ್ನು ಶೃತಿಲಯಗಳು
ಎಲ್ಲಿ ನಮ್ಮ ಪಾಲಿಗೆ
ಬಾರೆನ್ನುವ ನಿನ್ನ ಬಳಿಗೆ
ಒಲಿದು ಕುಣಿವೆ ಮೃದು ಸ್ಪರ್ಷಕೆ
ಮೈ ಮರೆಯುವೆ ಸಂಗೀತಕೆ
ನನ್ನ ಪ್ರೀತಿಯುಂಗುರ ನಿನ್ನ ಬೆರಳಿಗೆ
ನಿನ್ನ ತೋಳ ಹೂ ಸರ ನನ್ನ ಕೊರಳಿಗೆ

# ಭುವನ ಸುಂದರಿಯರಿಗೆ

ಚಲಿಸುವ ಸಾಲ ಭಂಜಿಕೆಯರೇ
ಆಕಸ್ಮಿಕದಲಿ ಅವತರಿಸಿದ ಅಪ್ಸರೆಯರೇ
ಕೋಟಿಕೋಟಿಯಲಿ ಕುಣಿದೆದ್ದು
ಕಾಣಲು ಕನವರಿಸುವ ಭುವನ
ಸುಂದರಿಯರೇ
ಕಾಣುವುದಿಲ್ಲವೇ ನಿಮ್ಮ
ಪೊರೆಗಟ್ಟಿದ ಕಣ್ಣಿಗೆ
ಬೆನ್ನಿಗಂಟಿದ ಹೊಟ್ಟೆ
ಹಸಿದ ಕೊರಳಿನ ಆರ್ತನಾದ!

ಬೀದಿ ಬೀದಿಯಲಿ ಬದುಕಿ
ಬಚ್ಚಲಾದ ಬಡ ಜೀವಿಗಳು
ಹಿಡಿಯಲಾಗದೆ ಕೊಚ್ಚಿಹೋದ
ಕನಸುಗಳಿಗೂದಕ್ಕದ
ನಿಟ್ಟುಸಿರುಗಳು ನಿಮ್ಮ
ತಟ್ಟುವುದಿಲ್ಲ ಮುಟ್ಟುವುದಿಲ್ಲ
ಹೊಳೆ ಹೊಳೆವ
ವಜ್ರ ಕಿರೀಟದ ಕಾಂತಿ ಕಿರಣದ
ಮೇಲೆ ನೆಟ್ಟ ನೋಟಕ್ಕೆ
ನೋವು ಬಾವುಗಳು
ಕಾಣುವುದಿಲ್ಲ

ನಿಮ್ಮದೆಂದು ಬೀಗುವ
ಸೌಂದರ್ಯದಲಿ ಸ್ವಂತದ್ದೆಷ್ಟಹುದು
ಹೇಳುವಿರೇನು

ನಿಮಗಿಂತ ನೂರುಪಟ್ಟು
ಚೆಲುವ ಅಪ್ಸರೆಯರನ್ನು
ಕಾಣಬರುವಿರೇನು?

ಇಂದ್ರಲೋಕವನಿಳಿಸಿ
ಕಾಮನಬಿಲ್ಲ ಕಡಲನ್ನೇ
ಉಕ್ಕಿಸಿ ಸೊಕ್ಕಿಸಿ
ಬೆಡಗು ಬಿನ್ನಾಣಗಳಿಗೆ
ನಿಮ್ಮ ಸಾಣೆಯಿಡಿಸಿ
ಉಸಿರಾಡಿದರೆ ಸಿಡಿವ
ಸೊಗದುಡಿಗೆಗಳ ತೊಡಿಸಿ
ಕದ್ದು ಕಲಿತು ನಿಮ್ಮೊಳಗೆ
ಅರಳಿದ ಬಿನ್ನಾಣಗಳ
ಬಿಡಿಸಿ ತೋರುತ್ತ
ಯಾರೋ ಸುತ್ತಿ ಹಿಡಿದ
ಸೂತ್ರಕ್ಕೆ ಹೆಜ್ಜೆಗತ್ತುಗಳ
ಮಣಿಸಿ ತಣಿಸಿ
ಧನದಾಹಿಗಳ ಉದ್ಯಮಶಾಹಿಗಳ
ಗದ್ದುಗೆಯ ಗುಮ್ಮಗಳ
ಸಜ್ಜನಿಕೆ ಸೋಗಿನಲ್ಲಿ
ಕಾಮಣ್ಣರ ಕಣ್ಣನೋಟಗಳ
ಚಿತ್ತದಾಟಗಳ
ಮೈಯಮಾಟಗಳ
ಚುಂಬಕದಿ ಸೆಳೆಸೆಳೆದು
ಸುತ್ತಿ ಗೆಲ್ಲುವಿರೇನು?
ಗೆಲುವಿನಾಳದ ಸೋಲು
ಸೋಪಾನಗಳ ಇಳಿವಿರೇನು?
ಗೆದ್ದವರು ನೀವಲ್ಲ
ಗೆದ್ದವರು ನಾವು
ನಿಮ್ಮಂತೆ ನಾವಲ್ಲ
ನಮ್ಮಂತೇ ನೀವು

ನಿಮ್ಮೊಳಗೆ ಜೀವವಿಲ್ಲ?
ಲಯಬದ್ಧವಾಗಿ ಮಿಡಿವ ಮನವಿಲ್ಲ?
ಪಡೆದಿದ್ದಕ್ಕೆ ನೂರು ಪಟ್ಟು
ನಿಮ್ಮೊಳಗಿಂದ ಸೋರಿ ಹೋಗುವುದು
ನಿಮಗರಿವಿಲ್ಲ
ವ್ಯಾಪಾರಿ ತೋಳಗಳ ಹಸಿವು
ನಿಮಗರ್ಥವಾಗಿಲ್ಲ?
ನೀಲಬಾನಿನ ಕೊಡೆಯ
ನೆರಳಲ್ಲಿ
ಸಾಫಾಗಿ ಸೊಂಪಾಗಿ ತೂಗಿ ತೊನೆವ
ಝುಗಝುಗಿಸುವ
ಸವಿ ಸುರಿಯುವ ಮರಗಳು
ಬಣ್ಣ ಬಣ್ಣಗಳಲ್ಲಿ
ಬೀಗಿ ನಲಿವ ಹೂ ಗಂಪು
ಎದೆ ಬೆಂಕಿ ತಣಿಸುವ
ಆ ಚಂದ್ರ ತಂಪು
ಮಂದಗತಿಯಲಿ ಬಂದು
ಮನತಟ್ಟಿ ಮೈಮುಟ್ಟಿ
ಸಾಗುವ ಸ್ನೇಹದೆಲರು
ತನ್ನದೇ ಗತಿಯಲ್ಲಿ
ಲಯಬದ್ಧ ನಡೆಯಲ್ಲಿ
ಬಳುಬಳುಕಿ ಸಾಗುವ
ಬಳ್ಳಿ ತೊರೆಗಳ ನೀವು
ಕಂಡಿಲ್ಲವೇ?
ಚೆಲುವು ಸವಿಗಳನೊಮ್ಮೆ
ಉಂಡಿಲ್ಲವೇ?
ಬನ್ನಿ ಭುವನ ಸುಂದರಿಯರೇ
ನಿಮ್ಮೆದೆಯ ಚೆಲುವನ್ನು
ತುಟಿಗಳಿಗೆ ತನ್ನಿ
ಪ್ರೀತಿ ದಯೆ ಕರುಣೆಗಳ
ಮಳೆಯಾಗಿ ಬನ್ನಿ

ಆತ್ಮ ಸೌಂದರ್ಯದಲಿ
ನೆಲದಿಂದ ಮೇಲೇರಿ
ಬಾನ ದೇವಿಯರಾಗಿ
ಇಳಿದು ಬನ್ನಿ ಉಳಿದು ಬನ್ನಿ
ಮನುಕುಲದ ಬೆಸುಗೆಯನು
ಉಳಿಸಬನ್ನಿ

# ಕಳೆದ ವಿಳಾಸ

ಶಬ್ದದ ಕೊರಲಿರಿದು
ಮೈತುಂಬ ನೆನಪು
ಗುಳ್ಳೆಗಳು
ಚೂರಿಯಿರಿತದ ನೋವು
ನಡೆನಡೆದು ದಣಿದ ಹೆಜ್ಜೆ
ಚಕ್ರಬಂಧದ ಹಾದಿಗಳು
ನುಗ್ಗಿದಷ್ಟೂ ಸಿಕ್ಕು ಸಿಕ್ಕು
ಹೊರಟಲ್ಲಿಗೇ ಬಂದು
ದಿಗ್ಭ್ರಮೆಯ ನಿಲುಗಡೆ

ಸರ್ಕರಾಮಾದಂತೆ
ತಿರುಗುವ ಕಣ್ಣು
ನೆನಪಿನಾಳಕ್ಕೆ ಪಾತಾಳ
ಗರಡಿಯ ಇಳಿಬಿಟ್ಟು
ಮರೆತ ವಿಳಾಸ
ಕಂಡಿದ್ದ ಗುರುತುಗಳಿಗೆ
ತಡಕಾಡಿದೆ

ತಟ್ಟನೆ ನೆನಪಾದಂತೆ
ಬೋಳುಮರ
ಹಕ್ಕಿ ಕಾಯಿ ಗೊಂಚಲು
ಕೆಂಪು ಹೊಳೆ
ಭೂತಬಂಡೆ
ಒಂಟಿಕಾಲಿನ ಕೋಳಿ ಬೊಂಬೆ!
......ಹುಡುಕಿದಷ್ಟೂ

ಮರೆವು ಮುಸುರಿತು
ತಪ್ಪಿಸುವ ದಾರಿಗಳಲ್ಲಿ
ದಾರಿಗೆಟ್ಟು
ಆಸೆಗಳ ಹೂತಿಟ್ಟು
ಹೊರಟ ನೆಲೆಗೇ
ಹೊರಳ ಬೇಕೆಂದಾಗ
ಆ ನೆಲೆಯೂ ದಿಕ್ಕು ತಪ್ಪಿತ್ತು

# ಗೆಳೆಯನ ನೆನಪಿನಲ್ಲಿ

ಹೀಗಾಗಬಾರದಿತ್ತು ಗೆಳೆಯಾ
ಸಹಸ್ರಮಾನದ ಶುಭೋದಯವ
ಕೋರಿ ಕೂಗುವ ಕೋಳಿದನಿಗೆ
ಕಾದಿದ್ದ ಕಿವಿಗೆ ಸಿಡಿಲ ಸುದ್ಧಿ
ಮನದ ಮೃದ್ವಸ್ಥಿ ಛಿದ್ರಛಿದ್ರ
ಚಾಚಿ ಹಾಸಿದ್ದ ಬದುಕು ಹಾದಿಯಲಿ
ಅರ್ಧದಷ್ಟೂ ನಡೆದಿರಲಿಲ್ಲ
ದಣಿವಾಯಿತೇ ಗೆಳೆಯಾ
ಇದ್ದಕ್ಕಿದ್ದಂತೆ ನಾಳೆ ಬೆಳಗನೂ
ಒದ್ದು ಹೊರಟು ಬಿಟ್ಟೆಯಲ್ಲ!

ಮೂರು ದಶಕಕ್ಕೂ ಮೀರಿದ
ಒಡನಾಟ ನೋವು ನಲಿವಿನ
ತಾಕಲಾಟ ಸುಖದುಃಖಗಳ
ಕಣ್ಣು ಮುಚ್ಚಾಲೆಯಾಟ!
ಬಂದಲ್ಲಿ ನಿಂದಲ್ಲಿ
ಕಂಡಲ್ಲಿ ಕುಳಿತಲ್ಲಿ
ನಿನ್ನ ನಗೆಮಲ್ಲಿಗೆಯ
ಚೆಂಡಿನಾಟ
ನಡು ನಡುವೆ ನಡುಗಿಸುವ
ಗೆಲುವಿನ ಅಟ್ಟಹಾಸ
ಜೀವಗಳ್ಳರನೊಳಗೆ
ನೂರೆಂಟನಿರಿಸಿಕೊಂಡೂ
ಇರಿಸು ಮುರಿಸಾಗದ
ಮನದ ಧೀರ ಗಂಭೀರ

ಕನಸು ಕೋಶದ
ಬೀಗವೊಡೆದು
ಇದ್ದುದೆಲ್ಲವ ಹಂಚಿಕೊಟ್ಟು
ನಿರ್ಲಿಪ್ತತೆಯ ಸೆರಗ
ಹಿಡಿದು ಹೊರಟು ಬಿಟ್ಟೆ!

ಎದೆಯ ಪದಕಗಳಾದ
ಮಡದಿ ಮಕ್ಕಳ ಒಲುಮೆ
ಬತ್ತಿ ಬಾಡದ ಜೀವ ಚಿಲುಮೆ
ಮೊಗೆದು ಕುಡಿಸಿ
ತಣಿಸಿದರೆಂಬ ಭಾವಕ್ಕೆ
ಒಲಿದು ಬಹುಕರಿಪ ಆಸೆಯಲಿ
ಶುಭವ ಹಾರೈಸುತಲಿ
ಜೀವರತ್ನವ ನಿನ್ನ
ತೆತ್ತುಕೊಳಬಹುದೇ?

ಲಕ್ಷ ಲಕ್ಷ ಮಂದಿಯ
ಪುಟ್ಟ ಗೂಡುಗಳಲ್ಲಿ
ಲಕ್ಷ್ಯಗಳ ಮೊಳೆಸಿ
ಹಣತೆಗಳ ಉರಿಸಿ
ಗರಿಗಳನು ಬಲಿಸಿ
ಬದುಕು ಬಾನಿನ ತುಂಬ ಹಾರಿಬಿಟ್ಟೆ

ನಿನಗಿತ್ತ ಪ್ರೀತಿ ಹೊನಲಿನ
ಉಕ್ಕು –ಉಬ್ಬುಬ್ಬಿ ಈಂಟುತಲಿ
ನಾಳೆಗಳ ಲೆಕ್ಕವನೆ ಮರೆತುಬಿಟ್ಟೆ
ಹೊಸ ಶತಮಾನದ ಹೊಂಗಿರಣ
ಕಾಣದೆಯೆ ಕಣ್ಮುಚ್ಚಿ ಕಾಣದಾದೆ
ಕರುಳ ಸಂಬಂಧಗಳ
ನೇಹ ನಂಟುಗಳ ಬಿಗಿ ಬಳ್ಳಿಸುತ್ತಿ
ಬಾಳ ಬಣ್ಣಗಳ ಮೂಟೆ ಬಿಚ್ಚಿಟ್ಟು

ಹೆಕ್ಕಿ ಆರಿಸುವ ಮೊದಲೇ
ಕಳೆದು ಬಿಟ್ಟೆ
ಕಳಿತ ಹಣ್ಣುಗಳೆಷ್ಟೊ
ರಸಸೋರಿ ಬತ್ತಿದರು

ತೊಟ್ಟು ಕಳಚದೆ ಮೆತ್ತಿ
ಜೋತಾಡುತಿರಲು
ಯಾವ ಭೀತಿ ಭೂಕಂಪಕ್ಕೆ
ಗದಗುಟ್ಟಿ ಒಮ್ಮೆಲೇ
ಸಾವು ಗುಮ್ಮನ ಕೂಡಿ
ಸಂಧಾನ ಸಾರಿ ಬಿಟ್ಟೆ!

ಹೀಗಾಗಬಾರದಿತ್ತು ಗೆಳೆಯಾ
ನಂಬಿ ಭರವಸೆ ಕೊಟ್ಟು
ಹೀಗೆ ವಂಚಿಸಿ ನಮ್ಮ
ಕಣ್ಣ ತಪ್ಪಿಸಿ ಎಂದೋ
ಹೊರಟೇ ಬಿಟ್ಟೆ
ಆದರೂ ನೀ ಕೊಟ್ಟ ಪ್ರೀತಿಯನು
ನಿನ್ನನ್ನು ನಮ್ಮೆದೆಯ
ಗುಡಿಯಲ್ಲಿ ನಿಲ್ಲಿಸುತ್ತೇವೆ
ನಿನ್ನೊಡನೆ ಕಳೆದ ಕ್ಷಣಗಳನೆಲ್ಲ
ಪೋಣಿಸುತ್ತೇವೆ
ನೀನಿಲ್ಲದಿದ್ದರೂ ನಿನ್ನ ನೆನಪಿನ
ನೆರಳ ಛಾಯೆಯಲಿ ಸಾಗುತ್ತೇವೆ
ನೀ ಬರೆದ ಬದುಕು ಸಾವಿನ
ಭಾಷ್ಯವನು ಮರ ಮರಳಿ
ಓದಿ ಪಠಿಸುತ್ತೇವೆ

# ಡ್ರಾಪ್ ಮಾಡಿ ಆಂಟೀ ಪ್ಲೀಸ್

ಎಂ. ಜಿ. ರಸ್ತೆಯ ಬಿಜಿ ಬಿಜಿ
ಬೆಳಗಲ್ಲಿ ಕಿವುಡಿಸುವ ಸದ್ದುಗಳಲ್ಲಿ
ಕೀರಲು ಕೋಗಿಲೆಯ ದನಿಯ ಬಾಣ
"ಡ್ರಾಪ್ ಕೊಡ್ತೀರಾ ಆಂಟೀ ಪ್ಲೀಸ್"
ದೈನ್ಯ ಬೇಡಿಕೆ
ಥಟ್ಟನೆ ಬ್ರೇಕ್ ಬೀಳುತ್ತದೆ
ನೋಡುವ ಕುತೂಹಲ
ಕಪ್ಪು ಕನ್ನಡಕ ಸರಿಸಿ
ನಿಲ್ಲುತ್ತೇನೆ ಮೊಳಗಿದ
ಹಾರನ್‌ಗಳನ್ನೂ ಮರೆತು !

ಆ ಪುಟ್ಟ ಹುಡುಗನ
ಪ್ರಾರ್ಥನೆಯ ಸೈರನ್
ಹೆಜ್ಜೆಗಳ ಅಡ್ಡಗಟ್ಟುತ್ತದೆ
ಅಚ್ಚರಿ ಕಣ್ಣುಗಳಲ್ಲಿ
ಪ್ರಶ್ನಿಸುತ್ತೇನೆ
"ನೀನಾರೋ ಹುಡುಗ?"
ಹತ್ತು ದಾಟಿದೆ ಹೊತ್ತು
ಶಾಲೆಗೆ ಹೋಗಬೇಕು
ಬಸ್ಸಿಗೆ ಕಾಸಿಲ್ಲ
ತಂಗಿಗೆ ಅನ್ನವೂ ಇಲ್ಲ"
ಬಿಕ್ಕುಗಳು ಒಮ್ಮೆಲೇ
ಸಿಡಿಯುತ್ತವೆ
ತುತ್ತು ತುತ್ತಿನ ಪರದಾಟ
ನಾಳೆಗಳ ಕನಸಿನ ರಂಗಿನಾಟ

ಪಾಟಿ ಚೀಲದಲ್ಲಿ
ಬಂಗಾರದ ಭವಿಷ್ಯತ್ತನ್ನೇ
ಬೈಚಿಟ್ಟ ಭಾವ
ಮೊಗದ ಕನ್ನಡಿಯಲ್ಲಿ
ಮೂಡಿ ಕತೆಯ ಹೇಳಿತ್ತು
'ಯಾರು ಇಲ್ಲವೇನೋ
ನಿನಗೆ? ಹೇಳು ಮರಿ'
ಪ್ರಶ್ನೆಗೆಲ್ಲಿದೆ ಉತ್ತರ?!

ಆಂಟೀ ಪ್ಲೀಸ್ ಡ್ರಾಪ್ ಕೊಡಿ
ನನ್ನ ಕತೆ ನಿಲ್ಲುವುದಿಲ್ಲ
ಶಾಲೆಗೆ ತಡವಾಗುತ್ತೆ
ಪಾಠಗಳು ತಪ್ಪುತ್ತೆ
ದೊಡ್ಡ ದೊಡ್ಡ ಪುಸ್ತಕ ಓದಿ
ದೊಡ್ಡ ಕೆಲಸ ಹಿಡಿಯುತ್ತೇನೆ
ತಂಗಿಗೆ ಜರತಾರಿ ಲಂಗ ಕೊಳ್ಳುತ್ತೇನೆ
ಅಪ್ಪನಿಗೊಂದು ಬೆಚ್ಚನೆಯ
ಕಂಬಳಿ ಕೊಡುತ್ತೇನೆ
ಅಮ್ಮನ ಆಸೆ ಪೂರೈಸುತ್ತೇನೆ

ಆಂಟೀ ದಿನಾ ನೀವು ಹೋಗುವುದು
ಇದೇ ರಸ್ತೆಯಲ್ಲಿ ಅಲ್ಲವೇ?
ನಾನು ಹೀಗೇ ಓಡಾಡುವುದು
ಹೇಗಿದ್ದರೂ ನಿಮ್ಮ ಹಿಂದಿನ
ಸೀಟಿ ಖಾಲಿಯಲ್ಲವೇ ಆಂಟಿ?
ನಾಳೆಯಿಂದ ನಿಮಗಾಗಿ ಕಾಯುತ್ತೇನೆ
ಎಲಾ ಇವನ! ಎಂಥ ಜಾಣ
ಕರಗಿದೆ; ಮರುಗಿದೆ
ಸನ್ನೆಯಲಿ ಒಪ್ಪಿ ನಕ್ಕೆ!
ಝಗ್ಗನೆ ತುಟಿಯಲ್ಲಿ
ಮಂದಹಾಸದ ಮಿಂಚಿನ ಝಲಕು

ಹೊಳೆವ ಕಣ್ಣುಗಳಿಂದ
ಉದುರಿತ್ತು ಕಂಬನಿಯ ಮುತ್ತು
ಅಂದುಕೊಂಡೆ –
ಆ ಪುಟ್ಟ ಎದೆಯಲ್ಲಿ
ಎಂಥ ಕನಸಿನ ಬೆಟ್ಟ!!

## ಪ್ರೀತಿ ಎಂಬ ಹುಡುಗನಿಗೆ

ಲೋ ಪೋರ
ಗೊತ್ತಿದೆ ನಿನಗೆ ನಿನ್ನ ತುಂಟಾಟ
ಚೀರುತ್ತೀಯೆ ಚೂರಿಯಾಗಿ
ನಮ್ಮೆದೆಗಳನ್ನು ನಿರ್ದಾಕ್ಷಿಣ್ಯ
ನರನಾಡಿಗಳಲ್ಲಿ
ಬೇರಿಳಿಸಿ ರಕ್ತ ಹೀರುತ್ತೀ
ಒಳಗೊಳಗೇ ಬಲಿದು
ಹಬ್ಬಿ ಸಾರವನ್ನೆಲ್ಲ
ಅಗಸ್ತ್ಯನಂತೆ
ಆಪೋಷಣೆಗೊಂಡು
ಪೊಟರೆಯಾಗಿಸುತ್ತೀ

ನಿನ್ನ ತಲುಪಲು
ಕಸರತ್ತು ಮಾಡುತ್ತೇನೆ
ದುರ್ಬೀನು ಹಚ್ಚುತ್ತೇನೆ
ದೂರದರ್ಶನ ಆಕಾಶವಾಣಿಗಳಲ್ಲಿ
ಪತ್ತೆ ಹಚ್ಚಲು ನಿನ್ನ
ಜಾಹಿರಾತು ನೀಡುತ್ತೇನೆ
ಭೂಮಿ ಬಗಿಯುತ್ತೇನೆ
ಬಾನು ಜಾಲಿಸುತ್ತೇನೆ
ಕಂದರ ಮಂಥರಗಳಲ್ಲಿ
ಕಾವಲು ಪಡೆ ಹಚ್ಚಿ
ಕಾಯುವಂತೆ ಮಾಡುತ್ತೇನೆ
ಸಿಕ್ಕರೆ ಸಾಕು ನುಣುಚಿ
ಹೋಗದಂತೆ ಬಿಗಿದು
ಸರಪಳಿ ಕಟ್ಟಿ ಸಾಯ ಹಚ್ಚುತ್ತೇನೆ

ನೀನೇನೋ ಚಹರೆಯಿಲ್ಲದವನು
ಕ್ಷಣಕ್ಕೊಂದು ರೀತಿಯಲಿ
ತಲೆಮರೆಸಿಕೊಂಡು
ಮನದ ಬಾಗಿಲುಗಳೊಡೆದು
ನುಗ್ಗಿ ಒಳಸೇರುತ್ತೀ
ಇದ್ದುದೆಲ್ಲವ ನುಂಗಿ
ಸಾಲದ್ದಕ್ಕೆ ವ್ರಣವಾಗಿ ರಣವಾಗಿ
ಕ್ಯಾನ್ಸರ್‌ನ ಕಾಳರಕ್ಕಸನಾಗಿ
ಕೊಂಡೊಯ್ಯುವೆ ಗೋರಿ ಬಳಿಗೆ!!
ಶಾಂತಿಯೆದೆ ಕಡಲನ್ನು
ಮಥಿಸುತ್ತಲೇ ವಿಷದ
ಹೊಗೆಯಾಡಿಸುತ್ತೀ
ಅಂತರಂಗಗಳಲ್ಲಿ ಅಡಗಿ
ಮರಕೋತಿಯಾಟವಾಡಿ
ಗೆಲುವು ಗುಂಗುಗಳಲ್ಲಿ
ನಿರಾತಂಕ ನಿದ್ರಿಸುತ್ತೀ

ನಿನ್ನ ಹಾವಳಿಯ ಹಾನಿ
ಎಷ್ಟೆಂದು ಬಲ್ಲೆಯಾ?
ಪ್ರಭಂಜನನಾಗಿ ಬಂದು
ಕೋಟೆ ಕೊತ್ತಲವ ಕೆಡವಿ
ಧಾಂಧಲಿಸುವೆ
ತೇಲುವ ಜೀವ ನೌಕೆಗಳನ್ನು
ಕಡಲತಳಕ್ಕೆ ತಳ್ಳಿ
ಅಟ್ಟಹಾಸ ವಿಲಾಸ ವೈಹಾಳಿಯಲಿ
ಬೀಗಿ ನಲಿವೆ
ಅಂಗುಲಂಗುಲ ಕೊರೆದು
ಆತ್ಮದಾವರಣಗಳ ಸುಲಿವೆ
ಸಾಕು ನಿಲ್ಲಿಸು ನಿನ್ನ ನಗೆಯಾಟಿಕೆ
ತೆರೆಯೆಳೆದು ನೀ ಹೋಗು
ಪಾತಾಳಕೆ
ಇನ್ನೊಮ್ಮೆ ಬಾರದೊಲು
ಹೇಳು ವಿದಾಯವನಿನ್ನು
ನಮ್ಮ ಒಡನಾಟಕೆ!

# ವಸಂತಗಳ ಕನಸು ಬಿತ್ತುವ ಹುಡುಗ

ಇವನಿಗೆ ಭರವಸೆಯಿದೆ
ಬೆಂದೊಡಲ ಕಾಂಡಗಳಲ್ಲೂ
ಹಸುರೊಡೆಸುತ್ತಾನೆ
ಅಂತರಂಗದ ಆಳದಲ್ಲಿ
ಹುದುಗಿ ತಳಗಟ್ಟಿದ
ತಾಜಾತನವನ್ನು
ಜೀವಧಾತುವಿನ ತರಲತೆಯನ್ನು
ಮತ್ತೆ ತುಂಬುತ್ತಾನೆ
ಋತುಚಕ್ರದ ಹಾವಳಿಯಲ್ಲಿ
ಗದಗುಟ್ಟಿ ನಡುಗುತ್ತವೆ
ಭೀಷಣ ಬಿರುಗಾಳಿಯಲ್ಲಿ
ಭೂಗತವಾಗಿ ಉರುಳುತ್ತವೆ
ಮುಸಲಧಾರೆಯಲಿ
ಮುಳುಗಿಯೂ ತೇಲುತ್ತ
ದಡಮುಟ್ಟಿ ಗ್ರೀಷ್ಮದಲಿ
ಮೈ ಬೆಚ್ಚಗಾಗಿಸಿಕೊಳ್ಳುತ್ತ
ಕೆಂಡಗಳ ಕಾವಿಗೆ
ಚಂಡಕಿರಣನ ರೋಷಕ್ಕೆ
ತುತ್ತಾಗಿಯೂ ಬತ್ತಲಾಗಿಯೂ
ನಾಳೆ ಬರುವ ಹುಡುಗನ
ಮಾಂತ್ರಿಕ ಸ್ಪರ್ಷದಾಸೆಯಲಿ
ಜೀವ ಉಸಿರಾಡುತ್ತದೆ
ಅದೃಶ್ಯ ಗವಿಯ ಕೋಶದಲಿ
ಕುಳಿತು ನಾಳಿನ ಬಣ್ಣಗಳ
ರೂಪಗಳ ಇಂಪು ತಂಪುಗಳ

ನಕ್ಷೆ ಹೆಣೆಯುವ
ಹುಡುಗನ ಕನಸುಕೌದಿಯಲಿ
ಹುದುಗಿ ಜೀವ ಹಿಡಿಯುತ್ತದೆ
ಎಂದೋ ಒಂದು ದಿನ
ಬಂದು ಬಣ್ಣ ಬಣ್ಣದ
ವಸಂತಗಳನ್ನು ಬಿತ್ತಿ
ಭವಿಷ್ಯದ ಸುಂದರ
ಭಾವ ಚಿತ್ರವನ್ನು ಬಿಡಿಸಿ
ಹರವುತ್ತಾನೆ
ತ್ರಸ್ತ ತನು ಮನಕೆ
ನೆಮ್ಮದಿಯ ತಂಪ
ಸಿಂಪಡಿಸಿ ತಣಿಸುತ್ತಾನೆ

## ಸಿಟ್ಟು

ತಿರುಗುತಿವೆ ಕಪ್ಪು
ಎದೆಯ ನೆರಳುಗಳು
ತುಟಿಯಾಚೆ ಜ್ವಾಲೆ
ನಾಲಗೆಯ ಸೀಳುಗಳು
ಬಂದಿರೆಲ್ಲಿಂದ ಹಸಿವು
ಭೂತಗಳೇ
ಅಡವಿಯಿಂದಲೋ
ಅಥವಾ ಅಧೋ ಲೋಕದಿಂದಲೋ
ನನ್ನ ದುಃಖದಲಿ
ವಂಚನೆಯಿಲ್ಲ ಸಂಚಿಲ್ಲ
ಹಸಿವ ಬೆಂಕಿಯ
ನಂದಿಸಲು ಇಗೋ
ಚಾಚುತ್ತೇನೆ ಸ್ನೇಹ ಹಸ್ತ

ಸಿಟ್ಟಿನ ಜ್ವಾಲಾರಸ
ನರನರದಲ್ಲೂ ಹರಿಯುತ್ತದೆ
ಬೊಜ್ಜು ಬೆಳೆಸಿಕೊಂಡ
ದೇಹಗಳನ್ನು
ನುಜ್ಜು ಗುಜ್ಜಾಗಿಸಲು
ಬಂಡೆಯಾಗುತ್ತೇನೆ
ಅವರ ಕಣ್ಣ ಕತ್ತಲನ್ನು
ಪಂಜು ಕೈಗಳಿಂದ
ಸೀಳಿ ಎಸೆಯುತ್ತೇನೆ
ಹೂ ತೋಟಗಳನ್ನು
ಕಿತ್ತು ಬಿತ್ತುತ್ತೇನೆ ಅನ್ನವನ್ನು

ಸೊಂಪು ಇಂಪಿನ ಕವಿತೆಗಳ
ಕೊರಲಿಂದ ಕವಿತೆ ಬರೆಯುತ್ತೇನೆ
ಅನ್ನದ ಹಾಹಾಕಾರ ಕುರಿತು
ನಿಟ್ಟುಸಿರುಗಳಲ್ಲಿ
ನರಳುವ ನನ್ನವರನ್ನು
ಮೆಟ್ಟಿಲಾಗಿಸಿಕೊಂಡು
ಮೇಲೇರಿ ಕುಳಿತು
ಮೇಜವಾನಿ ಮಾಡುವ
ಮಂದಿಯನ್ನೆಲ್ಲ
ಬಂದೂಕು ಬಾಯಿಗೆ
ತುತ್ತಾಗಿಸುತ್ತೇನೆ

# ದೇಶನಾಯಕನ ಮರಣ

ಮುಂಜಾವಿನಲ್ಲಿ
ಫ್ಲಾಷ್ ನ್ಯೂಸ್
ದಶಕಗಳ ಉದ್ದಕ್ಕೂ
ದೇಶಭಕ್ತಿ ಹಿತಚಿಂತನೆಯ
ಉಸಿರಾಡುತ್ತಿದ್ದ
ಗಾಂಧೀವಾದದ ಮಹಾನ್
ನೇತಾರನ ಮರಣ
ದೇಶಕ್ಕೆ ಕವಿದಂತಾಗಿದೆ
ಶೋಕದ ಗ್ರಹಣ"
– ಸುದ್ದಿಯ ಬೆನ್ನಲ್ಲೇ
ಭಜನೆ ಪ್ರಾರ್ಥನೆ
ಸಂತಾಪ ಸಭೆ ! ನಿರ್ವಚನ
ಅಗಲಿದವನ ಆತ್ಮಕ್ಕೆ
ಮಡದಿ ಮಕ್ಕಳು ಮಂದಿಗೆ
ಸಾಂತ್ವನದ ಸಂದೇಶ
ಸಾವಿನನಿವಾರ್ಯತೆಯ
ತತ್ವೋಪದೇಶ!
'ಹುಟ್ಟಿದವನು ಸಾಯಲೇಬೇಕು'
ಸಾವೇ ಬದುಕಿನ ಕೊನೆಯಲ್ಲ
ಪುನರಪಿ ಜನನಂ ಪುನರಪಿಮರಣಂ...

ಅವನಿಲ್ಲವೆನ್ನುವುದಲ್ಲ
ಅವನಿದ್ದಾನೆ!
ನಮ್ಮೊಡನೆ ಇಲ್ಲವಷ್ಟೆ!!
ನಮ್ಮ ಪಾಲಿಗೆ ಉಳಿದದ್ದು

ನೆನಪು ಭಾವಚಿತ್ರ
ಇದ್ದದ್ದು ಎದ್ದದ್ದು ಮೇಲೇರಿದ್ದು
ಮುಗಿಲ ತಬ್ಬಿದ್ದು
ಎಲ್ಲವೂ ಈಗ ಇತಿಹಾಸ ಕೋಶದೊಳಗೆ

ಈಗೇನು? ಮುಂದೇನು?
ಖಾಲಿಯಾದ ಖುರ್ಚಿಗೆ
ಯಾರು ವಾರಸುದಾರ
ಅವನಂಥ ಸರದಾರ!!

ಗಲಿಬಿಲಿಯ ಸಂತೆಯಲಿ
ಸಾವಿರ ಸಾವಿರ ಪ್ರಶ್ನೆಗಳು!

ಶಾಲಾಕಾಲೇಜು ಸರ್ಕಾರಿ
ಕಛೇರಿಗಳಿಗೆ ರಜೆಯ ಘೋಷಣೆ
ವಾರವಿಡೀ ರಾಷ್ಟ್ರಾದ್ಯಂತ
ಶೋಕಾಚಾರಣೆ!

ಶಾಲೆಯಲ್ಲಿ ಗುಲ್ಲೋ ಗುಲ್ಲು
ನಗು ಕೇಕೆ ರಜೆಯ ಸಂಭ್ರಮ

ಬಂದೀಖಾನೆಯಿಂದ
ಹೊರಬಂದು ಬಣ್ಣ ಬಣ್ಣದ
ರೆಕ್ಕೆ ಹರಡಿ ಹಾರುವ
ಪುಟ್ಟ ಪುಟ್ಟ ಚಿಟ್ಟೆಗಳ
ಮನೋಲ್ಲಾಸದ ಮೋಜು

ಹರಿದಾಡಿದಲ್ಲೆಲ್ಲ
ಚಿಣ್ಣರ ಗದ್ದಲ ಗುಲ್ಲು
ಸ್ಲೇಟು ಪುಸ್ತಕಕ್ಕೆ ವಿದಾಯ
ಗೆಲುವಿನ ಗರಿಗಳ ಬಿಚ್ಚಿ
ಬಯಲ ಗಾಳಿಯ ತಂಪಿನಲಿ

'ರತ್ತೋ ರತ್ತೋ ರಾಯನ ಮಗಳೆ'
ಕುಂಟೆಬಿಲ್ಲೆ, ಮರಕೋತಿಯಾಟ
ಗಜ್ಜುಗ ಗೋಲಿಗಳಲ್ಲಿ
ಮಗ್ನ ಮನಸು
ಹೋಟೆಲು ಚಿತ್ರಮಂದಿರ
ಗಳಲ್ಲಿ ಕಿಕ್ಕಿರಿದ ಮಂದಿ
ಮೈಲಿ ಮೈಲಿಯುದ್ದದ
ನಿತ್ಯಕ್ಕಿಂತ ಹತ್ತು ಪಟ್ಟು
ಹೆಚ್ಚು ವ್ಯಾಪಾರ!
ಗಲ್ಲಾ ಪೆಟ್ಟಿಗೆಯಲ್ಲಿ
ಝಣ ಝಣದ ಸದ್ದು ಕುಣಿತ

ಕೊಳಗೇರಿಯ ಗುಡಿಸಲಲ್ಲಿ
ತಿಮ್ಮನೆಂಬೊಬ್ಬನ ಸಾವು
ಎದೆ ಸೀಳುವ ಚೀತ್ಕಾರ
ಅನ್ನ ಕೊಡುವವನ ಅವಸಾನ
ಹತ್ತು ಮಂದಿಯ ತುತ್ತಿಗೆ
ಬಂತೀಗ ಕುತ್ತು
ಸ್ಮಶಾನಯಾತ್ರೆಯ ಜೊತೆಗೇ
ಕವಿವ ಕಾಳರಾತ್ರಿಗಳು
ಕರ್ಣಧಾರವೇ ಮುರಿದು
ಮುಳುಗಲಿದೆ ಹಡಗು!

ಮುಂದೇನು ಮುಂದೇನು
ಅಳಲ ಕಡಲಲ್ಲಿ
ತೇಲಿ ಬಂದದ್ದು ಇಷ್ಟೆ!
ದೇಶನಾಯಕನು ಸತ್ತಂದೇ
ಇವನು ಸತ್ತದ್ದೊಂದು
ಯೋಗಾಯೋಗ!
ಆದರೆಲ್ಲಿದೆ ಸುದ್ದಿ?
ಯಾರಿಗಿದೆ ಸಂತಾಪ?

ಮೌನದಲಿ ಸಾಗಿತ್ತು
ಮಸಣಯಾತ್ರೆ
ಅಳುವವರ ಹನಿಗಳು
ನೆಲವ ತೋಯಿಸಲಿಲ್ಲ
ಅಗಲಿಕೆಯ ನೋವಿವನ
ದೇಶದೊಂದು ಪಿಳ್ಳೆಯನೂ
ಕಾಡಲಿಲ್ಲ
ದೇಶನಾಯಕನ ಮರಣದಲಿ
ತತ್ವ ಮಥನ ಗುಣಕಥನ

ತತ್ವದಾಚೆಗೂ ಅಳಲು
ಹರಿಹರಿದು ಹೊನಲಾಯಿತು

ಸತ್ತವನ ಬದುಕೂ
ಕತೆಯಾಯಿತು
ಇತಿಹಾಸ ಕೋಶದಲಿ
ಪುಟವಾಯಿತು

ಸಾವು ತಿಮ್ಮನದೆಲ್ಲೊ ಹುಡಿಯಲ್ಲಿ
ಪಿಸುದನಿಯ ಹಾಡಾಯಿತು

## ರಸ್ತೆಗಳು

ತೆರೆದ ರಸ್ತೆಗಳಲ್ಲಿ
ಕದಮುಚ್ಚದ ಬೀದಿಗಳಲ್ಲಿ
ಓಡಾಡುವ ಜನಕ್ಕೆ
ಪರವಾನಗಿಯಿಲ್ಲದ್ದೇ
ನೆರೆಯಿತ್ತು ಇಲ್ಲಿ
ಕಳ್ಳ ಖದೀಮರ ಜಾತ್ರೆ
ಕಡಲಿನುಬ್ಬರ ಬೊಬ್ಬೆ
ಮುಚ್ಚುಮರೆಯ ಮುಸುಕಿನಲಿ
ಮುತ್ತೈದೆ ಮರ್ಯಾದೆ ಮೀರಿ
ಹಾದರಕ್ಕೆ ಹಾದಿ ತೆರೆದಾಗ
ಅವರಿವರ ಎದೆಯೊಳಗೆ
ಹಿತದ ಮಿಡಿತ
'ಕ್ಷಮಯಾಧರಿತ್ರೀ' ನುಡಿಯ
ಅನ್ವರ್ಥಕ್ಕೆ ರಕ್ತ ಮಾಂಸಗಳ

ಭಕ್ಷಿಸಿದ ಭಕ್ಷಕರಿಗೂ
ಮೂಕ ಶೋಕದ
ನೈವೇದ್ಯ ಸಂತೃಪ್ತಿ
ಕೊನೆಸಾಗುವ ಕನಸುಗಳ
ತೂಗುಯ್ಯಲಿನ ಜೀಕು ಜೀಕಿನ
ಗೀತ ಸ್ಪಂದದಲಿ ಪುಲಕ
ಬಿಳಿಯ ಮೋಡಗಳಿಂದ
ಕಳೆದುಕೊಂಡ ಹುಟ್ಟುಗಳ
ಅನ್ವೇಷಣ
ಮನದಗುಬ್ಬಿಗಳುಲಿವ

ಅರೇಬಿಯನ್ ನೈಟ್ಸ್
ಕಥೆಗಳ ರೋಮಾಂಚನ

ಬಿತ್ತಿ ಬೆಳೆದ ಪಾಪಗಳ
ಸುಗ್ಗಿಗೂ ಮೈ ತೆರುವ ಮನಸು

ಹಮ್ಮು ಬಿಮ್ಮಿನ ಸಾಲುಮರಗಳ
ಶಿಸ್ತಿನ ಸಲಾಮುಗಳೊಪ್ಪಿ
ಕೆಂಪು, ಹಳದಿ, ನೀಲಿ ಹೂಗಳ
ಮಳೆಯ ಪುಲಕಕ್ಕೆ
ಮೈ ತೆರೆಯುತಿದ್ದ ರಾಜಬೀದಿಗಳು
ಮರೆಯಾಗಿ
ಕಳ್ಳದಾರಿಗಳಲ್ಲಿ ಕುಣಿಯುತಿವೆ
ನವಿಲುಗಳು

ಬಿಳಿಯ ಚಹರೆಗಳ ಮೇಲೆ
ಪಟ್ಟಾಗಿ ಕುಳಿತ
ಕಪ್ಪು ಕನ್ನಡಕದ ಜನಕ್ಕೆ
ಬೆಳಕು ಭೂತ
ಅದಕ್ಕೆಂದೇ ರಸ್ತೆಗಳ
ಗುತ್ತಿಗೆದಾರರು ಇಲ್ಲಿನ
ಎಲ್ಲಕ್ಕೂ ಡಾಂಬರು ಬಳಿದು
ಕಪ್ಪಾಗಿಸಿ
ಮುಖ್ಯರಸ್ತೆಗಳನ್ನು
ಮೆರವಣಿಗೆಗಿರಿಸಿ
ಸಂದುಗೊಂದುಗಳ
ಚಕ್ರಕೋಟೆಯ ನಡುವೆ
ಕ್ಷೇಮದಂತ; ಪುರದೊಳಗೆ
ನಡೆಸಿದ್ದಾರೆ ನಿರಾತಂಕ
ದೈತ್ಯದರಬಾರು!
ಅಫೀಮು ಗಾಂಜಾಗಳ

ಉನ್ಮತ್ತ ಸುಖದಲ್ಲಿ
ಅನಭಿಷಿಕ್ತ ಸಾಮ್ರಾಟರಾಗಿ
ಖಲಿಸ್ಥಾನ ಗುಲಿಸ್ಥಾನಗಳ
ಕಾರುಬಾರು ನಡೆಸುತ್ತಾ
ನೀತಿಗೆ ನೇಣಿಟ್ಟು
ದೇಶಭಕ್ತಿಯ ಶಿಲುಬೆಗಿಟ್ಟು
ಅನ್ನವಿಟ್ಟವರಿಗೆ
ಕನ್ನವಿಟ್ಟು
ರಕ್ತಮಾಂಸದ ಮೇಜವಾನಿಯಲಿ
ಮೈಯ ಮರೆತವರು
ಪಾತಾಳ ಗವಿಗಳಲಿ
ಹೆಪ್ಪುಗಟ್ಟಿದ ಸೃಷ್ಟಿಮೂಲದ
ಕುರುಡು ಕತ್ತಲಿನ ಸುಳಿಯಲ್ಲಿ
ಸಿಕ್ಕು ಬಿಕ್ಕುವ ರಸ್ತೆಗಳಿಗೆ
ನೆನಪುಗಳು ಕಾಡುತ್ತವೆ –
'ಉತ್ಸವ ಜಾತ್ರೆ ದೇವರ ತೇರು
ಹರಿದಾಡಿ ಪುಲಕಿಸಿದ್ದು
ಕಿಲಕಿಲನೆ ಅರಳಿಬಿದ್ದ
ಹೂಗಳು ಮುತ್ತನಿರಿಸಿದ್ದು'

ಉಳಿದಿದೆ ಈಗ ಭೀತಿಭೂತದ
ನೆರಳು ಊಳಿಡುವ ಗೋರಿಗಳು
ಭೂಗತ ಕನಸುಗಳು!!

# ನೆನಪಾಗದೆ ದೊರೆ

ನೆನಪಾಗದೆ ದೊರೆ
ನನ್ನ ನೋಡಿದ ಗಳಿಗೆ
ಬರಲೊಲ್ಲೆಯಾ ಬಳಿಗೆ
ಕನಸಿನಲಿ ಕನವರಿಸಿ
ಕಾದುಕುಳಿತಿಹೆನೆಂದೆ
ದನಿಯ ಕೇಳದೆ ನನ್ನ
ಕಳವಳಿಸುತಿಹೆಯೆಂದೆ
ಬಂದು ನಿಲ್ಲಲು ಮುಂದೆ
ಮೋರೆ ಮರೆಸುವೆಯೇಕೆ?

ಕಾಡು ಹಕ್ಕಿಗಳೆಲ್ಲ
ಇರುಳು ಚುಕ್ಕಿಗಳೆಲ್ಲ
ನಮ್ಮ ಪ್ರೇಮಕೆ ಸಾಕ್ಷಿ
ನಿಲ್ಲಲಿಲ್ಲವೆ ದೊರೆಯೆ
ಹರಿವ ಹೊನಲಿನ ಹಾಡು
ಕುಣಿವ ಅಲೆಗಳ ಪಾಡು
ಬಾಹು ಬಂಧನ ಚುಂಬನ
– ಉನ್ಮತ್ತ ಸುಖದಲಿ
ಮರೆತ ಕ್ಷಣಗಳನು
ಮರೆತೆಯೇನೋ!!

ದೂರ ನೀಲಿಯ ಕಡಲು
ತೇಲಿ ಹೋಗುವ ಒಡಲು
ನುಡಿಯದಿರು
ಮೌನವೇ ನಿನ್ನ ಕವಿತೆ

ನೀ ಕೊಟ್ಟ ನೂರಾರು
ಪುಲಕಗಳೆ ನನ್ನ ಕವಚ
ನೋಟ ನಿನ್ನದು ನನಗೆ
ಸೂರ್ಯ ಬೆಳಕು!
ಕಾಣದೊಲು ಮೊಗದಿರುಹೆ
ನನಗದುವೆ ರುದ್ರರಾತ್ರಿ
ಸರಿಯದಿರು ದೂರಕ್ಕೆ
ಸೇರಲಾಗದ ತೀರಕ್ಕೆ
ಜೀವ ನಿಲ್ಲದು ನನ್ನ
ನೀ ಬಾರದೊಲು ಇರಲು

ಉಲಿದು ಭಾವುಕನಂತೆ
ಬಣ್ಣಿಸುತ ಕವಿಯಂತೆ
ಬರೆದ ಕವಿತೆಯ ಮೋಡಿ
ರಾಗದಲಿ ನನ್ನನ್ನೇ ಕರಗಿಸಿದ್ದೆ
ನಮ್ಮ ಮಿಲನೋತ್ಸವದ
ಸಂಭ್ರಮದ ಕ್ಷಣಗಳನು
ಮಲ್ಲಿಗೆಯ ಮುಗುಳಾಗಿ
ಮುಡಿಗೇರಿಸಿದ್ದೆ

ಬಂದರೂ ಬಾರದೊಲು
ಮೊಗವ ತಿರುಗುವೆಯೇಕೆ?
ಹಾದಿ ಮುಳ್ಳಿಗೆ ಹೆದರಿ
ಜೀವಗಂಬಳಿ ಹಾಸಿ
ಪ್ರೇಮನಂದಾದೀಪ
ಉರಿಸಿ ಕಾದಿದ್ದೆ
ಹೃದಯ ಸಿಂಹಾಸನವ
ತೆರವಾಗಿ ನಿನಗಿರಿಸಿ
ಭಾವ ಮಂದಾರಗಳ
ಮಾಲೆಯಿರಿಸಿದ್ದೆ
ತಳಿರು ತೋರಣ ಕಟ್ಟಿ

ಕಾಲದರಿವನೆ ಮರೆತು
ತೆರೆದರಿವನೆ ಮರೆತು
ತೆರೆದೆದೆಯ ಕದಗಳನು
ನಾ ಕಾಯುತಿದ್ದೆ
ಕ್ಷಣವೆಲ್ಲ ಯುಗವೆನಿಸಿ
ನಂಜುನೋವನು ನುಂಗಿ
ಪಂಚಾಗ್ನಿ ತಪದಂತೆ
ನಿನ್ನ ಬರವಿಗೆ
ಹಾರೈಸುತ್ತಿದ್ದೆ

ಒಮ್ಮೆಯಾದರೂ ಬಂದು
ಮೊಗತಿರುಹಿ ನಕ್ಕುಬಿಡು
ಹೆಪ್ಪುಗಟ್ಟಿದ ನೋವು
ಹಾಡಾಗಿ ಬರಲಿ
ಕ್ಷಣವಿದುವೆ ಬಾಳಲ್ಲಿ
ನೆನಪಾಗಿ ಇರಲಿ

# ಹೆಣ್ಣು

ನೂರು ನೌಕೆಗಳಿದ್ದರೂ
ಅಳೆದರೂ ಲೆಕ್ಕಕ್ಕೆ ಸಿಗದ
ಕಡಲ ವಿಸ್ತಾರ
ಗಂಡುಗಾಲಿಯ ಕೀಲು
ಉರುಳು ರಕ್ಷೆ
ಪುರುಷ ಪೌರುಷದಬ್ಬರ
ಜಲಪಾತ ಕೊರಳಿಗೆ
ರಜ್ಜುಬಂಧ
ಮಂದಹಾಸದ ಬಂಧುರ
ವೃತ್ತ ಸೇತುವೆಯೊಳಗೆ
ಟ್ರಾಯ್‌ಗಳೆಷ್ಟೋ
ಜಲಸಮಾಧಿ
ಕ್ಲಿಯೋಪಾತ್ರಳೆದೆಯೊಳಗೆ
ಮಿಡಿನಾಗರದ ಹೆಡೆಯಾಟ
ಹತ್ತಿ ಹಾಸಿನ ಮೆತ್ತನೆಯ
ಮಂದಾರ ಹತ್ತುವೆತ್ತರದ
ವರೆಗೂ ನೂಲೇಣಿ ನುಣುಪು
ದೂರ ದಿಗಂತದಲಿ
ಬೆಳಕು ಹೆರಿಗೆ
ಕಣ್ಣು ಕಮರಿಗಳೊಳಗೆ
ಮತ್ಸ್ಯ ಸೆರೆಯುಸಿರು
ಪುರುಷ ಸಿಂಹದೆದೆಯೊಳಗೆ
ಡೈನಾಮೈಟು
ಕಾಡಿಗೆಯ ತುಟಿಯೊಳಗೆ
ಹಾಲಿನೂಟೆಯ ಸಿಹಿ

ಪಳಿಯುಳಿಕೆಗಳ ಅಗೆದು
ತೆಗೆದರೆ ಗ್ರಾಫು
ಬೆಳೆದ ಹಿಮಾಲಯ
ಒಗ್ಗರಣೆಯ ಗೊಗ್ಗರ
ಕಂಠದಲಿ ಏರಿಳಿತದ ಗಾನ
ಮುದುಡಿ ಮಲಗಿದ್ದ
ಕುಬ್ಜಮೌನ
ತೆವಳಿ ಎದ್ದ ರಭಸಕ್ಕೆ
ಗೋಲ ಗಂದರಗೋಳ
ಕಲ್ಪ ಕಲ್ಪಗಳಿಂದಿಳಿದವರಿಗೂ
ದಕ್ಕದಾಗಿದೆ ಬಾವಿಯಾಳ
ರೆಕ್ಕೆಯೊಡಲಿನ ಹಕ್ಕಿ
ಬೆರಳು ಬರಿ ನೆರಳು!

## ಮದರ್ ಥೆರೆಸಾ

ಯಾವ ಲೋಕದ
ಯಾವ ತೋಟದ
ಮಣ್ಣಿಂದ ಬಂದಳೊ
ಮಂದಾರ ಮಲ್ಲಿಗೆಯಾಗಿ
ಇಲ್ಲಿ ಘಮಘಮಿಸಿ ನಿಂತಳು

ಇವಳ ಕರುಣೆಯ ಕಡಲಿ
ನೊಡಲಲಿ ಮಿಂದೆದ್ದರೆ
ಮಿಸುನಿ ಹೊಳಪು
ಮಡಿಲಿನಕ್ಕರೆ ಸಕ್ಕರೆಯ
ಸವಿಯುಂಡವರಿಗೆ
ಸ್ವರ್ಗವಂಗೈಯ್ಯಲಿ

ಮೊಗೆ ಮೊಗೆದು ಕೊಡುವ
ಪ್ರೀತಿಯೌತಣದಲ್ಲಿ
ತಣಿದ ಜೀವಕೋಟಿಯ
ಕೊರಳಲ್ಲಿ ಸ್ತೋತ್ರ ಸಂಗೀತ
ತಾನು ಬಿತ್ತಿದ ಪ್ರೀತಿ ಬೀಜ
ಗಳು ಮೊಳಕೆಯೊಡೆದದ್ದು
ಎಷ್ಟೆಂದು ನೋಡಹೊರಟವಳು

ಹಣ್ಣಾದ ದೇಹ ಫಲ
ಹನಿವ ರಸವೆಲ್ಲ ಸರ್ವರುಜಾಪಹಾರಿ
ತೊಟ್ಟು ಸವಿದರೆ ಸಾಕು
ಕೊನರಿ ನಿಲ್ಲುವುದು ಜೀವಬೇರು

ಹತಾಶೆ ನಿರಾಶೆಯ ಗಲ್ಲಿಗಳಲ್ಲಿ
ಸುಳಿದಾಡುವ ದಿವ್ಯತೇರು
ನೋವು ನರಳಿಕೆ ಸವರಿ
ಕೊಟ್ಟು ಕಳೆವಳು ಕರುಣೆಯ
ಮುಲಾಮಿನ ದಿವ್ಯೌಷಧಿ
ಥಟ್ಟನೆಯೆ ಚೆಲ್ಲುವ
ನಗೆಬೆಳಕು ಹುಡಿ ಕಿರಣ

ದಿಕ್ಕಿಲ್ಲದೆಲ್ಲೋ ಮಣ್ಣುಗೂಡುವ
ಜೀವಿಗಳಂತರಂಗಕ್ಕೆ
ಇವಳೇ ಸಿಹಿ ಹೂರಣ
ಸದ್ದುಗದ್ದಲ ದೂರ
ನೀರವದ ದಂಡೆಯಲಿ
ಉಸಿರ ಹೂಗಳ ಉಯ್ಯಾಲೆಯಾಟ
ಲಕ್ಷ ಲಕ್ಷ ಕಣ್ಣುಗಳಲ್ಲಿ
ಜಗ್ಗನೆ ಹೊತ್ತಿ ಉರಿಯುವ
ಸೂರ್ಯನಿಗೆ ಶಾಖವಿಲ್ಲ
ದಿಕ್ಕು ತಪ್ಪಿ ಕರುಣೆಯಿಲ್ಲದ
ಕಾಡು ಹಾದಿಗಳಲ್ಲಿ
ಮಾದಕ ಮೋಹನ ಮುರಳಿ
ನೆಮ್ಮದಿಯ ಮಂತ್ರ
ದಂಡದ ಬೀಸು ಸವಿಗನಸು

ತೆರೆತೆರೆಯ ಮೊಗವೆಲ್ಲ
ಬೃಂದಾವನ
ಬದುಕೆಲ್ಲ ನಳನಳಿಪ
ನಂದನವನ
ಇವಳ ಸವಿಮಾತಿನಲಿ
ಹಸಿವು ದೂರ
ಪ್ರೀತಿ ಕರುಣೆಯ
ನೇವರಿಕೆಯಲಿ ಜೀವಕ್ಕೆ
ರಕ್ಷೆ ಭರವಸೆಯ ಸಾಂತ್ವನ

ಅನಾಥ ಆಂದೋಲನದ
ಎದೆಯಲ್ಲಿ ಮೂಡಿ ನಿಂತಿದೆ
ಮದರ್ ಥೆರೆಸಾ ಚಿತ್ತಚೇತನ
ನೋಟ ಮಾಟಗಳಲ್ಲಿ
ನೆಲೆಗೊಂಡಿದೆ
ದಿವ್ಯ ಕರುಣೆಯ ನವ ವಿಧಾನ!
ನೊಂದು ಬೆಂದವರೆದೆಯಲ್ಲಿ
ನಡೆದಿದೆ ಈ ಮನುಜ
ದೈವದ ಆರಾಧನಾ!!

# ಸಹಸ್ರಮಾನದ ಶಿಶುಪುರುಷ

ಹದಗೊಂಡಿದೆ ಭೂಮಿ
ಮುದಗೊಂಡಿದೆ ಮುಗಿಲು
ಬಾಯಾರಿದೆ ತಾರಗೆಯೊಲುಮೆ
ದಿವದಾರತಿ ಎಲ್ಲೆಲ್ಲೂ
ಮರಮರದೊಳು ಹೊರ
ಹೊಮ್ಮಿದೆ ಹಕ್ಕಿಯ ಕೊರಳು
ಬುವಿಬಾನಲಿ ಕಿಲಿಕಿಲಿಸಿದೆ
ಬೆಳಕಿನ ರಂಗೋಲಿ
ಬಾರೆನ್ನುತ ಜನ ಕೋರಿದೆ
ನವ ಹರುಷದಿ ಈ
ಶಿಶು ಪುರುಷನಿಗೆ!

ಅಂಟು ಪ್ಲಾಸೆಂಟಾ ಕಡಲ
ಕೋಟೆಗಳು ಬಿರುಕು
ಬಿಟ್ಟಿವೆ ಬಾಯ್ತೆರೆದು
ಅಂಧಕಾರವನು ಇರಿದುಕೊಂದಿದೆ
ಹೊಸ ಬೆಳಕಿನ ಕಿರಣ
ಕುಣಿದಾಡಿದೆ ಚರಣ

ವರುಷ ವರುಷದೊಲು
ಬಂದಂತಲ್ಲ ಹೊಸ
ಮನ್ವಂಥರನಿವನು
ಇವನಲಿವೆ ಯುಗದ ಸಾರಕೋಶಗಳು
ವಿಷ್ಣುಮಂತ್ರಗಳು ಕೃಷ್ಣ ತಂತ್ರಗಳು
ಜೊತೆಗಿಷ್ಟು ರಾಮಾವತಾರದ
ಆದರ್ಶಗಳು ಅನಿವಾರ್ಯಗಳು

ಉಕ್ಕು ಸೊಕ್ಕಿನಾ ಭೋಗದಾಶೆಯ
ಕಾಡುಕೊಂಬೆಕೊಂಬೆಗಳಲ್ಲಿ
ನೋವು ಸಾವಿನ ಹಾಡು ಎಂದಿನಂತೆ!
ಕತ್ತಲಿಸಿ ನಂದಿದೆ ಸೂರ್ಯಕಿರಣ
ಮಿಡಿಯುತಿದೆ ಅನವರತ
ಮೃದಂಗ ಮರಣ
ಎದೆಯ ಕೋಶಗಳಲ್ಲಿ
ಬರಿದು ಮಮಕಾರ
ಪ್ರಳಯವಾಗಲೂ ಬಹುದು
ಬದುಕು ಅಪರಂಪಾರ!

ಹೆಜ್ಜೆಘಾತಗಳಿಂದ ಬಿಕ್ಕುತಿದೆ
ಭೂಮಿ ರತ್ನಪ್ರಸವದ
ಕಸುವು ಬತ್ತಿ ಬಾಡುತಿದೆ
ತೇಲುತಿದೆ ಎಲ್ಲೆಲ್ಲೂ
ಕಸಕಡ್ಡಿ ಪಾಚಿ
ಖಾಲಿಯಾಗಿದೆ ನಮ್ಮ
ಹೃದಯ ಖೋಲಿ
ಬಂಜೆ ಮನಸುಗಳಿಂದ
ಹೊಮ್ಮಿ ಬರುವುದು ಹೇಗೆ
ಪ್ರೀತಿ ಸ್ನೇಹದ ಲಾಲಿ?

ಅವತಾರದಾಟಗಳನಾಡುತ್ತ
ಬರುತಿಹನು ಶಿಶುಪುರುಷ
ಬೂದಿಗಟ್ಟಿದ ನೆಲಕೆ
ಭಾಗೀರಥಿಯ ಹರಿಸಿಯಾನು!
ಕಾಯಿಗಟ್ಟಿದ ಕೋಟಿ ಕೋಟಿ
ಕಣ್ಣುಗಳಲ್ಲಿ ಉಲ್ಲಾಸದ
ಮಲ್ಲಿಗೆಯು ಅರಳಬಹುದು
ನೂರೆಂಟು ಕಾಮನಬಿಲ್ಲು
ಕನಸುಗಳಿಗೂ ರೆಕ್ಕೆ ಮೂಡಬಹುದು

ಅನ್ನ, ನೀರು, ಗಾಳಿಯೆಲ್ಲವು
ಇನ್ನಾದರೂ ಧಾರಾಳ
ದೊರೆಯಬಹುದು!
ಇವನ ಬರವಿಗೆ ಕಾದವರು
ದೇವತೆಗಳಲ್ಲ
ಹೂ ವಿಮಾನ ಹೂ ಮಳೆಯೂ ಇಲ್ಲ
ನೆಲದಾಯಿ ಮಡಿಲ ಹಾಸಿ
ಶಿಶು ಪುರುಷನ ಕುಕಿಲಿಗೆ
ಬೆಂದ ಎದೆಗೆ ತಂಪ ತರುವ
ಸೊಗದ ಮಳೆಯ ಹನಿಸಿಗೆ
ಹೂಗಂಧದ ಕಂಪಿಗೆ ಸೊಂಪಿನ
ಪ್ರಾಣವಾಯುವಾಗಿ ಬರುವ
ಮಂದಮಂದ ಗಾಳಿಗೆ
ಸೊಗವನೆಲ್ಲ ಹೊತ್ತು ಬರುವ
ನಮ್ಮೆಲ್ಲರ ಬಾಳಿಗೆ

# ಸಂಕ್ರಾಂತಿ ಗೀತೆ

ಅಸತೋ ಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗ್ಗಮಯ
ಮೃತ್ಯೋರ್ಮಾ ಅಮೃತಂಗಮಯ
– ಕ್ಷಿತಿಜದಾಚೆಯಿಂದ
ತೇಲಿ ಬಂತು ದನಿಯ ನೌಕೆ

ಅರುಣರಾಗದ ಮೊದಲ
ಕಿರಣ ನೆಲವ ತಬ್ಬಿತು
ಭೂಮಿ ತುಂಬ ಪುಲಕ ಚಿಲುಮೆ
ಚಿಮ್ಮಿ ಹರಿಯಿತು
ನವ ಸಹಸ್ರಮಾನದ ಪುರುಷ
ತೆರೆದಿರಿಸಿದ ಬಾಗಿಲಲ್ಲಿ
ಬಂದು ನಿಂತ ಸಂಕ್ರಾಂತಿ ಪುರುಷ
ಇವನಿಗಿದೆ ಸಹಸ್ರಮಾನದ
ಮೊದಲ ಹರುಷ!

ನೋವು ಸಾವುದುಃಖ ದುಮ್ಮಾನ
ನಡುವೆಯೂ ಸ್ವಾಗತಕೆ
ಮೀಸಲಿದೆ ಸಂಭ್ರಮದ ಚಿನುಕು
ಸುಗ್ಗಿಯ ಹಿಗ್ಗಿನ ರಾಶಿ
ಮುಂಬಾಗಿಲಲ್ಲಿ ಕಿಲಕಿಲನೆ
ನಗುವ ರಂಗೋಲಿ ಚಿತ್ತಾರ
ಮುಂಗಟ್ಟು ಮೆರೆಸಿದ
ಪಚ್ಚೆ ತೋರಣ ಸಾಲು
ಮಣ್ಣ ಮಡಕೆಯೆದೆಯಾಳದಲಿ

ಹೊಗರೆದಿದ್ದ ಘಮಲು
ಒಳಮನೆಯಲ್ಲಿ ಸುಳಿದಾಡುವ
ಗೆಜ್ಜೆಯ ಘಲುಕು
ಕೊಟ್ಟಿಗೆಯಲು ಕೊರಳುಲಿದಿವೆ
ಕಿಣಿಕಿಣಿ ಘಂಟೆ
ಸಂಕ್ರಾಂತಿಯ ಸಂಭ್ರಮದಲಿ
ಮೈಮರೆತಿದೆ ಜಗವು
ಸೊಗವೆಲ್ಲವು ಇಲ್ಲಿಳಿದಿದೆ
ಎಂದಿತು ಮನವು

ಎಳ್ಳು ಬೆಲ್ಲದ ಸವಿಯ
ಬಟ್ಟಲನು ಇವನಿಗೆಂದೇ
ಇರಿಸಿ ಕಾದಿದ್ದಾಳೆ ನೆಲದ ತಾಯಿ
ಬರಿದಾಗಿದ್ದರೂ ಮಡಿಲ
ಪ್ರೀತಿಯನು ಒಂದಿಷ್ಟು
ಮರೆಸಿ ಇರಿಸಿದ್ದಾಳೆ
ನೆನ್ನೆ ಮೊನ್ನೆಯ ನೋವನೆಲ್ಲವನು
ಇವನ ಸ್ವಾಗತದುತ್ಸಾಹದಲಿ
ಮರೆತಿದ್ದಾಳೆ
ಪಯಣದಿಂದಲಿ ಪಯಣಕ್ಕೆ
ಸಾಗುವ ಇವನ ಪಯಣಕ್ಕೆ
ಎಲ್ಲಿದೆ ಬಿಡುಗಡೆ?
ಒಮ್ಮೆಯಾದರೂ ವರುಷದಲಿ
ಬಂದಿವನು
ಮಂತ್ರದಂಡದ ಬೀಸಿ
ಅಳಲ ಕುಡಿಗಳ
ಕಿತ್ತೆಸೆದು ನಲಿವುಗಳ
ನಾಟುತ್ತಾನೆ

ಹರುಷಗಳ ಹೊನಲುಕ್ಕಿಸಿ
ಬದುಕುಗಳ ಹಾಯಿಸುತ್ತಾನೆ

ಮತ್ತೆ ಬರುವ ಭರವಸೆಯಲಿ
ಸೂರ್ಯ ರಥವೇರಿ
ಬಂದಷ್ಟೇ ವೇಗದಲಿ ಸಾಗಿ ಮರೆಯುತ್ತಾನೆ
ಕತ್ತಲು ಮುತ್ತುತ್ತದೆ
ದಿಗಿಲು ಕಂಗೆಡುತ್ತದೆ
ಕೋಳಿ ಕೂಗುತ್ತದೆ ಕಾಲ ಸಾಗುತ್ತದೆ
ನೆನ್ನೆಯ ನೆನಪಷ್ಟೇ ಉಳಿಯುತ್ತದೆ
ಉಂಡ ಊಟ ತಂಗಳಾಗುತ್ತದೆ
ಕಂಡ ಕನಸುಗಳು ಕರಗಿ
ಬರಿದಾಗುತ್ತದೆ
ಎಂದಿನಂತೇ ಜೀವ ಗಂಗೆ
ಕೊಳೆಕಸ ತುಂಬಿಕೊಂಡು
ಹರಿಯುತ್ತದೆ
ಕೊಟ್ಟಿಗೆಯ ತುಂಗೆ ಕನಲಿ ಕರೆಯುತ್ತದೆ
ಮತ್ತೆ ಕಾಯುತ್ತೇನೆ
ಮರುವರುಷಕ್ಕೆ ಬರುವ
ಸಂಕ್ರಾಂತಿಯ ಸಂಭ್ರಮಕ್ಕೆ!!

# ವಿಜಯೋತ್ಸವ

ವಿಜಯೊತ್ಸವದ ಉತ್ಸಾಹ
ಹಸುರೊಳಗೆ ಅರಳಿತ್ತು
ಹಬೆಯ ಕಾರುವ ಕೆಂಡಗೊಂಚಲು
ಬಣ್ಣ ಬೆಳಕುಗಳೊಳಗೆ
ವ್ಯಥೆಯು ಮಿಂಚುತ್ತಿರಲಿ
ತಾಳ ತಮ್ಮಟೆ ಕುಣಿತ
ಕೇಕೆಗಳೊಳಗೆ
ಮೊಳಗಿತ್ತು ಹಸಿವಿನ ಭೇರಿ
ಗಲ್ಲಿಗಲ್ಲಿಗಳಲ್ಲೂ
ನಡೆದಿತ್ತು ಅಳಲ ಕಛೇರಿ
ಹಗಲು ರಾತ್ರಿಗಳ ಬಸಿರೊಳಗೆ
ಸೀದಿತ್ತು ಸುಖದ ಕನಸು
ರೋಷ ಘೋಷದಪಶ್ರುತಿಯ
ತಾಂಡವಕೆ ಮೂಕವಾಗಿದೆ ಮನಸು

ಕೋಟಿ ಕಣ್ಣುಗಳಲ್ಲಿ
ಕಾರಿರುಳು ಕವಿದಿರಲು
ಎದೆಯ ಬತ್ತಿಗಳುರಿದು
ಬೆಳಕು ಮೂಡುವುದೇನು?
ನಗೆಯ ಬುಗ್ಗೆಗಳೊಣಗಿ
ಉಪ್ಪು ಕಡಲುಗಳುಕ್ಕಿ
ಎಣಿಕೆ ಮೀರಿದ ಜೀವ
ಧಾತುಗಳ ಮುಕ್ಕಿ
ಎಲುಬುಗಳೇ ಚಿಗುರೊಡೆದು
ಹಣ್ಣು ತೊನೆಯುವುದೇನು?

ದಾರಿದ್ರ್ಯದರಸೊತ್ತು
ಥಕ್ಕಿಟಿಸಿ ಕುಣಿದಿರಲು
ವೈಭವದ ಸಿರಿಮೊಳಗು
ರಂಜಿಸುವುದೇನು?

ರಾಮನೊಬ್ಬನೆ ಇದ್ದು
ರಾವಣನ ಗೆದ್ದ
ದಶಮಿಯಂಚಲಿ
ವಿಜಯದುತ್ಸವವು ಸಿದ್ಧ
ಒಮ್ಮೆ ರಾಮಾಯಣದಿ
ರಾಮರಾವಣಯುದ್ಧ
ನಿತ್ಯರಾಮಾಯಣವೀಗ
ಸಾವಿರ ಸಾವಿರ ಸಮರಗಳು ಸಿದ್ಧ
ಗೆಲುವ ಬಲಯಾರಿಗಿದೆ
ವಿಜಯದುತ್ಸವಕೆ?!
ಗಂಜಿಗೂ ಗತಿಯಿಲ್ಲ
ನಂಜಿಗಂತೂ ಮಿತಿಯೇ ಇಲ್ಲ
ಪಾಯಸದ ಪರ್ವವಿದು
ಯಾರಿಗೇಕೆ?
ತಬ್ಬಿರುವ ಕನಸುಗಳೆ
ನಮಗೆ ಸಾಕೇ?

ನೋವಿನಾ ಹಣತೆಗಳು
ತೆವಳುರಿವ ಬೆಳಕು
ನಿಟ್ಟುಸಿರು ನಿಮಿಷಗಳ
ಮೈತ್ರಿ ಮಿಲನದ ಸೆಳಕು
ನೆಚ್ಚಿ ಚಾಚುವುದಕ್ಕೆ
ಊರುಗೋಲುಗಳಿಲ್ಲ
ಬಯಲಾಸೆ ಗೋಲಗಳೆ
ನಮ್ಮ ತಬ್ಬಿಹವೆಲ್ಲ
ಎಡೆಎಡೆಗೆ ಹೊದರೆದ್ದ

ಹುತ್ತಗಳ ಭಯದಲ್ಲಿ
ಸಾವಿನೂಟದ ನೆನಪು
ನಾಯಿಗಳ ಬಲೆಯಲ್ಲಿ
ಬತ್ತಲೂ ಕತ್ತಲೂ
ಕೋಟೆಗಳ ಸೆರೆಯಲ್ಲಿ
ಉಸಿರುಗಟ್ಟುತ್ತ ಸಾಯುತಿರುವಲ್ಲಿ
ಯಾವ ಗೆಲುವಿಗೆ ಈಗ
ವಿಜಯದುತ್ಸವದ ಉತ್ಸಾಹ
ಧಾಳಿಮಾಡಿದೆ ಒಂದೇ ಭಯದ ಭಾವ!!

## ಪು.ತಿ.ನ ನೆನಪಿನಲ್ಲಿ

ರಸಚೇತನ ಚಿರನೂತನ
ಚಲಹಿಮಗಿರಿ ಶಿಖರ
ಬಿಳಿಬಾನಿನ ಮೊಗದಲ್ಲಿ
ನಗೆ ಚಂಚಲ ಕಿರಣ

ಬೆಲೆಕಟ್ಟದ ಗಡಿ ಇಲ್ಲದ
ಮುದಸಾಗರ ಹೃದಯ
ತಳತಟ್ಟಲು ಕದ ತೆರೆವುದು
ಸೊಗ ಚೆಲುವಿನ ನಿಲಯ

ಮೃದುಕೋಮಲ
ರಸಭಾವದ ಮಂದಾರದ
ನಂದನ ಸೊಕ್ಕೇರಿದ
ಉಲ್ಲಾಸದ ತಾನನಾನನ!

ನೆಲಕಂಟಿದೆ ಬೇರು
ದಿವದತ್ತಿದೆ ದೃಷ್ಟಿಯ ತೇರು
ಅಡಿ ಅಡಿಗೂ ಆಲೋಕಿತ
ಪಥ ಸಾಗಿದೆ ಆನಂದದ ನೆಲೆಗೆ
ಮನಮುಗುಳಿನ
ತುಟಿ ತೆರೆದಿದೆ ನವ
ಶಾರದ ಸೊಗಕೆ
ಉಳಿಪೆಟ್ಟಿಗೆ ಮೈಮೂಡಿದೆ
ಮಿಸುಕಾಡಿದೆ ಶಿಲ್ಪ
ತುಟಿಬಿಚ್ಚಲು ನುಡಿಮಧುರ

ಮೊಗಬಾನಲಿ ನಗುತಲಿಹ
ಕಾಂತಿ ಕಿರಣ ಚಂದಿರ

ಗಿರಿಕಂದರದೆದೆಯೊಳಗಿನ
ನುಡಿಗಟ್ಟಿದ ದಿವದ ಮೌನ
ಅನುಕ್ಷಣವೂ ಮನದಲಿದೆ
ಮನಮೋಹನ ಕೃಷ್ಣನ ಧ್ಯಾನ

ಅಂಡಲೆಯುತ ಹುಡುಕಾಡಿದೆ
ಕೊಳಲೂದುವ ತುಟಿಯ
ಎಡಬಿಡದೆಲೆ ನೆಲೆಗೊಂಡಿದೆ
ಯಮುನೆಯ ತಟಿಯ
ಮನ ಹೋಲುತ ನಲಿದಾಡಿದೆ
ಆರಾಧಾನ ನಟಿಯ

ಗರಿಕೆದರುತ ಋತುಹಾಸಕೆ
ನಲಿದಾಡಿದೆ ಬಗೆ ನವಿಲು
'ಚಿಕಹೂ'ವಿನ ದನಿ ಜೇನಿಗೆ
ಮನದುಂಬಿಯ ನಲಿವು
ಬ್ರಹ್ಮಾಂಡವ ತೆಗೆದಪ್ಪಿದೆ
ಇವರೆದೆಯೊಲವು

# ನಿದ್ದೆ ಮಾಡುವ ಹುಡುಗಿ

ಸದ್ದು ಮಾಡದೆ ಮಲಗು
ನಿದ್ದೆ ಮಾಡುವ ಹುಡುಗಿ
ಪ್ರಲಯ ಪ್ರಚಂಡ
ಬಿರುಗಾಳಿಯ ಬಿರುಸು
ನೂರಾರು ಭೂಕಂಪ
ಸಿಡಿವ ಲಾವಾ ಕಡಲು

ರಾತ್ರಿಗಳಿಗೆ ನೆಮ್ಮದಿಯಿಲ್ಲ
ಗದಗುಟ್ಟಿಸುತಿದೆ ಭೂತ ಸಂಚಾರ
ನಕ್ಷತ್ರಗಳಿಲ್ಲ
ಬರಿಬೆಂಕಿ ಕೆಂಡಗಳು
ಎದೆ ನಡುಗಿ ಚಂದ್ರನೆಲ್ಲೊ ಪರಾರಿ
ಕಾಳ ರಕ್ಕಸರ ರಾತ್ರಿ ಪಹರೆ

ಸೂರಿಲ್ಲ ಮಾಡಿಲ್ಲ ಕಿಟಕಿಯಿಲ್ಲ
ಬಂಡೆ ಮುಚ್ಚಿದ ಬಾಯಿ
ಗುಹೆಯೊಳಗೆ ನೀನು
ಗಾಳಿ ಸುಳಿಯುವುದಿಲ್ಲ
ನಿನ್ನ ಪ್ರಾಣದೀವಿಗೆಯ
ಬೆಳಕಿನಲಿ ಇನ್ನಿಷ್ಟೆ
ಉಸಿರಾಡುತಿರು ಹುಡುಗಿ

ಎದ್ದು ನೋಡಿದರೆ ಕಾಣುವುದು
ಎಲ್ಲವೂ ಅಯೋಮಯ!
ಇದ್ದು ಬಿಡು ಇದ್ದಲ್ಲೇ

ನೆಮ್ಮದಿಯ ನಿದ್ದೆಯಲಿ
ಬುಸುಗುಟ್ಟಬೇಡ ಹಾವಿನಂತೆ
ನಾಳೆ ಬಂದೀತಿಲ್ಲಿ ಸ್ವಚ್ಛಗಾಳಿ
ನಿನ್ನಸುತ್ತ ದಪ್ಪ ಕಾಡಿನ ಸಮಾಧಿ
ಸೀಳುವುದಕ್ಕೆ ಬಂದಾನೊಬ್ಬ
ರಾಜಕುವರ ಸಾಹಸದ ಸರದಾರ
ಝಳಪಿಸುತ ಖಡ್ಗವನು
ಖುರಪುಟಿಸಿ ಕುದುರೆಯನು
ಹಳುವ ಕಡಿಕಡಿದು ಒಳನುಗ್ಗಿ
ಕೆಂಪುಬಾಡದ ತುಟಿಗೆ ಲಗ್ಗೆ ಇಟ್ಟಾನು

ಭಗ್ನ ಮಂದಿರವಾದ
ನಿನ್ನೊಡಲ ಗುಡಿಯಲ್ಲಿ
ಚೈತನ್ಯ ತೈಲವನು
ಎರೆದು ಹೊತ್ತಿಸಿಯಾನು
ಆಸೆ ದೀಪಗಳ!
ಪ್ರತಿಕೂಲ ಪಹರೆಗಳು
ಕಬಳಿಸುವ ಚಹರೆಗಳು
ಮರೆಯಾಗಿ ಬೀಸಿ ಬರುವುದು
ನೋಡು ಗಂಧ ಮಾದನಗಾಳಿ
ಆಗುವುದು ಆಕಾಶ ನಿನ್ನದು
ಸ್ವಚ್ಛ ಬಯಲೂ ನಿನ್ನದು!
ಮುಡಿಯಲ್ಲಿ ಮುಸಿಮುಸಿ
ನಗುವುದು ನಕ್ಷತ್ರಮಲ್ಲಿಗೆ
ತೂಗಾಡುವ ಚಂದ್ರನೂ
ನಿನ್ನೆದೆಯ ಪದಕವಾಗುವನು
ಅಸ್ಪಷ್ಟದನಿಗೆ ಧ್ವನಿವರ್ಧಕದ
ಗರಿಗಳು ಕೆದರುತ್ತವೆ
ನಿನ್ನ ಹೆಜ್ಜೆಗಳೆಲ್ಲ ಮುಗಿದು ಕಡೆಗೆ?!
ಕಾಲಕೋಶದಲಿ ಗಟ್ಟಿಗೊಂಡ
ನಿನ್ನೆದೆ ಗುಡುಗಿಗೆ ನಡುಗುವುದಿಲ್ಲ

ಬಿರುಗಾಳಿಗೆ ಕದಲುವುದಿಲ್ಲ
ರಾಕ್ಷಸವರ್ತಮಾನಕ್ಕೆ
ಹಿಮ್ಮೆಟ್ಟುವುದೂ ಇಲ್ಲ
ಈಗೊಂದಿಷ್ಟು ಮಲಗು ಹುಡುಗಿ
ನಾಳೆಗಳ ಭರವಸೆಯಿಲ್ಲ
ಆದರೂ ಇಂದಿನ ಹತಾಶೆಗಳ
ಗೋರಿಮಾಡಿ
ಮೌನ ಸಾಂತ್ವನದಲ್ಲಿ
ಸದ್ದಿಲ್ಲದೆ ಮಲಗು
ಫೀನಿಕ್ಸ್‌ನಂತೆ ಮತ್ತೆ
ಮರುಹುಟ್ಟು ಪಡೆವೆ
ಬೆಳ್ಳಿ ಕಿರಣದ ಝುಲಕು
ನವಪ್ರಭಾತದ ಫಲಕು
ನಿನ್ನ ಭಾಗ್ಯದ ಉಡಿಗೆ ಬಿದ್ದೀತು!!

# ವಸುಂಧರೆಯ ಪ್ರಾಯ

ಇವಳು ವಸುಂಧರೆ
ಎಪ್ಪತ್ತು ವಸಂತಗಳಲ್ಲೂ
ನಿಗಿ ನಿಗಿ ಹೊಳೆವ ಬಂಗಾರ
ಯಾವ ಋತುವೂ ಇವಳ
ತಂಟೆಗೆ ಹೋಗುವುದಿಲ್ಲ
ನಿತ್ಯಹರಿದ್ವರ್ಣದ ಕಾಡಿನಂತೆ
ಸದಾ ಹಸಿರು ! ಹಸಿರು !
ತಿಳಿನಗೆಯ ಹೊಳಪು
ಹಗಲಲ್ಲೂ ಹೊಳೆವ
ನಕ್ಷತ್ರ ಕಾಂತಿ
ತೆರೆಗಟ್ಟದ ತಿಳಿಗೊಳ
ಪಾರದರ್ಶಕ ಜಲದಬಿಂಬ
ಹೆರಳೊಳಗೆ ಮುಡಿದ
ಗುಲಾಬಿ ಕೆಂಪಿನ ನೆರಳು
ಕೊಂಬೆಯಲ್ಲಿ ಕುಳಿತ
ಕೋಗಿಲೆಯ ನಾಚಿಸುವ
ಕೊರಳು
ನಡೆದಾಡಿದರೆ ಇವಳು
ತಂಗಾಳಿಯ ಜೋಕಾಲಿ

ಎಂಥ ಪ್ರಾಯವೋ ಇವಳದು!
ಕಾಲ ಕದಲಿದರೂ ಕರಗದು
ಇವಳ ಅನಂತ ಚೆಲುವು
ಮೊಗೆದಷ್ಟೂ ಪುಟಿಯುತ್ತದೆ
ನೋಡಿದಷ್ಟೂ ನೋಡುವ

ನುಡಿದಷ್ಟೂ ನುಡಿಸುವ
ಬಯಕೆಗಳ ಕೆರಳಿಸುವ
ಈ ವಸುಂಧರೆಗೆ ಪ್ರಾಯ
ಸರಿಯುವುದಿಲ್ಲ
ಬಂಜರಾಗುವುದಿಲ್ಲ
ಚಿರನೂತನೆ ಚಿರಯೌವ್ವನೆ
ಇವಳೂ! ಇವಳೇ
ಆಫ್ರೋದಿತೇ!!

# ಪ್ರೀತಿಗೆಲ್ಲಿದೆ ಎಲ್ಲೆ

ಪ್ರೀತಿಗೆಲ್ಲಿದೆ ಎಲ್ಲೆ
ಆಕಾಶವೇ ಅಳತೆ
ಮೊರೆವ ಕಡಲೇ ಆಳ
ಪತಿ ಪ್ರಣಯಿಗಳ
ಪ್ರಣಯ ಕವಿತೆಗೆ
ನಿಲ್ದಾಣವೇ ಇಲ್ಲ

ಪ್ರೀತಿಯೊಂದೇ ರೀತಿ
ಪ್ರೀತಿಯೊಂದೇ ನೀತಿ
ಪ್ರಣಯ ಪಲ್ಲವಿಯೊಂದೆ
ಬಾಳಗೀತೆ
ಕಲ್ಪಕಲ್ಪಗಳಲ್ಲಿ ಕರುಗುವುದಿಲ್ಲ
ಪ್ರಳಯದಲ್ಲಿ ಬೆದರುವುದಿಲ್ಲ
ಎದೆಗೆಡದ ಪ್ರೀತಿ!

ಹಸಿವಿಲ್ಲ ತೃಷೆಯಿಲ್ಲ
ದಣಿವಿಲ್ಲ ಮಣಿವಿಲ್ಲ
ಕಾಲದ ಹಕ್ಕಿಯ ನೆರಳೂ
ಇವಳ ಹಾಯುವುದಿಲ್ಲ
ಪ್ರಣಯ ಯುಗಳದ
ಮೈಯ ಮಾಟಗಳೆಲ್ಲ
ಶೃಂಗಾರ ಲೀಲೆಯ ತೋಟ
ದಿವ್ಯಕ್ಷಣಗಳ ಕೂಟ
ಪ್ರೇಮದಾಟ
ನೋಟದಲಿ ಬೆಳಗು
ಮಾಟದಲಿ ಸೃಷ್ಟಿ!

ಈ ಪ್ರೇಮಲೋಕದಲಿ
ಹಗಲು ರಾತ್ರಿಗಳಿಲ್ಲ
ಸೂರ್ಯ ಹುಟ್ಟುವುದಿಲ್ಲ
ಮುಳುಗುವುದೂ ಇಲ್ಲ
ಇವರಿಗಿವರೇ ಸ್ವಯಂಪ್ರಭರು
ಸೂರ್ಯ ಸಿಂಧುಗಳು!

ಹೃದಯವಕ್ಷಯ ಭೂಮಿ
ಮೊಗೆದಂತೆ ಉಕ್ಕುವ
ಒಲವಿನ ಜೀವ ಚಿಲುಮೆ
ಆದರೂ ತೀರದಿದೆ ಅಗಸ್ತ್ಯದಾಹ!
ರಾಜ್ಯಗಳು ಉದಿಸಲಿ
ರಾಜ್ಯಗಳು ಅಳಿಯಲಿ
ಪ್ರಳಯ ಮೇಘಗಳೆ ಘರ್ಜಿಸಲಿ
ಮೃತ್ಯುಸಾಗರವೇ ಘೂರ್ಮಿಸಲಿ
ನಿರಾತಂಕ ನಿಸ್ಪಂದ
ಪ್ರಣಯ ತಪದಲಿ ಮಗ್ನ
ಯುಗಳ ಜೀವಿಗಳು !

ಪ್ರೇಮ ಪೀಯೂಷವನೆ
ಸವಿಸವಿದು ಮೆದ್ದರೂ
ವಿಧಿಯಾಟದಲಿ ಸೋತು
ಸಾವನೊಲಿದರು ಕೂಡಿ
ಧೂಪ ಧೂಮವೆ ಅವರ
ಉಸಿರ ನಂಜಾಯ್ತು
ಶಯನ ಮಂದಿರವೇ
ಮೃತ್ಯು ಪಂಜರವಾಯ್ತು!!
ಪ್ರಣಯಿ ಬಾಳಿನ ಕವಿತೆಯೊಂದೇ
ಅಮರವಾಯ್ತು?!

–(ಪಂಪನ ಆದಿಪುರಾಣದಲ್ಲಿನ 'ವಜ್ರಜಂಘ ಶ್ರೀಮತಿ ಪ್ರಸಂಗ ಕುರಿತು)

# ಸಖನಿಗೆ

ಸಖ ಬಾರೋ ಸಾಕಿನ್ನು
ಕುಲುಮೆಯೊಡನಾಟ
ಬೆಳೆಸಿ ನಲಿಸಿದ್ದಾಯ್ತು
ನಮ್ಮ ಹೂದೋಟ
ಹಸಿವಿನಾ ಉರಿತಣಿಸಿ
ಸವಿ ಹಣ್ಣು ರಸತಂಪು
ಮೈಮರೆವಿನಾಟಕ್ಕೆ
ಸೊಗಸು ಹೂ ಕಂಪು

ಅವರಿವರ ಹೊರೆಗಾಗಿ
ಹೆಗಲಿತ್ತು ದಣಿದಾಯ್ತು
ಬಸಿರ ಕುಡಿಗಳಿಗೆಂದು
ಒಡಲ ತೇದಾಯ್ತು
ಮುಳ್ಳು ಹಾಸಿಗೆ ಮೈಕೊಟ್ಟು
ಮುಗುಳ ಹಾಸಿದೆವು
ಹನಿಯೊಂದನೆಮಗೆನದೆ
ಜೇನ ಹೊಳೆ ಹರಿಸಿದೆವು

ನನ್ನ ನೀ ಕಂಡಾಗ
ನಿನ್ನ ನಾ ಪಡೆದಾಗ
ಎಷ್ಟೊಂದು ರಂಗುಗಳು
ರೆಕ್ಕೆಗಳ ಕುಣಿಸಿದವು
ಜೋಡಿ ಹೆಜ್ಜೆಗಳೂರಿ
ನಲಿವಿನಲಿ ನಡೆದಾಗ
ಭೂಮಿಯೆದೆ ಪುಲಕಗಳು
ಮೊಗ್ಗಾಗಿ ಮೂಡಿದವು

ನಕ್ಕ ನೆಮ್ಮದಿಯ ಗಳಿಗೆಗಳು
ದಿವ್ಯ ರಾಸವಾಡಿದವು
ಭಾವ ಸಿಂಧು ಅಲೆಗಳೇರಿ
ಹೊರಟ ನಮ್ಮ ಪಯಣ
ಬೆಳಕಿನೂರ ಸೇರಿ ಸಾರಿ
ಕಿನ್ನರ ಸ್ನೇಹವು ನಮಗಿರಲು
ನಿನ್ನೊಲವಿನ ಸರಪಳಿ ಬಿಗಿದಿರಲು
ತಟ್ಟನೆ ಕೇಳಿತು ಕರೆಯೊಂದು
ಬೆಚ್ಚಿತು ಬೆಚ್ಚನೆ ಎದೆಯಂದು
ಕೆಂಡಗಳುರಿದವು ನೆನಪಿದೆಯಾ?

ಹತ್ತು ಮಂದಿಯ
ಹಗೆ ಹೊಗೆಯಲ್ಲೂ
ಬದುಕನೂರಿ ಉಳಿದೆವು
ಮೇಲೆ ಮೇಲೆ
ಉಕ್ಕಿ ಬಂದ ವಿಷವೆಲ್ಲವನೂ
ಉಂಡೂ ಉಳಿದೆವು
ನಲಿವಲ್ಲಿ
ನಂಟು ಗಂಟುಗಳು
ಅಂಟು ಪ್ಲಾಸೆಂಟಾಗಳು
ನಮ್ಮ ಪಾಲಿನಾ ಕನಸುಗಳು
ನಮ್ಮ ಪಯಣದಾ ಹಾದಿ ಬಿಂದುಗಳು

ತೀರವನರಸುತ ಸಾಗುವ ಬಾ
ರಾಗವ ಹಾಡುತ
ಮರೆಯುವ ಬಾ
ನನ್ನ ನಿನ್ನ ಪ್ರೀತಿಯಲ್ಲಿ
ಕಡಲ ನೀಸಿ ಕರೆಯ
ಗುರಿಯ ಸೇರುವ ಬಾ
ದ್ವೈತವ ಕರಗಿಸಿ
ಬಿಂದುವದ್ವೈತದಲಿ
ಒಂದಾಗುವ ಬಾ ಬಾರೋ!!

# ಹವಾಮಾನದ ವೀಕ್ಷಣಾಲಯದ ವರದಿ

ಹವಾಮಾನ ವೀಕ್ಷಣಾಲಯ
ವರದಿಯ ಮುನ್ಸೂಚನೆಯಂತೆ
ಈ ಮುಂದಿನ ಕೆಲದಿನಗಳು
ಉಸಿರು ಕಟ್ಟಿ
ಮೇಲ್ಗಣ್ಣು ತೇಲ್ಗಣ್ಣು ಹಾಕುವ
ಸುಟ್ಟು ಸೀಯಿಸುವ
ಅತೃಪ್ತಿ ಅಸಮಾಧಾನಗಳ
ಧಗೆ
ಉಷ್ಣಾಂಶ ಅಳತೆ ಮೀರಿದ್ದು
ಒಳಗೊಳಗೇ ಹೊತ್ತಿ
ಉರಿಯುವ
ಅಸಹಾಯಕ
ದಲಿತದಾವಾನಲ ಜೀವಿಗಳು
ಹೊಗೆಯಾಡದ
ಸಿಡಿಯದ ಅನಲಗಿರಿಗಳ
ಸ್ಫೋಟದನಿರ್ದಿಷ್ಟತೆಯ
ಭೀತಿಯ ಭಾರದ ವಾತಾವರಣ
ಮುಗಿಲನೀಲಿಯ
ಮುಚ್ಚಿಮರೆಯಾಗಿಸಿದ
ನಿರಾಸೆ ನಿಟ್ಟುಸಿರುಗಳ
ದಟ್ಟ ಕಾರ್ಮೋಡಗಳ
ಎದೆ ಹಿಂಡಿ ಸುರಿವ
ರಕ್ತ ಮಳೆಯಾಗುವ
ಮುನ್ಸೂಚನೆ
ಏಕಕಾಲಕ್ಕೇ ಏಳುತ್ತಿರುವ

ರಾಜಕೀಯ ಬಿರುಗಾಳಿಗೆ
ನೆಲಕೊಚ್ಚುವ
ತಲೆಕೆತ್ತುವ
ಗಾದಿ ಉರುಳಿಸುವ
ಟೋಪಿ ಹಾರಿಸುವ
ಭರವಸೆಗಳ ಲೊಟಿಸುವ
ನಾಲಗೆಗಳ ತರಿವ
ಗಿರಿಶಿಖರಗಳೆತ್ತರಕ್ಕೆ
ಅಪ್ಪನದೆಂದೆಣಿಸಿದಧಿಕಾರದ
ಆಸರೆಯ ಏಣಿಗೊರಗಿ
ನಿಂತವರ ಉರುಳಿಸುವ
ಹಣೆ ಬರಹಕೆ ಹೊಣೆ
ಹೊರಿಸಿ
ದಮ್ಮಿಲ್ಲದೆದೆ ಮುದುಡಿ
ಮಲಗಿದ್ದವರನೆಬ್ಬಿಸುವ
ಉಬ್ಬಿಸುವ
ಕೊಬ್ಬಿಸುವ
ಸೇಡಿನುತ್ಸಾಹಕ್ಕೆ
ಮಂತ್ರಿಸುವ
ತಂತ್ರಿಸುವ
ಅರಾಜಕ ರಾಜ್ಯಗಳ
ಧೂಳಿಪಟ ಮಾಡುವ
ಧೂರ್ತದುಷ್ಟರ
ದೈತ್ಯಕವಳವಾಗಿಸುವ
ಕಡಲುಗಳ ಕರೆತಂದು
ಜಲಸಮಾಧಿಯಾಗಿಸುವ
ಇರುವುದೆಲ್ಲವನೂ
ಇಲ್ಲವೇ ಇಲ್ಲವಾಗಿಸುತ
ಬದುಕೇ ಸೊನ್ನೆಯಾಗಿಸುವ
ಭಯಾನಕ ವರದಿಯ
ಮುನ್ಸೂಚನೆ

## ನಾನು ಲೆಕ್ಕ

ನಾನೇನೆನ್ನುವ ಲೆಕ್ಕಕ್ಕೆ
ಲೆಕ್ಕವೇ ಸಿಗುತ್ತಿಲ್ಲ
ಕೂಡಬೇಕೇ ಕಳೆಯಬೇಕೇ
ಗುಣಿಸಬೇಕೇ ಭಾಗಿಸಬೇಕೆ?
ಒಂದೇ ಎರಡೇ ಎಷ್ಟು ರೀತಿಗಳಲ್ಲಿ
ನನ್ನ ಲೆಕ್ಕಕ್ಕೆ ಸರಿಯಾದ ಉತ್ತರವೆಲ್ಲಿದೆ?

ವರ್ಷಗಳು ಕಳೆದು ಹೋದವು
ಆದರೆ ನನ್ನೆದೆಯ ಬೊಕ್ಕಸದೊಳಗೆ
ಏನೆಲ್ಲ ಕೂಡಿಟ್ಟಿದ್ದೇನೆ
ಬಿಡುವಾದಾಗ ಬಿಡಿಸಿ ಎಣಿಸುತ್ತೇನೆ
ಒಬ್ಬೊಬ್ಬರು ಕೊಟ್ಟ ಪ್ರೀತಿಗಳನ್ನು
ಹಸಿ ಹಸಿಯಾಗಿಯೇ ಉಳಿದಿರುವ
ನೋವುಗಳನ್ನು ನಲಿವುಗಳನ್ನು
ಲೆಕ್ಕಾಚಾರದಲಿ ಪ್ರೀತಿ
ನಲಿವುಗಳಿಗಿಂತ
ನೋವು ಹತಾಶೆಗಳು
ಹಸಿಗಾಯಗಳು ಅಧಿಕ ಮೊತ್ತದಲಿರೆ
ನಾನೂ ಆಗೊಮ್ಮೆ ಈಗೊಮ್ಮೆ
ಹೇಗೋ ಅವರಿವರಿಂದ ಒಂದಿಷ್ಟು
ಸಂತೋಷ ಸಂಭ್ರಮಗಳನ್ನು
ಬೇಡಿಯೋ ಕದ್ದೋ ಸಂಗ್ರಹಿಸಿದ್ದೇನೆ
ನಾನೊಂದು ಲೆಕ್ಕ – ನಾನೊಂದು ಪ್ರಶ್ನೆ?!
ಲೆಕ್ಕ ತಾಳೆಯಾಗುತ್ತಿಲ್ಲ
ಪ್ರಶ್ನೆಗೆ ಪರಿಹಾರ ಕಾಣುತ್ತಿಲ್ಲ

ಈಗ ಬಹುದೂರ ಸಾಗಿ ಬಂದಿದ್ದೇನೆ
ಬದಲಾಗಿಯೂ ಇದ್ದೇನೆ
ಹಳೆಯ ಲೆಕ್ಕ ಹಳೆಯ ಪ್ರಶ್ನೆ
ನನ್ನಿಂದಾಗದ ಲೆಕ್ಕಾಚಾರ
ಉತ್ತರ ಕಾಣದ ನನ್ನ ಪ್ರಶ್ನೆಗಳು !!
ಕಂಪ್ಯೂಟರ್‌ಗೆ ಗೋಜಲುಗಳನ್ನು
ನುಂಗಿಸುತ್ತೇನೆ
ಸಿಕ್ಕು ಬಿಡಿಸಿ ಒಳಗಿನ
ಗಂಟು ಗಣಿತಕ್ಕೆ
ಪರಿಹಾರ ನಿರೀಕ್ಷೆಯಲಿ
ಕಾಯುತ್ತೇನೆ

# ಸ್ವಾಗತ

ಬರುವಿಯಾದರೆ ಬಾ ಒಳಗೆ
ಉಪ್ಪರಿಗೆ ಕಲ್ಲು ಗೋಡೆಗಳು
ಕರಗದ ನೆಲ ಬಿರುಗಾಳಿ ಹೆಜ್ಜೆ
ಅಲಗಿನ ನೋಟ ಗುಡುಗುವ ದನಿ
ಗಳಿಗೆ ಹೆದರಿ ಹಿಂಜರಿಯಬೇಡ
ಮುಚ್ಚಿದ ಕದಗಳೊಳಗೇ
ಲೆಕ್ಕಾಚಾರ ಹಾಕಿ ನಿಟ್ಟುಸಿರಡಬೇಡ

ಒಮ್ಮೆ ಒಳಗೆ ಬಂದು ಇಣುಕಿದರೆ
ಸಾಕು ನೀನೇ ಬೆಚ್ಚುವಿ
ಮೆತ್ತನೆಯ ಹುಲ್ಲುಗಾವಲು
ಕಿಲ ಕಿಲ ನಗುವ ಮೊಲ್ಲೆ ಮಂದಾರ
ಶುಭ್ರವಾಗಿ ಹಾಸಿದ ಆಕಾಶ
ತೂಗಿ ತೊನೆಯುವ ನನ್ನೆದೆಯ
ಚಂದಿರ ನಿನ್ನ ಹಾದಿಗೆ ಕಣ್ಣುಹಚ್ಚಿದೆ

ನೀನೆಂದೂ ಅರ್ಥವಾಗಿಸಿಕೊಳ್ಳಲಿಲ್ಲ
ಮಾತುಮಾತಿಗೆ ಮುನಿಸು ಜಿನುಗಿಸಿ
ರಣಮಾಡಿದೆ ಬದುಕು
ರಾತ್ರಿ ಹಗಲುಗಳೆಲ್ಲ ನೋವಿನ
ಸಂಗೀತದಲ್ಲೆ ಕಳೆದೆ
ನಿನ್ನ ಗೆಜ್ಜೆಯುಲಿಯ ನಿರೀಕ್ಷೆಯಲಿ
ಶೂನ್ಯದಾಲಿಂಗನದ ಕವಿತೆಹೊಸೆದೆ
ಅನಿಮಿಷಯ್ಯನ ತೆರದಿ ಭೂಗತ
ಬೇತಾಳವಾಗಿ ಮಣ್ಣಾಗಿ

ಕಡೆಗೊಂದು ಅಸ್ಥಿಪಂಜರವಾಗಿ
ಉಳಿದಾಗ ನೀ ಬಂದೆಯಾದರೆ
ನಿನಗೆ ಕೇಳುವುದಿಲ್ಲ ಎದೆಯ ಮಿಡಿತ
ಅರ್ಥವಾಗುವುದಿಲ್ಲ ನನ್ನ ತುಡಿತ
ಚೀರುತ್ತೀಯೆ ಕಳೆದುಕೊಂಡೆ ಎಂದು
ಮರುಗುತ್ತೀಯೆ 'ಮರು'ವಾದೆ ಎಂದು

ಹೊತ್ತು ಮೀರುವ ಮುನ್ನ ಎದ್ದು ಬಾ
ಕಿವಿಯ ತೆರೆದಿಡು ನನ್ನ ಪಿಸುದನಿಗೆ
ಮನವ ಕರಗಿಸು ಬಿಸಿಯುಸಿರ ಪ್ರೀತಿಗೆ
ಖಾಲಿಯಾದ ಜೋಲಿಗಳು ತುಂಬುತ್ತವೆ
ರೆಕ್ಕೆ ಮುರಿದ ಕನಸುಗಳೂ ಬಾನ ತಬ್ಬುತ್ತವೆ
ಮೌನ ಭೀಕರದೊಳಗೆ ಸಪ್ತಸ್ವರ
ಸಂಗೀತ ಮೊಳಗುತ್ತದೆ
ಕ್ಷಣ ತಣಿದರೂ ದಕ್ಕಲಾರೆನು ಬಾ
ಈ ಕ್ಷಣದ ಮಿಲನವೇ ಸ್ವರ್ಗಭೋಗ

## ಅಂದು – ಇಂದು

ನೀನಾರೊ ನಾನಾರೋ
ಪರಿಚಯವೇ ಇಲ್ಲದ ಆ ಕ್ಷಣಗಳಲ್ಲಿ
ದಕ್ಕಿದ್ದು ಒಂದು ಮಿಂಚಿನ ನೋಟ
ಕೋಟಿ ನಕ್ಷತ್ರಗಳ ಬೆಳಕು
ಫಳಕ್ಕನೆ ಹೊತ್ತಿ ಉರಿದಂತಿತ್ತು
ನಿನ್ನ ಕಣ್ಣುಗಳಲ್ಲಿ ಕ್ಷ ಕಿರಣದ
ತೀವ್ರತೆಯಿತ್ತು
ಭಾಷೆಯಾಗದ ಭಾವ ಪುಲಕಗಳು
ಮೈ ತುಂಬ ಹರಡಿತ್ತು

ಬೆಚ್ಚನೆಯ ಎದೆಯ ಮಂಚದಲಿ
ನನ್ನ ಹರಣದ ಸಾಮ್ರಾಜ್ಯ ಕನಸಿತ್ತು
ದಣಿವಿಲ್ಲದ ಸಾಗುವ ಪಯಣ
ಬಾಡದ ವಸಂತಗಳು!
ಬತ್ತದ ಪ್ರೀತಿಯ ಸೆಲೆಗಳು
ಸುಳಿವ ಬೆಳ್ದಿಂಗಳ ತಂಪು
ಅಮಲಿಡುವ ಅತ್ತರಿನ ಕಂಪು
ನನ್ನದಾಗುವ ಹೆಮ್ಮೆಯಲೆಗಳ
ನೇರಿ ಜೀಕಿದ್ದಷ್ಟೋ ಲೆಕ್ಕವೆಲ್ಲಿ?

ಇಂದು ನಿನ್ನ ನನ್ನ ನಡುವಿನ
ದೂರಗಳು ಸವೆದಿವೆ
ದಶಕಗಳೇ ಜೊತೆಯಾಗಿವೆ
ಆದರೂ ಮೌನಕಡಲೇ ಮಲಗಿದೆ
ನಿನ್ನ ದನಿ ಕೇಳುವುದಿಲ್ಲ

ನಿನ್ನ ನಗು ಕಾಣುವುದಿಲ್ಲ
ನಿನ್ನ ಸ್ಪರ್ಶಕ್ಕೆ ನನ್ನೆದೆಯ
ಭಾವ ಮುಗುಳು ಅರಳುವುದಿಲ್ಲ
ನಡುವೆ ಯೆದ್ದಿದೆ ಹಿಮದ ಗೋಡೆ
ಸೂರ್ಯ ಮೂಡುವುದಿಲ್ಲ
ಹಿಮ ಕರುಗುವುದಿಲ್ಲ
ಇರುಳು ಕಳೆಯುವುದಿಲ್ಲ

ಸಾಂಗತ್ಯವಿದ್ದರೂ ಸಂಗಾತವಿಲ್ಲ
ಶಬ್ದಗಳು ಸುರಿದರೂ ಜೀವವಿಲ್ಲ
ಗೀತ ಸಂಗೀತದಲಿ ಶೃತಿಮೇಳವಿಲ್ಲ
ನಿಯಮೋಲ್ಲಂಘನದಲ್ಲಿ
ಋತುಗಳಾವರ್ತನ ಲೀಲೆ
ನಿನ್ನ ವಸಂತಗಳಲ್ಲಿ ನಾನು ಶಿಶಿರ
ನನ್ನ ಗ್ರೀಷ್ಮದಲ್ಲಿ ನೀನು ಹೇಮಂತ
ನಾ ಮೊಗ್ಗಾದರೆ ನೀ ಬಿರುಗಾಳಿಯಾಗಿ
ಗೋಣು ಮುರಿದು ನೆಲಕ್ಕಿಕ್ಕುವೆ
ಅಂದು ಇಂದುಗಳ ಸ್ಥಿತ್ಯಂತರ
ನಿಗೂಢತೆಗೆ ಬೆಚ್ಚಿ ಬೆದರುತ್ತೇನೆ
ಪ್ರಶ್ನಿಸುತ್ತೇನೆ ಇದೇಕೆ ಹೀಗೆ?

## ನಿರೀಕ್ಷೆಗಳನ್ನು ಹೇರಬೇಡ

ನನ್ನ ದೇಶ ನನ್ನ ನೆಲ ಬೇರೆ
ನಾ ಬೆಳೆದ ಹೊಲ
ಬೆಳೆಸಿದವರು ಬೇರೆ ಬೇರೆ
ನಾನುಂಡ ನೀರು ನಾ ಕುಡಿವ ಗಾಳಿ
ಸ್ವಚ್ಛ : ಪರಿಶುದ್ಧ
ಸಾಂಕ್ರಾಮಿಕ ಜೀವಾಣುಗಳಿಲ್ಲ
ಮೊಳಕೆಯೊಡೆದಂದಿನಿಂದ
ನಾನು ನಾನಾಗಿಕಾಲೂರಿ
ನಿಲ್ಲುವುದನ್ನು ಕಲಿತಿದ್ದೇನೆ
ಅಮ್ಮನ ಎದೆಗೂಡಿನ
ಬೂಜುಗಟ್ಟಿದ ಭಾವನೆಗಳ
ಬೆಳಕಿಗಿಟ್ಟು
ಹಳತದ್ದು ಕೊಳೆತದ್ದು
ಕಿಚ್ಚಿನಲಿ ಬೂದಿಯಾಗಿಸಿದ್ದೇನೆ
ಹೊಸ ಥಳಿಯ ಹೂಗಳನ್ನು
ಅರಳಿಸಿದ್ದೇನೆ
ಕತ್ತಲ ಗೂಡುಗಳನ್ನು ಕೆಡವಿ
ಸೂರ್ಯರನು ಹೊಗಿಸಿದ್ದೇನೆ
ಅಮ್ಮ ಕಲಿತ ಅಕ್ಷರ ಮಾಲೆಗೆ
ತಿದ್ದಿ ಜೋಡಿಸಿದ್ದೇನೆ ಹೊಸ ಅರ್ಥಗಳ!

ಕೋಟಿ ಕನಸಿನ ಮೂಟೆ
ಎದೆಯ ತಿಜೋರಿಯಲಿರಿಸಿಕೊಂಡಿದ್ದೇನೆ
ಸಾಗಬೇಕಿದೆ ಹಾದಿ
ಸೇರಬೇಕಿದೆ ಶಿಖರ
ಸಾಗುವ ಹೆಜ್ಜೆಗೆ ಸರಪಳಿ ಬೇಡ

ಅಡಿಗೆ ಮನೆಯ ಸೀಮಾರೇಖೆ
ಗಳಲ್ಲಿ ಬಂಧಿಸಿಡಬೇಡ
ಪ್ರೀತಿ ವಂಚನೆಯಲ್ಲಿ
ಸಮಾಧಿಗಿಳಿಸಬೇಡ
ಅಪಾರದರ್ಶಕವಾದ
ನಿನ್ನ ಹೃದಯ
ಕಾಣುವುದಿಲ್ಲ ಒಂದೂ ನಿನ್ನ ಭಾವ

ನಿನ್ನ ಬೆನ್ನಲ್ಲಿ ಮೂಟೆಗಟ್ಟಿಸಿಕೊಂಡ
ಕನಸುಗಳನ್ನು ನನ್ನ
ಮುಂದೆ ಹರಡಿ ದಿಗ್ಭ್ರಮೆ
ಗೊಳಿಸಬೇಡ ಚೆನ್ನ
ಹಾಗೆಯೇ ನಿನ್ನ ನಿರೀಕ್ಷೆಗಳನ್ನೂ
ಹೇರಬೇಡ
ನೀ ಕಡೆವ ಶಿಲ್ಪ ನಾನಾಗಲಾರೆ
ನೀ ಬಿಡಿಸುವ ಬಣ್ಣ
ರೇಖೆಗಳ ಚಿತ್ರ ನಾನಾಗಲಾರೆ
ನಿನ್ನ ಹಾಡಿನ ದನಿಗೆ ದನಿ ಕೊಡಲಾರೆ

ನನಗೆ ನನ್ನದೇ ದನಿಯಿದೆ
ನಾ ನನ್ನ ಬಣ್ಣಗಳಲ್ಲೇ ಚಿತ್ರವಾಗುವೆ

ಸ್ವಯಂಭೂ ಲಿಂಗದೊಲು
ನನಗೆ ನಾನೇ ಮೂಡಿ ಬರುವೆ
ಅಂಕೆ ಅಂಕುಶ ಭೀತಿಯಿಲ್ಲದೆ
ವಿಸ್ತಾರ ಭೂಮಿಯಲಿ
ನನ್ನದೇ ದಾರಿಗಳ ಹುಡುಕಿ ಕೊಳುವೆ
ಅಲೆವ ಹಕ್ಕಿಯಾಗಿ
ಆಕಾಶದಗಲ ವಿಸ್ತಾರಗಳನ್ನು
ಅಳೆದು ಬದುಕುತ್ತೇನೆ
ನಿನ್ನ ನಿರೀಕ್ಷೆಗಳ ಹೇರಿ
ನನ್ನ ನಕ್ಷೆಯ
ಬದಲಿಸದಿರು ಗೆಳೆಯಾ!

## ಕಿತ್ತು ಹೋದ ತಾಳಿ ಸರ

ಗರಿಗಟ್ಟಿ ಮರಸುತ್ತಿ
ಅಂಗಡಿ ಮುಂಗಟ್ಟುಗಳ
ಅಲಂಕಾರದ ಅದ್ಭುತ
ರೋಮಾಂಚಗಳಲ್ಲಿ
ಜೀಕಾಡಿ ದಶಕಗಳು ದಾಟಿದರೂ
ಸಪ್ತಪದಿಯ ಸುವಾಸನೆಯ
ಬೆನ್ನೇರಿ ಅವನ ಬೆರಳಿಗೆ
ನನ್ನ ಬೆರಳ ಹುಕ್ಕಿಸಿ
ಭೂತವನ್ನೇ ವರ್ತಮಾನವಾಗಿಸಿದ
ಆ ಕ್ಷಣಗಳ ಮರೆಯಬಹುದೇ?

ಗಾಳಿಕಡಲಿನಲೆಗಳನೇರಿ
ಸಾಗಿದ ಕೊಲಂಬಸ್ ಹೊಯ್ದಾಟಕ್ಕೆ
ಭಯದ ಭೂಕಂಪದಲಿ
ನಡುಗಿ ನಡುಗಿ
ತ್ರಾಹಿಮಾಂ ಮಂತ್ರವನುಸಿರಿ
ಅಪ್ಪಿದ ತೋಳುಗಳ
ಆತ್ಮೀಯತೆಯ ಅನುಸಂಧಾನದಲಿ
ಹೊಳೆದ ಹಲವು ಕಾರಣಗಳಲ್ಲಿ

ಕೃಷ್ಣ ಪಕ್ಷದ ಕಿಟಕಿ ಕತ್ತಲಲ್ಲಿ
ತಟ್ಟನೆ ಕಾಣಿಸಿದ ಚಂದ್ರನಂತೆ
ಎದೆಯ ಕೇಂದ್ರದಲಿ
ಗುಟ್ಟಾಗಿ ಕುಳಿತ ದುಂಡನೆಯ
ಮಂಗಳ ಸೂತ್ರ!

ಚಂಗನೆ ಚಿಗಿದ ನೆನಪು!
ಹೌದು!
ಇವನ ಈ ಸಲುಗೆಗಳು
ಇವನಿಡುವ ನಲುಗುಗಳು
ನಿಷಿದ್ಧ ಪ್ರದೇಶದಲ್ಲೊ
ನಡೆಯುವ ವೈಹಾಳಿಗೆ
ಇದೇ ಅಲ್ಲವೇ ಪರವಾನಗಿ?
ಪ್ರೀತಿಯಲಿ ನೇವರಿಸಿದೆ ಕೊರಳ
ಚೀರಿದೆ! ಅಯ್ಯೋ ನನ್ನ ತಾಳಿ ಸರ!
ಅಚಲಗಿರಿಯಂತೆ
ನಿಂತವನ ಕಾಲಡಿ
ಸಿಡಿದಿತ್ತು ಭೂಕಂಪ!
ಹೌಹಾರಿ ಕುಸಿದಿದ್ದ
ತನ್ನ ಅನಿಷ್ಟದ ಕಲ್ಪನೆಯಲ್ಲಿ
ಕಂಪಿಸಿ ದುರುಗುಟ್ಟಿ ನುಡಿದ
ಏನೋ ಕಾದಿದೆ ನನಗೆ
ಎಂದೂ ಹನಿಯದ ಕಣ್ಣೊಳಗೆ
ನೀರೂಟೆ! ನಿಲ್ಲದ ಜಲಧಾರೆ
ಅಜ್ಜಿ ಹೇಳಿದ ಕಥೆಯೊಳಗೆ
ಪಂಚವರ್ಣದ ಗಿಳಿಯಲ್ಲಿ
ರಾಕ್ಷಸನ ಪ್ರಾಣವಂತೆ!
ನನ್ನವನ ಪ್ರಾಣ ನನ್ನ ಮಂಗಳ
ಸೂತ್ರದಲ್ಲಿದೆ ಎಂಬ
ನಂಬಿಕೆಯಲ್ಲಿ ನಲುಗಿದ್ದ
ನನ್ನವನ ಮುಗ್ಧತೆಗೆ
ನಕ್ಕು ನುಡಿದೆ –
ನಿಮ್ಮ ಜಾತಕದ ಹಕ್ಕಿ
ನುಡಿದಿದೆ ನಿಮಗೆ ನೂರುವರ್ಷ!!

# ಇದೋ ಇಲ್ಲಿದೆ ಲಕ್ಷ್ಮಣರೇಖೆ

ನಿನ್ನ ಹೂ ನಗೆ ಹೊಳೆವ ಹಲ್ಲು
ಅಪರೂಪಕ್ಕೆ ಅರಳುವ
ಕಣ್ಣೊಳಗಿನ ಕೋಮಲತೆ
ಹಿಡಿದ ಮಲ್ಲಿಗೆ ದಂಡೆ
ಹಾವಾಗದೆ ಉಳಿದ ಕ್ಷಣ
ತುಟಿಯ ದಡದಲ್ಲಿ
ಫಳಕ್ಕನೆ ಹೊಳೆದ
ತುಂಟತನದ ಮಿಂಚು
ಸಂಚಿನಲಿ ಒಳನುಗ್ಗುವುದು
ಇರುಳು ಕತ್ತಲೆಯ ಕಡಲಾದಾಗ
ನೀಲಿ ಬನದಲ್ಲಿ ನಕ್ಷತ್ರ
ಗೊಂಚಲು ಗೊಂಚಲು ನಕ್ಕಾಗ
ಕಳ್ಳ ಹೆಜ್ಜೆಯನಿರಿಸಿ
ಕಣ್ಣಾಮುಚ್ಚಾಲೆಯಾಟಕ್ಕೆ
ಟೊಂಕ ಕಟ್ಟುತ್ತೀ
ಹುಲಿ ಚಿರತೆಗಳ ಮರೆಯಿರಿಸಿ
ಪ್ರೀತಿಯ ಬಾಲವಲ್ಲಾಡಿಸಿ
ಗುಲಾಬಿ ಗಲ್ಲಗಳ ನುಣುಪ
ನೇವರಿಸುತ್ತ ಇಳಿದು
ಜಾರುತ್ತೀ ಭಾವಸಮಾಧಿಗಂದೇ!

ನಿಶ್ಚಲ ನೀರವ ಪರಿಶುಭ್ರ
ಕೊಳದ ಕನಸುಗಳಲ್ಲಿ
ಕದಡಿ ಕೆಸರಾಗಿಸುತ್ತೀ
ಹಾಯಾಗಿ ಮಲಗಿದ ಹಕ್ಕಿಗಳ

ಕವಣೆ ಕಲ್ಲಿನಲ್ಲಿ ಜಡಿದು
ತತ್ತರಿಸಿ ಚೀರುವಂತಾಗಿಸುತ್ತೀ
ಜೋಗುಳದ ಜೊಂಪಿನಲಿ
ಮರೆತುಮಲಗಿದ
ಹಾಲುಗೆನ್ನೆಯ ಕಂದನನು
ಭೂತ ಚೇಷ್ಟೆಯ ಭೀತಿಯಲಿ
ಭಂಗಿಸಿ ಇರಿದು ಕೊಲ್ಲುತ್ತೀ
ಬರಬೇಡ ನೀನಿಲ್ಲಿ
ಇದು ನಿಷಿದ್ಧ ಕ್ಷೇತ್ರ
ನಿನ್ನ ಪಂಜುಗಳ ಪಾತಾಳ
ಗರಡಿಯ ಬಿಗಿತದಲಿ
ಇರಿವ ನಾಲಿಗೆಯ ಚೂರಿಯಲಿ
ಸಿಡಿವ ನೋಟದ
ವಿಸ್ಫುಲಿಂಗದಲಿ
ನನ್ನುಸಿರು ಸಾಗುವುದಿಲ್ಲ
ನನ್ನ ಧಮನಿಗಳಲ್ಲಿ
ರಕ್ತ ಹರಿಯುವುದಿಲ್ಲ
ಮಂಜುಗಟ್ಟಿಸಬೇಡ
ಮಹಾನುಭಾವ
ನಿಂತಲ್ಲೇ ನಿಂತುಬಿಡು
ಇದೇ ಈ ಲಕ್ಷ್ಮಣರೇಖೆಯ
ಪರಿಧಿಯಲಿ ನನ್ನ ಬದುಕ ಬಿಡು

## ನಿನಗಾಗಿ

ಹೇಗಿರಬೇಕು ಹೇಳು ಪ್ರಿಯ?
ಬೇಕಿದೆ ನನಗೆ ನಿನ್ನ ದಯಾ
ಮುಗ್ಧೆ ನಾನು ಬಲ್ಲವಳಲ್ಲ
ಕತ್ತಲಾಚೆಯ ಬೆಳಕು ಕಂಡವಳಲ್ಲ

ಕನಸು ಹರಿದು ಕಣ್ಣ ತೆರೆದೆ
ಕಾಣದೊಂದು ಮೊಗವ ಕಂಡೆ
ಮೊಗವದಾರದೆಂದುಕನಲಿ
ನೋವಿನಲ್ಲೂ ಪ್ರೀತಿಯುಂಡೆ

ಕಂಡ ಕ್ಷಣವೆ ಮನವ ತೆತ್ತೆ
ನಿನ್ನ ಗೆಲುವ ಮನಸ ಹೊತ್ತೆ
ದೇಹ ಮನವ ಮೀಸಲಿರಿಸಿ
ಕಣ್ಣ ದೀಪವುರಿಸಿ ನಿಂತೆ

ನಿನ್ನ ಬಯಕೆ ಮೊಗವಿದಲ್ಲ
ಹಾಡಲರಿಯೆ ಶ್ರುತಿಯ ಸೊಲ್ಲ
ಕೆಂದುಟಿಗಳ ಮೋದವಿಲ್ಲ
ಚೆಲುವಿನೂಟ ನನ್ನೊಳಿಲ್ಲ

ಇಲ್ಲ ಇಲ್ಲ ಏನೊಂದೂ ನೀಡಲಿಲ್ಲ
ರಮಿಸಲೊಂದು ಆಟವಿಲ್ಲ
ಆದರೊಂದು ನಿನ್ನ ನೋಟ
ನನಗೆ ಬೇಕು ಜಗದಮಾಟ ನಿನ್ನ ಕೂಟ
ಬಲ್ಲೆ ಬಾರದಿರುವೆಯೇಕೆ

ಬಯಕೆಯೊಂದೆ ಇರಲು ಸಾಕೆ?
ಕೂಗಿ ಕರೆದರೇನು ಬಂತು
ಬಿಗಿಯಬಹುದೆ ಪ್ರೇಮತಂತು?

ಛಲವ ಬಿಡೆನು ಪ್ರೀತಿಗಾಗಿ
ಬೆಂಕಿ ತುಳಿವೆ ಸಂಗಕಾಗಿ
ಮಡಿವೆನೆಂಬ ಮಾತು ಬೇಡ
ಸೆಣಸಾಡುವೆ ನಿನ್ನ ಕೂಡ

ಹೇಳು ಬರಲಿ ಹೇಗೆ ಬಳಿಗೆ?
ಕುಣಿದು ಬರಲೆ ಸೋಗೆ ಹಾಗೆ
ಕಲಕಲಿಸುತ ನದಿಯ ಹಾಗೆ
ಮಿಂಚು ಬಳುಕು ಬಳ್ಳಿ ಹಾಗೆ
ಹೇಗೆ ಬರಲಿ ಹೇಳು ಪ್ರಿಯಾ
ಹನಿಸಿ ಉಳಿಸು ನಿನ್ನ ದಯಾ

# ಮಾತುಗಳೇ ಬೇಡ

ಮಾತುಗಳೇ ಬೇಡ ನಮ್ಮ
ನಡುವೆ ಪ್ರಿಯತಮ
ಮಾತಿಲ್ಲದ ಮೌನದಲ್ಲಿ
ನಿನ್ನ ನನ್ನ ಮಿಲನದಲ್ಲಿ
ನೂರು ಕವಿತೆ ಹಣತೆಗಳು
ಉರಿಯುತ್ತವೆ
ಕತ್ತಲಲ್ಲಿ ಮರೆಯಾಗಿರುವ
ಭಾವಗಳಲ್ಲಿ ಝುಗ್ಗನೆ
ಹೊತ್ತಿ ಉರಿದ ಬೆಳಕಿನಲ್ಲಿ
ಬೆಂಕಿ ಹೂಗಳು ಹೊಳೆಯುತ್ತವೆ
ಬೆಸೆದ ಹೃದಯಗಳು
ಬಿಗಿದ ಬಾಹುಗಳು
ಸ್ವರ್ಗ ಭೋಗಗಳನ್ನೂ
ಕರಗಿಸಿ ಬಿಡುತ್ತವೆ
ಸುಪ್ತ ಸ್ತರಗಳಲ್ಲಿ
ಪಾತಾಳ ಬಿಲಗಳಲ್ಲಿ
ಮುರಿದು ಬಿದ್ದ ರಾಗ ರಾಗಿಣಿಯರು
ನಮ್ಮೊಲವಿನ ಮಿಲನಕೆ
ಹಸೆ ಹಾಡಲು ಬರುವರು
ಸುಮ್ಮನಿರು
ಉಸಿರ ಸದ್ದಿಗೂ ಬೀಗವಿಡು

ತುಟಿ ತೋಳು ಕಂಗಳಲಿ
ಏನು ಸುಖವಿದೆ ಹೇಳಲೆ?
ವಕ್ಷ ವಿಸ್ತರ ಹಾಸಿನಲ್ಲಿ

ಮಲಗಲಪ್ಪಣೆ ಕೇಳಲೇ
ನನ್ನ ನಿನ್ನ ಸುಖದ ನಿದ್ದೆಗೆ
ಜಗವೆ ಹಿಗ್ಗಿದೆ ತೂಗುತ
ಹರಿವ ನೀರಿನ ಅಲೆಗಳೆಲ್ಲ
ಹರಸಿ ಹಾಡಿವೆ ಕುಣಿಯುತ
ಸದ್ದು ಮಾಡದೆ
ಸುದ್ದಿಯುಸುರದೆ
ಕಿವಿಯಾಲಿಸು ಮೆಲ್ಲಗೆ
ನೂರು ಸವಿದನಿ
ಸರಿಗಮಪದನಿ
ಕೇಳಿ ಬರುತಿದೆ ತೆಳ್ಳಗೆ

ಮಾತಿಗಿಲ್ಲದ ಅರ್ಥ ಮೌನಕೆ
ಹೊಳೆಸಿ ಉಲಿದಿದೆ ಹೃದಯಕೆ
ನಲ್ಲ ಎಲ್ಲೂ ಹೋಗಬೇಡ
ತುಟಿಗೆ ಮಾತನು ಉಣಿಸಬೇಡ
ಕೇಳು ಗಾಳಿಯ ಗುಟ್ಟನು
ನೋಡು ಹೂವಿನ ಹುಟ್ಟನು
ನೀಲಿಯಾಗಸ ಮೊಗದಿ ಮಿಂಚುವ
ಚಂದ್ರ ಕುಂಕುಮ ಹೊಳಪನು
ನೆಲದ ಗೆಲುವಿನ ಸೊಗಸನು

ಎಷ್ಟೊ ಕಾಲಕೆ ನಿನ್ನ ಸನಿಹ
ನನ್ನ ಪಾಲಿನ ಭಾಗ್ಯಕೆ
ದೊರೆಯುವಷ್ಟೂ ಜನ್ಮದೊಳಗೆ
ನಿನ್ನ ದಿವ್ಯದ ಕಾಣಿಕೆ
ಮಾತು ತಿನ್ನುವ ಉಸಿರನುಳಿಸಿ
ಬಿಗಿದುಕಟ್ಟುವೆ ನಿನ್ನ ಬಳಸಿ
ಮಾಯವಾಗದಂತೆ ಮತ್ತೆ
ಬಂಧಿಸಿಡುವೆ ಒಲವಿನೆಳೆಯಲಿ
ನೋಡ ನೋಡುತ

ಕಳೆವೆ ಯುಗಗಳ
ಮೌನಶಿಖರದಿ ನೆಡುವೆ ಧ್ವಜಗಳ
ಒಮ್ಮೆಯಾದರು ತಬ್ಬು ನನ್ನ
ದಿವ್ಯ ತೇಜವನಿಳಿಸು ಚೆನ್ನ
ಬಾರದಿರಲಿ ಬಳಿಗೆ ಬನ್ನ
ಸಾವಾಗದಿರಲೋ ವಿರಹ ನಿನ್ನ

## ಸುಳಿವು ತೋರು ನಿನ್ನ

ಊರೂರು ತಿರುಗಿ ಬಂದೆ
ಕಾಣಲಿಲ್ಲವೋ
ಬೆಟ್ಟವೇರಿ ಹಳ್ಳ ಇಳಿದು
ದಂಡೆದಾರಿ ಎಲ್ಲವನ್ನೂ
ದಾಟಿ ಬಂದೆನೋ
ಹಾದಿ ಬೀದಿಯೆಲ್ಲ ಸುತ್ತಿ
ಜಾಲಾಡಿ ಬಂದೆನೋ

ಇಲ್ಲೆ ಇದ್ದ ಹೀಗೆ ಹೋದ
ಎನ್ನುತ್ತಾರೆ
ಎತ್ತಲೆಂದರೆ ಕೈಯ ತಿರುವಿ
ಗೊತ್ತಿಲ್ಲಂತಾರೆ
ಗುರುತು ಕೇಳೆ
ನೆನಪು ನಮಗೆ ಬಾರದಂತಾರೆ

ಹೂವು ದುಂಬಿ ಚೆಂದದಾಟ
ನೋಡಿ ನಿಂತಾನೋ
ಮೊಲ್ಲೆ ಬನದ ಕಂಪು ಕುಡಿದು
ಮತ್ತೇರಿ ಮರೆತಾನೋ
ಕಾಣದಂದೆ ಕಣ್ಣುಮುಚ್ಚೆ
ಜೀವದಲ್ಲಿ ಜೀವ ಅವನು
ಎದೆಯ ಭಾವದರ್ಥವವನು
ಕಾಣದೇ ಕಣ್ಣಾಲಿ ಹಿಂಗಲಿ
ಬಾರದಿರಲು ಬದುಕು ಬಾಡಲಿ
ಹುಡುಕಿ ಹುಡುಕಿ

ಹೊತ್ತಿ ಹೋದೆನೋ
ಕೂಗಿ ಕೂಗಿ ಕೊರಳು ಹರಿದು
ಉಸಿರುಕುಸಿದು ಸತ್ತೆನೋ
ಇದ್ದಾನೆಂದರೆ ಇರುವವನಲ್ಲ
ಇರುವನೆಂದರೆ ನಿಲ್ಲಲೆ ಇಲ್ಲ
ಎಲ್ಲೆಲ್ಲೂ ಅವ ಇದ್ದೇ ಇರುವ
ಆದರು ಸದ್ದು ಮಾಡನವ
ನುಡಿಸನು ನಗಿಸನು
ತೋರನು ಬಾರನು
ಅವನಿಗವನದೇ ಜಂಬವಿದೆ
ಕಾಡುವ ಆಟದ ಆಸೆಯಿದೆ

ಮೊಗವನು ಮುಗಿಲಲಿ
ಮರೆಸುವನು
ಉಸಿರನು ಕಂಪಲಿ
ಹುಗಿಸುವನು
ಬಾನಿನ ನೀಲಿ ಬಣ್ಣದಿ ಕರಗುತ
ರವಿ ಶಶಿಕಾಂತಿಲಿ
ಮೈಯನು ಮುಸುಕುತ
ಕಡಲಗಾಧದಲಿ ಕುಳಿತಹನು

ಹಿಡಿಯ ಬೇಕಿವನ ಈ ಗಳಿಗೆ
ತಂದಿರಿಸಬೇಕು ಎದೆ ಗುಡಿಗೆ
ನಾಳೆ ನಾಳೆಗಳು ಸರಿದು ಸುರಿದರೂ
ದಕ್ಕದೆ ದಾರಿ ತಪ್ಪಿಸುವ
ಆಳಿ ಕುದುರೆ ಏರಿ
ಮೇಘ ಲೋಕ ಸಾರಿ
ಮಿಂಚು ಹಣತೆ ಬೆಳಕು ಹಚ್ಚಿ
ಹುಡುಕಿ ನೋಡುವೆ
ಕೋಟಿ ಕೋಟಿ ಚಿಕ್ಕಿಗಳನೆ
ನುಡಿಸಿ ಕೇಳುವೆ

ಇಂದೊ ನಾಳೆ ಎಂದೊ ಎಂದೊ
ಬರುವನೆಂಬ ಆಸೆಯೊಂದು
ನಂಬಿ ಕುಳಿತಿಹೆ
ಬಾರನೆನಲು ನೆನಪಿನೊಳಗೆ
ನೆಲವ ತೊರೆವೆನು
ಒಲವ ಕೊಲುವೆನು

# ಭಿಕ್ಷಕೆ ಬಂದೆನೋ ಜೋಗಿ

ಇಂದು
ನನ್ನ ನಿನ್ನ ಕೆಲಸವೆಲ್ಲ
ತಿರುಗು ಮುರುಗು ನಲ್ಲ
ನಿತ್ಯ ನಿನಗೆ ಭಿಕ್ಷೆಯನ್ನು
ನೀಡುತ್ತಿದ್ದೆ ನಾನು
ನನಗೆ ನೀನು ಭಿಕ್ಷೆಯನ್ನು
ಇಂದು ನೀಡಬಾರದೇನು?

ಇದ್ದುದೆಲ್ಲ ಖಾಲಿ ಖಾಲಿ
ಕಾಸು ಕರಗಿ ಪಾಪರಾದೆ
ಉಟ್ಟ ಉಡುಗೆ ಚಿಂದಿಯಾಯ್ತು
ಮುಡಿದ ಮಲ್ಲಿಗೆ ಬಾಡಿ ಹೋಯ್ತು
ನಿಂತು ಕನ್ನಡಿ ಮುಂದೆ ಬೀಗಿದ
ಚೆಲುವು ಹಮ್ಮು ಸೋರಿತು
ಕದಪು ಕೆಂಪುಗಳೆಲ್ಲ ಕರಗಿ
ಜಾರಿ ಎಲ್ಲೋ ಹರಿದುಹೋಯ್ತು

ಹೊನ್ನ ಬಣ್ಣವ ಮಣ್ಣ ಮಾಡಿ
ಮಿರುಗಿ ಮಿಂಚಿದ ದೇಹಕಾಂತಿ
ಕಂತಿ ಶವದೊಲು ಮಲಗಿದೆ
ಜಗವೆ ಮೊಗವನು ತಿರುಹಿದೆ
ತಾಳಲಾರೆನು ಹಸಿವ ಬೆಂಕಿ
ನೀಡು ಭಿಕ್ಷವ ಬೇಗ ಜೋಗಿ
ತುಂಬು ಜೋಳಿಗೆಯಿಂದಲಿಷ್ಟು
ಪ್ರೀತಿ ಕಾಳನು ನನಗೆ ಹಾಕು

ಏಕತಾರಿಯ ಮೀಟಿ ಹರಿಸು
ಮಧುರ ಗಾನದ ಹೊನಲನು
ಮಧುರ ಮಂಗಳಗೀತವಾಗಿ
ಬುವಿ ಬಾನು ಗಡಿಗಳತುಂಬಲಿ
ಅಣು ಅಣುವಿನೆದೆಯೊಳಗೆ
ಅಣುರಣಿತವಾಗುತ ಮೊಳಗಲಿ

ತುಂಬಿದೆನ್ನೆದೆ ಕಾಡಕತ್ತಲು
ಹರಿದು ಕಿರಣಗಳುದಿಸಿ ಬರಲಿ
ಸುಪ್ರಭಾತವೆ ಎನ್ನದಾಗಲಿ
ಜೀವ ಕುಸುಮವು ನಿನ್ನದಾಗಲಿ

## ನನ್ನಂತಲ್ಲ ನನ್ನವರು

ನೊಂದರು ನೆಮ್ಮದಿ ಬಿಡದವರು
ನೀಲಿಯ ಬಾನಿನ ಹರಹಿನ ಆಳದಿ
ರೆಕ್ಕೆಯಿಲ್ಲದೆಯೂ ಹಾರುವರು

ಉರಿಯುವ ಬೆಂಕಿಯ ನುಂಗುತಲಿ
ತಣ್ಣನೆ ನಗೆಯನು ಬೀರುವರು
ಮುಳ್ಳಿನ ಪೊದೆಗಳ ಹಾದಿಯ ತುಳಿದು
ಹಾಸುವರೆದೆಗಳನವರಿಗೆ ಕಾದು

ಸಾಗರ ಮಥನದ ಹಾಲಾಹಲವನು
ಕುಡಿದಮೃತವನೆ ನೀಡುವರು
ಒದೆಗಳನುಂಡು ಗದೆಗಳ ಕಂಡು
ನಗುತಲೆ ನೋವನುಸಹಿಸುವರು

ಕತ್ತಲಾದರೂ ಬೆಳಕನು ಬೇಡರು
ಕರುಳಿರಿದರು ಸರಿಬಾಯನು ಬಿಡರು
ಹಿಂದೆ ಬಂದರೆ ಹಾಯದ ಮುಗ್ಧರು
ಮುಂದೆ ಬಂದರೆ ಒದೆಯದ ಹುಂಬರು

ಮನೆ ಮಕ್ಕಳೆ ತಮ್ಮಯ ಜಗವೆಂದು
ಇಟ್ಟಂತಿರುವುದೆ ಬಾಳಿನ ಗುರಿಯೆಂದು
ಉಸಿರೆತ್ತದೆ ಎದುರಾಡದೆ ಮೌನವೆ ಜಪವೆಂದು
ಭಾವಿಸಿ ಬದುಕಿನ ಗಾಣವ ಸುತ್ತುವರು
ನಿಂದೆಗಳಲ್ಲಿ ನೋಯುತ ನಗುವರು
ಒದ್ದು ತೊರೆದರೂ ಪತಿಗಳ ಹರಸುವರು
ಕೋಪ ತಾಪಗಳ ಕಣ್ಣೀರಲಿ ತೊಳೆವರು
ನನ್ನಂತಲ್ಲ ನನ್ನವರು ನಿಟ್ಟುಸಿರಲ್ಲೇ ಬೆಳೆವವರು

## ಅರಳಿನಿಂತ ಕನಸು

ಎಲ್ಲೆಡೆ ಸುರಿದಿದೆ ಬೆಳ್ಳಂ ಬೆಳಕು
ಕಾಮನ ಬಿಲ್ಲಿನ ರಂಗೋಲಿ
ಗಾಳಿಯು ನಿಂತಿದೆ ಬೆದರಿ ಸುಳಿಯದೆ
ಮೋಹಕ ಮೌನವೆ ಹಬ್ಬಿದೆ ಎಲ್ಲೂ

ಗಿಡಮರಕೆಲ್ಲವು ಚಿನ್ನದ ಮೆರುಗು
ಚಂದ್ರ ಸೂರ್ಯರಿಗೂ ಬೆರಗೋ ಬೆರಗು
ನದಿಗಳು ಹರಿಯದೆ ಕುಣಿದಿಹವು
ಗಿರಿಗಳು ನಿಲ್ಲದೆ ಹಾರಿಹವು

ಬಂಡೆ ಬೆಟ್ಟದಲಿ ಮುತ್ತು ಮಾಣಿಕವು
ಬೆಳ್ಳಿತೇರುಗಳ ಉತ್ಸವವು
ಕಿನ್ನರ ಲೋಕದ ಕನ್ನೆಯರಿಳಿದು
ಭೂಮಿಗೆ ಸ್ವರ್ಗವನಿಳಿಸಿಹರು

ತಾರಾಮಂಡಲ ದೇಹವನಿಂದು
ನೀಲ ಮೇಘತನು ಕಾಂತಿಗನಿಳಿದು
ಕಣ್ಣೋಟದ ಸೂಜಿಗಲ್ಲಿನಲಿ
ಸೆಳೆದನೆನ್ನ ಮನವ ಪಿಡಿದನೆನ್ನ ಕರವ

ವಿದ್ಯುದಾಲಿಂಗನ ಅಡಿಮುಡಿವರೆಗೆ
ಸಾಗಿದೆ ಸಾಗಿದೆ ಸ್ವಪ್ನ ಲೋಕದ ಮರೆಗೆ
ಎಲ್ಲಿಯೋ ಮುರಳಿ ಮೋಹನ ರಂಗ
ಕುಣಿಯಲು ಬರುವೆನು ನಿನ್ನಯಸಂಗ
ತುಟಿಯು ನಕ್ಕಿತು ಕಣ್ಣು ಮಿಂಚಿತು

ಹೆಜ್ಜೆ ಕುಣಿಯಿತು ಗೆಜ್ಜೆಯುಲಿಯಿತು
ಉಸಿರ ಸ್ಪರ್ಷಕೆ ಮುರಳಿ ಉಲಿಯಿತು
ರಾಗ ಹೊಮ್ಮಿತು ಹಾಡು ಹರಿಯಿತು

ಮರೆತೆ ನನ್ನ ಮರೆತೆನೆಷ್ಟೋ ಭವದ ಬನ್ನ
ನಾದಗಡಲ ಲೀಲೆಯಲ್ಲಿ ಜೀವ ಮುಳುಗಿತೆನ್ನ
ಬಂದು ಬಾಹುಗಳು ಬಳಸಿದವೆನ್ನ
ಸ್ಪರ್ಷಾಲಿಂಗನದೊಳು ನಾನಾದೆನು ಚಿನ್ನ

ಕುಣಿದೆ ಕುಣಿದೆ ದಣಿಯದೆ ಕುಣಿದೆ
ಕುಣಿವ ಭರದಲಿ ದಿವದಲಿ ನಿಂದೆ
ಮೃದುಕರಗಳು ಮೆಲ್ಲನೆ ತಟ್ಟಿದುವೆನ್ನ
ತಟ್ಟನೆ ಕನಸದು ಒಡೆಯಿತು ನನ್ನ
ಮರೆತಯಾತನೆ ಬಂದಿರಿಯಿತು ನನ್ನ

## ಹಕ್ಕಿಗಳು ಮತ್ತು ನಾನು

ಹಾಯಾಗಿ ಹಾರುವ ಹಕ್ಕಿಗಳೆ
ನಿಮ್ಮ ರೆಕ್ಕೆಗಳನ್ನೊಮ್ಮೆ ನೀಡಿ
ಮುಕ್ತ ಆಕಾಶದಲ್ಲಿ ಸುತ್ತಿ ಬರುವೆ
ಮೈಲಿಮೈಲಿಗಳಾಚೆ ದೂರ ದೂರ
ಸ್ವಚ್ಛಂದ ವೈಹಾಳಿ ಮುಗಿಸಿ ಬರುವೆ
ಅನಂತಗಳನ್ನೂ ಬಗಿದು ಬರುವೆ

ಚಂದ್ರಲೋಕದ ಬಾಗಿಲು ಬಡಿದು
ಕುಶಲ ಕ್ಷೇಮಗಳ ಕೇಳಿ ಬರುವೆ
ಸೂರ್ಯ ಪಾನವಷ್ಟು ಮಾಡಿ ಬರುವೆ
ನಕ್ಷತ್ರ ನೇಹಿಗಳನೊಮ್ಮೆ ಕಂಡು ಬರುವೆ

ಹಿಂಡು ಹಿಂಡಲಿ ಅಲೆದು ಆಗಸದ
ಸೊಗಗಳನ್ನು ಕಲೆತು ಉಂಡು
ಬಾಳುವ ನಿಮ್ಮ ಬದುಕೆನಗೆ ಅಸೂಯೆ
ಕಾಳು ಕಡ್ಡಿಗಷ್ಟೇ ಬೇಕು ಭೂಮಿ ನಿಮಗೆ
ದಿನದಿನಕೆ ಆಗಸವೆ ಆಡುಂಬೊಲ
ನಿಮ್ಮ ಗಮನ ಸ್ವೇಚ್ಛೆಗಿಲ್ಲ ಅವಾಂತರ
ಹಾರು ಹಾರುವುದೆ ಬದುಕು ನಿಮಗೆ ನಿರಂತರ

ನಿಮ್ಮ ನಿಮ್ಮೊಳಗಿಹುದು ಎಂಥ ಒಡನಾಟ
ಸ್ವಾರ್ಥ ಮೋಸ ವಂಚನೆಗಿಲ್ಲ ಸೆಣಸಾಟ
ನಿಸ್ಪೃಹದ ಸಂತಾನ ಸಂಭೋಗ ಸಂದಣಿ
ಕರ್ತವ್ಯದೊಲು ಚಿಂತೆ ಬಾಳಿನಾಟ
ನೆನ್ನೆ ನಾಳೆಯ ಚಿಂತೆ ನಿಮಗೆಂದಿಗೂ ಇಲ್ಲ

ಇಂದು ಸಿಗುವ ಅನ್ನವು ದೇವರ ಕೊಡುಗೆ
ಸಾವಿಲ್ಲವೆನಲಾರೆ ನೋವಿಲ್ಲವೇ ನಿಮಗೆ

ನಿಮ್ಮಂತೆಯೇ ನನಗೂ ಹಾರುವ ಕನಸು
ಆಸೆಗಳು ಸೂಸಿದಾಗ ಮುಳ್ಳು ಇರಿದಾಗ
ಬೆಂಕಿ ಉರಿದೆದ್ದಾಗ ಕಡಲುಕ್ಕಿದಾಗ
ಕೋಮು ಜಾತಿಗಳುರಿದು ಪ್ರಜ್ವಲಿಸಿದಾಗ
ರಕ್ತದಾಹದ ಭೂತ ಕೆರಳಿ ನಿಂತಾಗ
ಈ ಭೂಮಿ ಬೇಡವೆನಿಸಿ ಚಡಪಡಿಸುತ್ತೇನೆ
ದಿಗಂತದಾಚೆಗೆ ಜಿಗಿದು ಕರಗ ಬಯಸುತ್ತೇನೆ

ಬೆಂಕಿ ತಣಿದಾಗ ಶಾಂತಿ ಕವಿದಾಗ
ಪ್ರೀತಿ ಹರಿದಾಗ ಸ್ನೇಹ ಮೊಳೆತಾಗ
ಮತ್ತೆ ಭೂಮಿ ಸೆಳೆದು ಎಳೆಯುತ್ತದೆ
ಅವಳ ಕರುಳಬಳ್ಳಿ ನಾನೆಂದು ನೆನಪಾಗುತ್ತದೆ
ನನ್ನ ರಕ್ತದಲಿ ಬೆರೆತ ಅವಳ ವಾತ್ಸಲ್ಯ
ಕಷ್ಟದ ಬೆಟ್ಟಗಳಡಿ ನಲುಗಿದರೂ ನನ್ನ
ತಾಯಿಯ ನಗೆ ಮಲ್ಲಿಗೆ ಕಂಪು ಸೆಳೆಯುತ್ತದೆ

# ಮಡದಿಯ ಅಳಲು

ಅಯ್ಯೋ ಗಂಡನೇ ನನ್ನ
ಚೆಲುವ ಗಂಡನೇ
ಏಡಿಯೊಂದು ಓಡಿಬಂದು
ಬೆರಳ ಕಚ್ಚಿತೋ
ನನ್ನ ಬೆರಳ ಕಚ್ಚಿತೋ

ಬೆಂಕಿಯುರಿಯ ತಾಳಲಾರೆ
ಹೆಜ್ಜೆಯೊಂದನೂರಲಾರೆ
ಸಾವು ನೋವು ಸಹಿಸಲಾರೆ
ಓಡಿಬಾರೆಲೋ ಇನಿಯ
ಓಡಿ ಬಾರೆಲೋ

ನನ್ನ ಕಂಡರೆಷ್ಟೋ ಪ್ರೀತಿ
ನನಗೆ ಗೊತ್ತು ನಿನ್ನ ರೀತಿ
ಬಲ್ಲೆನಿಲ್ಲಿ ನನ್ನ ಗತಿ
ಬಳಿಗೆ ಬಾರೆಲೋ ಚೆಲುವ
ಬಳಿಗೆ ಬಾರೆಲೋ

ಮೈಯ ತುಂಬ ಮುಳ್ಳು
ಉರಿಯ ಜ್ವಾಲೆ ಬೆಳ್ಳು
ಮುತ್ತು ಕೊಟ್ಟು
ಮೈಯ್ಯ ಸುತ್ತು
ತಂಪುನೆರಳು ಬಿತ್ತೋ
ನನ್ನ ಕಷ್ಟ ನಿನಗೆ ನಷ್ಟ
ನನ್ನ ಸುಖವೆ ನಿನಗೆ ಇಷ್ಟ

ಅದಕೆ ನನ್ನ ಉಳಿಸಿಕೊಳ್ಳೋ
ನನ್ನ ಪ್ರಾಣ ನಿನಗೆ ಕಳ್ಳೋ

ಹೆಜ್ಜೆಯೊಂದನೂರಲಾರೆ
ಮಂಚದೆಡೆಗೆ ನಡೆಯಲಾರೆ
ಹೊತ್ತು ನನ್ನ ಒಯ್ಯೋ ಬೇಗ
ಮೆತ್ತೆಯಲ್ಲಿ ಇರಿಸೋ ಈಗ

ಬೇಗ ಬೇಗ ಅಟ್ಟು ಉಣಿಸು
ನೋವು ಹಸಿವು ಎರಡು ತಣಿಸು
ಅಕ್ಕಿಯನ್ನವೆನಗೆ ಬಡಿಸು
ಜೋಳದನ್ನ ಉಂಡು ಸುಖಿಸು

ಕಾಲು ಕೈಯ್ಯಿಮ್ಮೈಯ್ಯನೊತ್ತು
ಬೆಚ್ಚಗಿರುವ ಹೊದಿಕೆಯಿತ್ತು
ದೂರವೆಲ್ಲೂ ಹೋಗದಿಲ್ಲಿ
ನೋವ ನೀಗು ನಗೆಯ ಚೆಲ್ಲಿ
[ತೆಲುಗು ಜನಪದ ಗೀತೆಯಿಂದ ಪ್ರೇರಿತ]

## ಸ್ವಗತ

ಎಂಬತ್ತಾರರ ಪ್ರಾಯದಲ್ಲಿ
ಮುಚ್ಚಿದ ಬಾಗಿಲುಗಳ
ದಿಗಿಲು ಕಾಡುತ್ತದೆ
ಏಕಾಕಿ
ಒಂಟಿತನದ ಭೂತ ಕಾಟ
ಕಳವಳದ ಮನಸು
ಹಂಗುಭಂಗಗಳ
ಅವಮಾನ
ನೋವಿಗೊಂದೇ ಸಾವು
ಪರಿಹಾರ
ಬತ್ತಿದೆದೆಗಳ ಹಿಂಡಿ
ಹನಿದ ರಕ್ತವನುಣಿಸಿ
ಚಿಂದಿಯಲಿ ಶೀಲಮರೆಸಿ
ಪುತ್ರ ರತ್ನಗಳೆಂದು
ಜೋಪಾನದೊಳಗಿಟ್ಟೆ
ವ್ರತ ನೇಮ ನೋಂಪಿಗೂ
ದಕ್ಕದದೃಷ್ಟ ನನ್ನದೆಂದು
ನಲಿವಿನಲಿ ನಲಿದಿತ್ತು
ಮನದ ನವಿಲು
ಗಂಡ ಎರವಾದರೂ
ಗಂಡು ಮಕ್ಕಳ ತಾಯಿ
ನನಗಿಲ್ಲ ನಾಳಿನಾ ಚಿಂತೆ
ಎಂಬ ಗರ್ವದ ಗರಿಯ
ಮುಡಿದಿದ್ದೆ
ರೆಕ್ಕೆಗೆ ಬಲಬಂದು ನಿಂತವರು

ಕಾಳುಕಡ್ಡಿಗೆ ಕೊರತೆ ಇಲ್ಲದವರು
ಅಮ್ಮನಿಗೆ ಹಿಡಿಯನ್ನ
ಇಲ್ಲವೆಂದಟ್ಟಿದರು
ಹುಟ್ಟಿಸಿದ್ದೇಕೆಂದು
ಕೇಳಲು ನಿಂತವರು
ಸಾಕಿ ಸಲಹುವುದು
ನಿನ್ನ ಧರ್ಮ!
ಸಾಕಬೇಕೆಂದೇಕೆ ಕೇಳುವೆ
ಗುಟುಕು ಕೊಟ್ಟು
ಗರಿಬೆಳೆಸಿದ ಹಕ್ಕಿ
ಮರಿಯ ಕೇಳುವುದೇನು
ಸಾಕಿ ಸಲಹೆಂದು!
ಕೇಳುವ ಈ ಸವಾಲಿಗೆ
ಉತ್ತರವೆಲ್ಲಿದೆ ನನಗೆ!

# ಉತ್ತಿಷ್ಠ ! ಉತ್ತಿಷ್ಠ

ಎಚ್ಚರೆಚ್ಚರು ತಾಯೆ
ಸುಮ್ಮನಿಹೆಯೇಕೆ
ಕಾಳಿ ಕಂಕಾಳಿ ಮಾಂಕಾಳಿ
ನೂರೆಂಟು ಹೆಸರ ಗರಿ
ನಿನ್ನ ಮಕುಟಕ್ಕೆ
ದುಷ್ಟ ಶಿಕ್ಷಣ ಶಿಷ್ಟ ರಕ್ಷಣ
ಘೋಷಗಳ ಅನುರಣನ
ಯುಗಯುಗಗಳಲ್ಲೂ
ಪುರುಷ ಸತ್ವಗಳನ್ನು
ಹೀರಿಕೊಂಡು
ಹತ್ತುಕೈಗಳ ತುಂಬ
ಶಸ್ತ್ರಾಸ್ತ್ರವಿರಿಸಿ
ಮೆರೆದವಳು
ಪೊರೆದವಳು
ಮಹಿಷಾಸುರನ ಕೊಲೆಗೆ
ಸಿಂಹವಾಹಿನಿಯಾಗಿ
ಅಷ್ಟಲೋಕಗಳಲ್ಲೂ
ಅಬ್ಬರದ ಜಾಹಿರಾತು!

ಇಂದೇಕೆ ಕಂದಿಕುಂದಿ
ನಿತ್ರಾಣಳಾಗಿರುವೆ
ಹೆಜ್ಜೆ ಹೆಜ್ಜೆಗು ಸಿಗುವ
ಮನುಜ ರಕ್ಕಸರೆದೆ ಬಗಿಯೆ
ಭಯವು ಕಾಡುವುದೇನು?
ನಿನ್ನ ಜಾತಿ ಜೀವಗಳೆಲ್ಲ

ಬಣ್ಣಗೆಟ್ಟು
ಎಲ್ಲೆಗಳಿಲ್ಲದೆ ಹಾರುವ
ಹದ್ದುಗಳಿಗೆ ಅನಾಯಾಸ
ತುತ್ತಾಗಿ ಸಾಯುವ
ಚೀರಾಟಗಳಲ್ಲಿ
ಸಮಾಧಿಯಾದರೂ
ನೀನೇಕೆ ತಣ್ಣಗೆ
ಗುಡಿಯಲ್ಲಿ ಭದ್ರ ಕುಳಿತಿರುವೆ?
ತಿಂಡಿ ತಿನಿಸು ಮದ್ಯ ಮಾಂಸ
ಚಪ್ಪಲಿ ಸೆಲೂನಿನ
ಜಾಹಿರಾತುಗಳಲ್ಲಿ ನಿನ್ನ
ಹೆಸರಿನ ಧಾರಾಳ ಚಲಾವಣೆ
ರಾಡಿ ರಾಡಿ ರೋಡಾಡಿದರೂ
ಕೆರಳಲಿಲ್ಲವೇ
ನಿನ್ನೆದೆಯ ಕಿಡಿ?
ಕೆದರಿಲಿಲ್ಲವೇ ನಿನ್ನ ಮುಡಿ?
ನಿನ್ನ ಕತೆಗಳು ನಿಜವಾದರೆ
ನೀನೇಕೆ ಮತ್ತೆ
ಅವತರಿಸಿ ಬಾರದಿಹೆ
ಉತ್ತಿಷ್ಠ! ತಾಯಿ ಉತ್ತಿಷ್ಠ!!
ಇನ್ನಾದರೂ ನಿನ್ನ
ಸ್ವಾಭಿಮಾನವ ಉಳಿಸಿಕೊ
ಪುರಾಣ ಪುನರಾವರ್ತನೆ
ಆಗುವಂತೆ
ಮತ್ತೊಮ್ಮೆ ಬರೆಸಿಕೊ
ನಿನ್ನ ಸಾಹಸಗಳ!

# ಆ ಮನೆ

ಮತ್ತೆ ಮತ್ತೆ ಹಾದು
ಬರಬೇಕೆಂದುಕೊಳ್ಳುತ್ತೇನೆ
ಆ ಮನೆಯನ್ನು
ಬೆಂಕಿಪೆಟ್ಟಿಗೆಯಂಥ
ಪುಟ್ಟ ಬಂಗಲೆಯನ್ನು
ನನಗೇ ನೆನಪಿರದ
ನನ್ನ ಬಾಲ್ಯ ಕಳೆದದ್ದು
ತ್ರಾಣವಿಲ್ಲದೆ ಬಿದ್ದದ್ದು
ಹಸಿದು ಅಮ್ಮನ ಸೆರಗು
ಹಿಡಿದು ಎಳೆದದ್ದು
ಸಿಟ್ಟು ಅಸಹಾಯಕತೆಯಲ್ಲಿ
ಸಾಯಲೆಂದು ಶಾಪವ ಕೊಟ್ಟದ್ದು
ಪೆಟ್ಟುಗಳ ತಿನ್ನುತ್ತಲೇ
ಗಟ್ಟಿಯಾಗಿ ಬದುಕುಳಿದದ್ದು
ಬೆಳಕಲ್ಲೂ ಕತ್ತಲನ್ನು
ಹೊದ್ದುಕೊಂಡೇ ಮಲಗಿದ್ದು
ಅಪರೂಪಕ್ಕೆ
ಆಗೊಮ್ಮೆ ಈಗೊಮ್ಮೆ
ಅರಳಿದ ನಗುವಿನಲ್ಲೂ
ಬಿಕ್ಕುಗಳು ಕೇಳಿಸಿ
ಬೆದರಿದ್ದು
ಎಲ್ಲವೂ ಆ ಮನೆಯ
ಗೂಡುಗಳಲ್ಲಿ
ಬೆಚ್ಚಗೆ ಮಲಗಿರಬೇಕು
ಹೋಗಿ ನೋಡಲೇ ಬೇಕು

ನೋಡಿ ನಯವಾಗಿ ನುಡಿಸಿ
ನೇವರಿಸಿ ಬರಬೇಕು
ಇನ್ನೂ ಇರಬಹುದೆ
ಆ ಕತ್ತಲ ಮೂಲೆಯಲ್ಲಿ
ಕಾಲು ಮುರಿದಿದ್ದ
ಗೊಂಬೆಯ ನಿಲ್ಲಿಸಿದ್ದೆ
ಬೆತ್ತಲೆಯ ಬಿಂಬವನಿತ್ತು
ಕಚಗುಳಿಯಿರಿಸಿದ್ದ
ಕಪ್ಪು ಗೋಡೆಯ ಮೇಲಿನ
ಬೆಳ್ಳಿ ಹೊಳಪಿನ ಕನ್ನಡಿ!
ಈಗಲೂ ಇರಬಹುದೇ
ನನ್ನೆಲ್ಲ ಭೂತದ ನೋವು
ಭವಿಷ್ಯದ ಕನಸುಗಳ
ಸಂಗಮಿಸಿ ನಿಲಿಸಿದ್ದ
ನನ್ನ ಆ ಮನೆಯನೊಮ್ಮೆ
ನೋಡಿ ಬರಲೇ ಬೇಕು

# ಯಾರಿವನು

(ನಿಟ್ಟೂರು ಶ್ರೀನಿವಾಸರಾಯರ ಹುಟ್ಟುಹಬ್ಬದ ಸಂದರ್ಭಕ್ಕೆ)

ಯಾರಿವನು?
ಸದಾ ಹೊಳೆವ ಕಣ್ಣುಗಳಲ್ಲಿ
ತಿವಿವ ಬೆಳಕು
ನೀಲ ದೇಹದ ಹುಡುಗ
ನಿನ್ನೆ ಮೊನ್ನೆಯಷ್ಟೇ
ನೂರರ ಹುಟ್ಟು ಹಬ್ಬ
ಇವನನ್ನು ಹುಡುಗನೆನ್ನಲೇ
ಶತಾಯುಷಿ
ಮುದುಕ ಎನ್ನಲೇ?
ನಡೆದಾಡುವ
ಉತ್ಸಾಹದ ಚಿಲುಮೆ
ಚಲಿಸುವ ರಾಟೆ
ಶತಮಾನ ಸಂಸ್ಕೃತಿ
ಪರಂಪರೆಯ ಮೂಟೆ

ರಕ್ತಮಾಂಸದ ಕೊರತೆ
ಆದರೂ ಹರಿವುದು
ಕೃಶ ದೇಹ ಪಾತ್ರದಲ್ಲಿ
ಬತ್ತದ ನಿರಂತರ ಒರತೆ
ಕೈಯೆರಡೇ ಆದರೂ
ನೂರು ಕೈಗಳ ಕೆಲಸ
ನಡುವೆಯೂ ನಾಲ್ಕು
ಮಂದಿಯ ಚಿಂತನೆ

ತುಡಿವ ಮನಸು
ಎಲ್ಲರ ಯೋಗಕ್ಷೇಮದ ಕನಸು
ಸಾಹಿತ್ಯ ಸಮಾಜ ಸಂಸ್ಕೃತಿ
ಹಬ್ಬವೋ ಪಬ್ಬವೋ
ಏನಾದರೇನು
ಈ ಕಡ್ಡಿ ಪೈಲ್ವಾನು

ಮೊದಲ ಸಾಲಿನ ಕುರ್ಚಿಯಲ್ಲಿ
ಹಾಜರಾಗುವುದು ಖಾತರಿ
ಸೋಗುಗಳ ಬೀಗಿಲ್ಲ
ಇವನೆದೆಯ ಭಾವಗಳು
ಬಿಚ್ಚಿಟ್ಟ ಹಣ್ಣಿನ ಹೋಳುಗಳು

ಶತಮಾನದ ನೆನಪು
ಬಿಳಲುಗಳು ಬಲವಾಗಿ
ಬೇರೂರಿ ಕರೆದದ್ದೇ
ಕೈಕಟ್ಟಿ ಸಾಲುಗಟ್ಟಿ
ಕವಾಯತಿನ ಶಿಸ್ತಿನಲ್ಲಿ
ನಿಲ್ಲುವುದು ಇವನೆದುರು
ಒಂದಿಷ್ಟು ಅಗೆದು
ಕೈಯಿಳಿಸಿ ಮೊಗೆದರೆ
ಎಷ್ಟೊಂದು ಅದಿರು
ಬೆಳ್ಳಿ ಬಂಗಾರ ಪ್ಲಾಟಿನಮ್ಮು
ಪಳಪಳನೆ ಹೊಳೆದು
ಹೊಮ್ಮುವುದು ಬೆಳಕು
ಬ್ರಹ್ಮನಿಗುಂಟು ನಾಲ್ಕು ಮುಖ
ಇವನಿಗೋ ಸಹಸ್ರಮುಖ
ಗ್ರಹಿಸಿ ಹೀರುತ್ತಲೇ
ಲೋಕದಾಲೋಕ
ಮೈಯೆಲ್ಲಾ ಬೆಳಕು! ಬೆಳಕು!!
ನಕ್ಕರೆ ಸಾಕು ಉಕ್ಕಿ ಹರಿವುದು

ಬೆಳ್ದಿಂಗಳ ಹೊನಲು
ಉರಿವುದು ಅರ್ಥದೀಪ್ತಿ
ಪುಟ್ಟ ಗೂಡಿನೆದೆ ತುಂಬ
ಎಷ್ಟೊಂದು ಭಾವರಾಶಿ
ಪ್ರೀತಿ ಸ್ನೇಹಗಳ ಘೊಂಡಾರಣ್ಯ
ಮುಗ್ಧತೆಯ ಸೆಳಕು

ಬಳಿಗೆ ಸುಳಿದರೆ
ಸ್ನೇಹ ಗಂಧ ಸ್ಪರ್ಶ
ಮಾತೊಂದೊಂದೂ ಅಣಿ ಮುತ್ತು
ಎಲ್ಲರೊಳಗೊಂದಾಗಿ
ಎಲ್ಲರಿಗೂ ಬೇಕಾಗಿ
ದಣಿವು ಮಣಿವುಗಳ ಮರೆತು
ಮೋಹಕ ನಗೆಯ
ಚುಂಬಕದಲ್ಲಿ ಸೆಳೆದು
ಕಟ್ಟುವ ಈ ಇವನ
ಆತ್ಮ ಚೆಲುವಿಗೆ
ಕಟ್ಟುವ ಬೆಲೆ ಯಾರಿಗಿದೆ?

# ಸಖ ಬಾ ಸಂಚಾರಕೆ

ಸಖ ಬಾ ಸಂಚಾರಕೆ
ಹೊರಡಲು ಈಗ ಬಾ ಬೇಗ
ಸುಂದರ ರಾತ್ರಿಯು
ಜಗವನೆ ತಬ್ಬಿದೆ
ನೀರವ ಶಾಂತಿಯು
ಎಲ್ಲೆಡೆ ಹಬ್ಬಿದೆ
ಪಿಸುದನಿಯಲಿ ಹೂ
ಮಾತಾಡುತಿದೆ
ತಾರಾ ಲೋಕವೆ ಹಾಡುತಿದೆ
ಇನಿಯಳ ಸಂಗಕೆ
ಹಾತೊರೆಯುತ ಶಶಿ
ತೇಲುತ ಬರುತಿಹನು
ಮಂಜುಳ ರವದಲಿ
ಹಾವಿನ ತೆರದಲಿ
ಬಳುಕುತ ಝರಿ ನದಿ
ಕಡಲನು ಸೇರಲು
ಓಡುತಿವೆ
ನೀನೂ ನಾನು
ಇಬ್ಬರು ಸೇರಿ

ನೀಲಿಯ ಬಾನಿನ
ನಿರ್ಮಲ ನೆರಳಲಿ
ಕುಳಿತೊಂದಿಷ್ಟು
ಹಾಡೋಣ
ನೆನ್ನೆಯು ಬೇಡ

ನಾಳೆಯು ಬೇಡ
ಈ ಕ್ಷಣವಷ್ಟೇ
ನಮಗಿರಲಿ
ನೂರು ಕಾಲಕೂ
ನಮ್ಮಯ ಪ್ರೀತಿ
ನಿತ್ಯ ವಸಂತದ
ತೆರನಿರಲಿ

## ನನ್ನೊಳಗೇ ನನ್ನ ಲೋಕ

ನನ್ನೊಳಗೇ ನನ್ನ ಲೋಕ
ಇರಲು ಬೇರೆ ಇನ್ನೇನ ಬೇಕ?
ಅಳುವಿದೆ ನಗುವಿದೆ
ಅರಳಿ ಉರುಳಿ ಸೆಟೆದು ನಿಂತು
ಗಿರಿಯ ಹೊರುವ ಎದೆಯಿದೆ

ಹೊಡೆವ ಬಡಿವ ಜಗವ ಮರೆತು
ಪ್ರೀತಿ ಹೊತ್ತೆ ತಿರುಗುವೆ
ಯಾರೊ ಮಿಡಿಯೆ ಹೃದಯ ತಂತಿ
ಒಡನೆ ನುಡಿದು ಹಾಡುವೆ
ಗೀತದಿಂಪುಕಂಪನು ಜಗಕೆ ನೀಡುವೆ

ನೋವಿನಾಟ ನಂಜಿನೂಟ
ನನಗೆ ನಾನೇ ಸವಿಯುವೆ
ನನ್ನ ರಾಗಕೆ ನನ್ನ ಹೆಜ್ಜೆಗೆ
ನನಗೆ ನಾನೇ ನಲಿಯುವೆ
ನನ್ನ ಪ್ರಾಣ ದೀಪವ ನನಗೆ ನಾನೇ ಬೆಳಗುವೆ

ಮತ್ತಳಾಗುತ ಉನ್ಮತ್ತಳಾಗುತ
ಇನಿಯಗೊಲಿದು ಕುಣಿಯುವೆ
ಕೋಟಿ ಕನಸನು ಸೆರಗಲಿರಿಸಿ
ಊರು ಕೇರಿಯ ತಿರುಗುವೆ
ನೊಂದ ಮನಗಳ ತಣಿಸುವೆ
ಶೂನ್ಯದಲ್ಲಿನ ಪೂರ್ಣಕೊಲಿದು
ಕೊರಳ ಕೊಳಲನು ನುಡಿಸುತ
ಹಾಡಿಹಾಡಿ ಅಳಲ ಮರೆಯುವೆ
ಬೆಳಗಿ ಬೆಳಗಿ ಇರುಳ ಕಳೆಯುವೆ
ಸುಪ್ತತೇಜಕೆ ಒಲಿದು ಉಳಿಯುವೆ

## ಉದುತಡಿಯ ಕೋಗಿಲೆಗೆ

ಈ ಕೋಗಿಲೆಗೆ ಮಧುಮಾಸ
ಚೈತ್ರ ಮಾಮರಗಳ ಹಂಗಿಲ್ಲ
ಕೊರಳಲ್ಲಿ ವಿರಹದುರಿಗಳ
ಇರಿಸಿಕೊಂಡೇ ಗರಿಬಿಚ್ಚಿದವಳು

ಅಲೆದಲೆದರೂ ದಣಿಯಲಿಲ್ಲ
ಚಳಿಮಳೆಗು ಒಡಲಿಷ್ಟು ಕನಲಲಿಲ್ಲ
ಪಾಳು ದೇಗುಲವೆ ಅರಮನೆವಾಸ
ಭಿಕ್ಷಾನ್ನಗಳೆ ಅವಳಿಗೆ ಪಂಚಪರಮಾನ್ನ

ಕಾರಿರುಳನೇ ಮೈ ತುಂಬ ಹೊದ್ದು
ಸೂರ್ಯಕಿರಣಗಳ ಹಣೆಗೆ ಬಳಿದು
ಉಸಿರೆಳೆದು ಬಿಗಿದು ತಾರದಲಿ ನಿಂತು
ಹರಿಸಿದಳು ಇಂಚರದ ಹೊನಲು

ಮಾಮರದ ಮಲ್ಲಿಗೆಯ ಕಂಪು ಸೊಂಪು
ತೊರೆದು ಗಿರಿಬೆಟ್ಟಗುಡ್ಡ ಕಾಡುಗಳಲ್ಲಿ
ಅಲೆದಲೆದು ಕದಳಿ ಬನ ಬಯಸಿದಳು
ಕೊರಳ ಇಂಪನ್ನೆಲ್ಲ ಒಲಿದವಗೆ ಇತ್ತಳು

ಅನುಭಾವದಾಗಸವೆ ಆಡುಂಬೊಲ
ವಿರಹವೇ ಉಸಿರು ಹಸಿರು ಕೂಡ
ಗಿಳಿ ಅಂಚೆ ತರುವನಗಳ ಸಖ್ಯಸಾಂಗತ್ಯ
ಈ ಕೋಗಿಲೆಯ ದನಿ ಗಂಗೆ ಹರಿವುದೆಲ್ಲ ಕಾಲ

## ಅಕ್ಷರ ಕಿನ್ನರಿಯರ ಅನಂತ ಗೀತ

ಕಪಾಟಿನ ಸಂಕೀರ್ಣ ಬಿರುಕುಗುಳಲ್ಲಿ
ಸಂದಿಗ್ಧ ಸಂಕೋಲೆಗಳಲ್ಲಿ
ಕತ್ತಲ ಕಾರಡವಿ ಬೀದಿಗಳಲ್ಲಿ
ಉಸಿರು ಕಟ್ಟಿಸುವ
ಬಿಕ್ಕುಗಳ ಅನುರಣನ
ನೋವುನರಳಿಕೆಯ
ತನನನ ಧೀಂತನ
ಮನದ ಕನ್ನಡಿಯಲ್ಲಿ
ಫಳಕ್ಕನೆ ಹೊಳೆದ
ಪ್ರತಿಬಿಂಬಗಳ ಸಾಲು
ಶಾಪಗ್ರಸ್ತ ಅಕ್ಷರ ಕಿನ್ನರಿಯರ
ಕೆನ್ನೆಯಲಿ ಹರಿವ ಅಳಲು

ಕಂಡದ್ದೇ ಕೈ ಚಾಚಿ
ಆರ್ತತೆಯಲ್ಲಿ ಆಕಳಿಸಿ
ಕೇಳಿತು –
ಎತ್ತಿಕೊ ಮಗು ಎತ್ತಿಕೊ
ಗಾಳಿ ಬೆಳಕಿಲ್ಲದೆ
ಪಾಚಿಗಟ್ಟಿದ್ದೇವೆ
ಗೂಡು ಹೋಗಿದ್ದೇವೆ
ಆದರೂ ಎದೆ ತುಂಬ
ತುಂಬಿರಿಸಿಕೊಂಡಿದ್ದೇವೆ
ಇತಿಹಾಸಗಳನಡಗಿಸಿಕೊಂಡಿದ್ದೇವೆ
ಬಂದಿ ಗುಹೆಯ ಮುಂದೆ ನಿಂತು
ಮಂತ್ರವನು ಉಗ್ಗಡಿಸು

ಆಲಿಬಾಬಾನಂತೆ –
ಬಾಗಿಲ ತೆಗೆಯೆ ಸೇಸಮ್ಮ
ಉಗುಳಿ ಬಿಡುತ್ತೇವೆ
ಬೆಳ್ಳಿ ಬಂಗಾರ ವಜ್ರ ವೈಡೂರ್ಯ
ಹವಳ ಮುತ್ತಿನ ರಾಶಿ ರಾಶಿ
ಯುಗಯುಗಾಂತರದ
ಸೊಗದ ನವಿಲುಗಳು
ನಲಿದಾಡುತ್ತವೆ
ಬ್ರಹ್ಮಾಂಡವೇ ನಿರ್ವಾಣದಲಿ
ನಿನ್ನೆದುರು ನಿಲ್ಲುತ್ತದೆ
ನಿನ್ನೆ ನಾಳೆ ಇಂದುಗಳ
ಕನಸು ಹಕ್ಕಿಗಳು
ಅನಂತ ಆಕಾಶದಲ್ಲಿ
ಗರಿಗೆದರಿ ಹಾರುತ್ತವೆ
ಹಾರುವ ಬೆಟ್ಟಗಳು
ಹಾಡುವ ಝರಿಗಳು
ರೆಕ್ಕೆಯ ಚಿಕ್ಕಿಗಳು
ನಿನ್ನ ಮುಂದಿಳಿದು
ಕುಣಿಯುತ್ತವೆ
ಇನ್ನಷ್ಟು ದೂರ ಸರಿದರೆ ಸಾಕು
ಮಾಯಾ ನಗರಿಯ
ಮೋಹಕ ಸೌಧಗಳು
ಬೆರಗಿನ ಬಣ್ಣಗಳು
ಕೈಬೀಸಿ ಕರೆಯುತ್ತವೆ
ನಿನ್ನ ಪ್ರೀತಿಯ ಗಂಧ ಚೆಲ್ಲಿ
ಎತ್ತಿ ಅಪ್ಪಿಕೋ ಮಗು
ಕವಿಗಳ ಕಣ್ಣಿನ ಗೊಂಬೆಗಳು
ಚಿತ್ತದ ಕನಸಿನ ಚಿತ್ರಗಳು
ಭಾವ ತರಂಗದ ಬೆನ್ನಲಿ
ನಲಿಯುವ
ಕಿನ್ನರ ರೂಪದ ಅಂಚೆಗಳು

ನಿನಗೇ ಮಗು
ಗೂಡುಗಟ್ಟಿ ಧೂಳಿನಲ್ಲಿ
ಸಾಯಲಾರೆವು
ಸೆರೆಗೆ ಸಿಲುಕಿ ಕೊರಗಿ
ಕರಗಿ ಬದುಕಲಾರೆವು
ಕಹಳೆಯಾಗಿ ಮೊಳಗಿ
ಜಗವ ತೂಗಬಲ್ಲೆವು
ಕೋಟಿ ಸೂರ್ಯರನ್ನು
ದಾಟಿ ಬೆಳಗ ಬಲ್ಲೆವು
ಎದೆಯ ಕಸವನೆತ್ತಿ ಚೆಲ್ಲಿ
ಜ್ಞಾನ ಗಂಗೆಯನ್ನು ಹರಿಸಿ
ಮುಗ್ಧರಾಗ ಕವಿತೆಯೊಂದ
ಬಿಡಿಸಿ ಕೊಡುವೆವು

ಹೆಪ್ಪುಗಟ್ಟಿದೆದೆಯ ನೋವ
ಇಳಿಸ ಬಾ ಮಗು
ಮನದ ಮೃದುಲ ಹಾಸಿನಲ್ಲಿ
ಇರಿಸಿಕೋ ಮಗು
ನಿನ್ನ ಪ್ರೀತಿ ಸ್ಪರ್ಶ ಮಂತ್ರ
ಶಾಪವೆಮ್ಮ ಬಿಡಿಸಲಿ
ಕಿನ್ನರರೆಮ್ಮೆಯ ಗೀತದ
ಗುಂಗಲಿ ಲೋಕವು
ಮೀಯುತ ನಲಿದಿರಲಿ
ನಿನ್ನಾದರವು ಎಮಗಿರಲಿ

# ಅಮ್ಮ

ಅಮ್ಮನ ಕಣ್ಣಲ್ಲಿ
ಕೆಂಡದುಂಡೆಗಳಿವೆ
ಆದರೆ ಸುಡುವುದಿಲ್ಲ
ಎದೆಯಲ್ಲಿ ಹೆಪ್ಪುಗಟ್ಟಿದ
ಲಾವಾ ಇದೆ
ಆದರೆ ಸ್ಫೋಟಿಸಿ
ಹೊರಗೆ ಹರಿಯುವುದಿಲ್ಲ

ಇದ್ದ ಪ್ರಾಯವನೆಲ್ಲ
ಸದ್ದಿಲ್ಲದೆ ಹೆತ್ತ ಪಿಂಡಗಳ
ಹಸಿವು ನೀಗುವುದಕ್ಕೆ
ಬೆಚ್ಚನೆಯ ಪ್ರೀತಿಯಲಿ
ಮಲಗುವುದಕ್ಕೆ
ಕೈಕಾಲು ಮುಖ ಮುಡಿ
ಹೆಜ್ಜೆ ಬೇರುಗಳೂರಿ
ಮುಗಿಲೆತ್ತರಕ್ಕೆ
ಬೆಳೆದು ನಿಲ್ಲುವುದಕ್ಕೆ
ಹನಿ ಹನಿಯಾಗಿ
ಸುರಿಸಿ ಕರಗಿಸಿ ಬಿಟ್ಟಳು
ಹೆಜ್ಜೆ ಹೆಜ್ಜೆಗು ಎದ್ದ
ಮುಳ್ಳು ದಿಣ್ಣೆಗಳೇರಿ
ಜಾರು ಬಂಡೆಗಳಲ್ಲೂ
ಬಲವೂರಿ ನಿಂತು
ಬದುಕು ಕಡಲನು
ಮಥಿಸಿ ಮಥಿಸಿ

ಹೊಗೆಯಾಗಿ ಹೊರಗೆದ್ದ
ನಂಜುನುಂಗುತ್ತ
ನುಂಗುತ್ತ ನಂಜುಂಡಿಯಾಗಿ
ತನ್ನ ಕುಡಿಗಳೆ ಬೆಳೆದು
ನೆರಳು ಕೊಡೆಯಾಗುವ
ಬೆನ್ನಿಗೆ ಆಸರೆಯಾಗುವ
ಕನಸುಗಳ ನೆಮ್ಮುತ್ತ
ನಗುತ್ತ ನಿಂತವಳು

ನಿದ್ದೆ ಮುಗಿದು
ಕತ್ತಲುಹರಿದು
ಕನಸುಗಳೊಡೆದು
ಬೆಳಕು ಹಿಡಿಯಲು
ಕಣ್ಣು ಬಿಟ್ಟಾಗ
ನಿರಾಶೆಯ ಗುದ್ದುಗಳು
ಗುಮ್ಮಿ ನೆಲಕಚ್ಚಿದಳು
ನಾಳೆ ಭರವಸೆ ಬೆಟ್ಟ
ಕುಸಿದು ಉರುಳಿ ನಿಂತಿರಲು
ದಿಕ್ಕು ದಿಕ್ಕಿಗೆ ಬಿಕ್ಕಿ
ಬೆಚ್ಚಿನಿಂತವಳು
ಅಮ್ಮ! ನನ್ನ ಅಮ್ಮ!!

## ಪ್ರಾರ್ಥನೆ

ಕೈಚಾಚಿ ಕರೆಯುತ್ತಿದ್ದಾಳೆ
ಹಣ್ಣು ಹಣ್ಣಾದ ಮುದುಕಿ
ಓ ಸಾವೇ ಬರಲಾರೆಯಾ
ಬಂದು ತಬ್ಬಿಕೊಳಲಾರೆಯ?

ಹಣ್ಣು ಕಾಯಿ ಬಿಡದ
ನೆರಳಿರದ ಮರ ನಾನು
ಜೀವ ಫಲ ಕಳಿತಿದೆ ಒಳಗೆ
ತೀರುತಿದೆ ಎಣ್ಣೆ
ಉರಿಯದು ದೀವಿಗೆ

ಹೆತ್ತ ಕುಡಿಗಳೆ ದೂಡಿ
ಗಡೀ ಪಾರಾಗಿಸಿದ ಮೇಲೇನಿದೆ?
ಕನಸುಗಳು ಕಸುವು
ಬತ್ತಿ ಕರಕುಗಟ್ಟಿದ ಮೇಲೆ
ಬೇಕೆನಿಸುವುದೇನು!!

ರಸಕಳೆದ ಸಿಪ್ಪೆ
ಕಸವಾಗಿ ಬಿದ್ದ ಕುಪ್ಪೆ
ನಿತ್ಯ ನೋವಿನೊಡನಾಟ
ಸಹಿಸಲೆಲ್ಲಿದೆ ಬಲವು?

ಹೆಣಭಾರವಾಗಿದೆ ಮುಪ್ಪು
ಉಸಿರೆಲ್ಲ ಬರಿ ನಿಟ್ಟುಸಿರು
ಹಸುರುಳಿದ ಭೂಮಿ

ಜೇನುಳಿದ ಹುಟ್ಟು ನಾನು
ಕರುಳ ಬಳ್ಳಿಯು ಸಿಡಿದು
ತನ್ನಂತೆ ತಾ ನೆಲವೂರಿ ಬೆಳೆದಿರಲು
ಆಸರೆಯ ಹಂಗೇಕೆ ಅದಕೆ?

ಹೊಳೆದಾಟಿ ಹೋದಾಯ್ತು
ಹೊರಳಿ ನೋಡಲು ಬೇಕೆ?
ಆಯುಷ್ಯಭಾರ ದೇಹ ಭಾರ
ಒಂಟಿತನದ ಭೀತಿ ಭೂತ ಕಾಟ
ಸಹಿಸಲಾರೆನು ತಂದೆ
ಕರೆಕಳಿಸು ಬೇಗದಲಿ
ನಿಂತ ಕಾಲಲೆ ಬಂದು ಬಿಡುವೆ
ನಿನ್ನ ಸನಿಹದ ತಂಪು
ಹೀರಿ ಬಿಡುವೆ

## ತೆಗೆದು ಬಿಡು ಬಾಗಿಲನು

ಕೀಲಿ ಕೋಣೆ ಕತ್ತಲ
ಹಾಸಿನಲಿ ಬಂದಿಯಾದರೆ
ಸೂರ್ಯಪಾನದ ಸೊಗದ
ಮತ್ತೆಲ್ಲಿ ಮನವೆ?
ಅಂಕೆ ಅಂಕುಶವಿಲ್ಲದೆ
ರಹದಾರಿ ಪರವಾನಗಿಗಳ
ಗೊಡವೆಯಿಲ್ಲದೆ
ನಿರಾತಂಕ ಸುಳಿವ ಗಾಳಿ
ಮೆಲ್ಲನಡಿಗಳನಿರಿಸಿ
ಮೆದುವಾಗಿ ತಟ್ಟಿದರು
ಸೂಜಿ ರಂಧ್ರಕೂ
ಎಡೆಯಿಲ್ಲದೆ ಸಮಾಧಿ
ಗೊಂಡೇಕೆ ಉಳಿವು?
ನವರತ್ನ ಕಾರಂಜಿ
ಕೈಸನ್ನೆಯಲಿ ಕರೆಯುತಿದೆ
ಸಪ್ತವರ್ಣದ
ಕಾಮನಬಿಲ್ಲ ಹಕ್ಕಿ
ಗರಿಗೆದರಿ ನಲಿಯುತಿದೆ
ಶೃಂಗಾರ ಮಂಗಳದ
ಮಂಜುಳ ಗೀತದಿಂಚರ
ಹೊನಲುಕ್ಕಿ ಹರಿಯುತಿದೆ
ಸುಪ್ರಭಾತದ ಸುಂದರ
ದೀಪ್ತಿ ರಂಗೋಲಿ ಸೊಗದಲ್ಲಿ
ಇಳೆನಕ್ಕು ನಲಿಯುತಿದೆ
ಮಧುಕರದ ಮೋಹರಕೆ

ಮನತೆರೆದು
ಮಧು ಪಾತ್ರೆಯೊಡ್ಡಿ
ಮಧುವೀವ ಮಲ್ಲಿಗೆಯ
ವಲ್ಲರಿಯ ಸೊಗದ ನರ್ತನ
ರಾಗ ಚೆಲುವುಗಳ ನೀರೂಟೆ
ದಿವ್ಯತೆಯ ನವ್ಯದಲಿ
ರಂಜಿಸಿರಲು
ಮುಗುಳಾಗಿ ಮುದುಡಿ
ಕೋಶಾವಸ್ಥೆಗಿಳಿದು
ಕನಸಿಗಷ್ಟೇ ಬದುಕ ಬೇಡ
ತೆರೆದು ಬಿಡು ಕದಗಳನು
ನುಗ್ಗಿ ಬರಲೊಮ್ಮೆಯೇ
ಹೊಸಜೀವ ಭಾವಗಳು
ಹುಳುಗಟ್ಟಿ ಹುಡಿಯುಟ್ಟಿ
ಹುತ್ತವಾದೆದೆಯೊಳಗೆ
ಪ್ರೀತಿ ಬೆಳಕಿಳಿದು ಕಸುಗೊಳ್ಳಲಿ
ಚೆಲುವು ಋತುಗಳ ಜಾತ್ರೆ
ಸಂಭ್ರಮದ ಪರಿವೇಶ
ಜಗವೆಲ್ಲವನು ಸುತ್ತಿ ನಿಲಲಿ
ತೆಗೆದ ಬಾಗಿಲ ಒಳಗೆ
ಸಿರಿಪೂರ ಹೊಗಲಿ

# ನಡುರಾತ್ರಿಯ ಸಂತೆ

ಯಾರು ಹೇಳಿದರು
ಸೂರ್ಯ ಕಣ್ಣು ಮುಚ್ಚಿದಾಗ
ಚಿಕ್ಕೆಗಳು ಕಣ್ಣು ಬಿಟ್ಟಾಗ
ಗತಿ ಸ್ಥಗಿತಗೊಳ್ಳುವುದೆಂದು?

ದಣಿದ ಜೀವ ಗೂಡು ಸೇರಿ
ಬೆಚ್ಚನೆಯ ಪ್ರೀತಿಯಲಿ
ಸವಿಯಾದ ಊಟದಲಿ
ತಣಿದು ನಿದ್ದೆಗೆ ಜಾರುವುದೆಂದು?

ಹೊರಳುತ್ತದೆ ಹಗಲು ಇರುಳಿಗೆ
ಕಮ್ಮನೆಯ ಕನಸುಗಳಿಗೆ
ಒಂದಾವರ್ತದಿಂದ ಮತ್ತೊಂದಕ್ಕೆ
ದಿಗ್ಭ್ರಮೆಯ ಹೊಸ ಲೋಕಕ್ಕೆ

ದೇಹ ಮೂಡಿ ಜೀವ ಮಿಡಿಯುತ್ತದೆ
ಹೆಜ್ಜೆಗೆ ರೆಕ್ಕೆ ಮೂಡುತ್ತದೆ
ಸೂರ್ಯನ ಕೆಂಪು ಕರಗಿದಾಗ
ಕಪ್ಪು ಗುಲಾಬಿಗಳು ಅರಳುತ್ತವೆ

ಇಳಿಬಿದ್ದ ಇರುಳ ದೀಪಗಳು
ನೆಲನೋಡಿ ನಕ್ಕರೆ
ಕೆಂಪು ದೀಪಗಳುರಿದು
ಕಣ್ಸನ್ನೆಯಲಿ ಕರೆಯುತ್ತವೆ
ಮೌನದ ಎದೆ ಸೀಳಿ ಗವಿಯ

ಬಾಗಿಲುಗಳು ತೆರೆದುಕೊಳ್ಳುತ್ತವೆ
ಭೂತಬೇತಾಳ ಭೀತಿಗಳು
ಸ್ವೇಚ್ಛಾವಿಹಾರಕ್ಕೆ ಹೊರಡುತ್ತವೆ

ಕಾಮದಾಹದ ಕದಗಳು
ರಭಸದಲಿ ತೆರೆದು
ಕಪ್ಪು ಗುಲಾಬಿ ತೋಟಗಳಲ್ಲಿ
ಸಂಭ್ರಮೋತ್ಸಾಹದ ಜಾತ್ರೆ ನೆರೆಯುತ್ತದೆ

ಕೇಕೆ ನಗು ಕಿಲ ಕಿಲ ಸದ್ದುಗಳ
ನಡುವೆ ಹೂ ಹಣ್ಣು ತರಕಾರಿ
ರವಾನಿಸುವ ದೈತ್ಯ ಲಾರಿಗಳ
ಆಕಸ್ಮಿಕಗಳಲ್ಲಿ ಅರಿಯದ
ಅಂತಿಮಯಾತ್ರೆ ಸಾಲುಗಟ್ಟುತ್ತದೆ

ಸೊಗಸು ಸವಿ ವಹಿವಾಟು
ಅಪಾಯದ ಗಂಟೆ ಮಿಡಿದ ಬೂಟು
ಕಳೆದುಕೊಂಡ ಕೆಂಪು ಮರೆತು
ದೇಹವರಳಿಸಿ ನಿಲ್ಲುತ್ತವೆ
ಕಪ್ಪುಗುಲಾಬಿಯ ದಂಡು

ಸರಿರಾತ್ರಿಯಲ್ಲಿ ನೆರೆವ ಸಂತೆ ಗದ್ದಲಕೆ
ತನ್ನದೇ ಮೋಜಿಗೆ ತಾರಕ್ಕೆರುವ ಶೃತಿಯಿದೆ
ಹಗಲಲ್ಲಿ ಅರ್ಥವೇ ಆಗದ
ಅಸಂಖ್ಯ ಕತೆಗಳಿಗೆ ನಿಗೂಢತೆಯ
ನೆರಳು ಸರಿದು ಫಳಕ್ಕನೆ
ಅರ್ಥದ ಮಿಂಚೊಂದು
ಹೊಳೆಯುತ್ತದೆ

## ಕುತೂಹಲ

ಶೀತಲ ಮಂದಹಾಸದ
ಮೊಗದ
ಚಂದಿರನೇ
ಹೇಳು ಹೇಳೆನಗೆ
ಎಲ್ಲಿಯ ತಂಪು ನಿನಗೆ ಬಂತು?

ಬಳುಕುವೊಡಲಿನ ಬಳ್ಳಿ ಹೆಣ್ಣೆ
ಹೇಳು ಬಳುಕಿನೊಡವೆ
ನಿನಗೆ ಯಾರಿಂದ ಬಹುಮಾನ
ಏಕಿಷ್ಟು ಸಮ್ಮಾನ?

ಹಗಲರಳಿ ಸಂಜೆ ಸಾಯುವ
ಹೂವೆ ನಿನ್ನ ಗೆಲುವಿಗೆ
ಕ್ಷಣದ ಬದುಕಿನುಲ್ಲಾಸಕ್ಕೆ
ಯಾವ ದೇವನ ವರವಿದೆ?

ಕಿರಣ ಚುಂಬನಕು ಮೊದಲೆ
ಮಣಿಗಳಂದದಿ ಹೊಳೆವ
ಇಬ್ಬನಿಯ ಇನಿಮುತ್ತೆ
ಭಯವಿಲ್ಲದಾ ನಿನ್ನ ಬಾಳ ಗುಟ್ಟೇನು?

ಯಾರ ತಣಿಸಲು ಹೀಗೆ
ಎದೆಯ ಸುಧೆಯನು ಸುರಿಸಿ
ಬರಿದಾಗಿಸುವ ಮುಗಿಲೆ
ನಿಸ್ವಾರ್ಥದರ್ಥವನು ತಿಳಿಸಿ ಹೇಳು

ಸಪ್ತ ವರ್ಣದ ಸೊಂಪು ಹೊತ್ತ
ಕಾಮನಬಿಲ್ಲು ಹಕ್ಕಿಯೆ ಹೇಳು
ಯಾವ ವರ್ಣ ಶಿಲ್ಪಿಯ
ಚತುರತೆಯ ಸ್ಪರ್ಶ ನಿನಗಾಯಿತು?

# ಅಕ್ಕಾ ನಾನೂ ನಿನ್ನಂತೆ !

ಅಕ್ಕಾ ನಾನೂ ನಿನ್ನಂತೆ
ಆಗಬೇಕೆಂದಿದ್ದೆ
ನಿನ್ನವನಿಗೇ ಒಲಿದು
ಸೆರಗು ಹಾಸಬೇಕೆಂದಿದ್ದೆ

ನಿನ್ನ ಪ್ರೀತಿಯ ಆಳ
ತಿಳಿದಿರಲಿಲ್ಲ ನನಗೆ
ತಿಳಿದದ್ದು ನಿರ್ವಾಣದಲಿ
ಹೊರಡಬೇಕೆನ್ನುವುದಷ್ಟೆ!

ನಿನ್ನ ಮಾತು ರೀತಿಗಳಿಗೆ
ಅರ್ಥ ಕೇಳಬೇಕೆಂದಿದ್ದೆ
ನನಗೆ ನೀ ಸಿಗಲಿಲ್ಲ
ನೀ ಬಿಟ್ಟ ಸುದ್ದಿಗಳ ಹೆಕ್ಕಿದೆ

ಎಂಥ ಅರಸುತನ ಭೋಗ
ಬೇಡವೆಂದರೂ ಬಂದು
ನಿನ್ನ ಸೆಳೆದೊಯ್ದು ರಾಜಯೋಗ
ತಂದುಕೊಂಡೆಯೇಕೆ ವಿಯೋಗ?

ಆಸೆ ಆಮಿಷಕಿಟ್ಟು ಅಂಕುಶ
ನಿಸ್ಸಂಗದಲಿ ಸಂಗ ಬಯಸಿ
ಮುಖವಿರದ ಸುಖವಿರದ
ಗೊರವನಂಗ ಸಂಗಕೆ ಹೊರಟೆಯೇಕೆ?
ನಾಡು ಕಾಡುಗಳಲ್ಲಿ ಅಲೆದ

ಗುಂಡಿಗೆಯ ಧೈರ್ಯಕ್ಕೆ
ನಿಲ್ಲದೆಲ್ಲಿಗೋ ಹೊರಟ ಪಯಣಕ್ಕೆ
ಬೆಚ್ಚಿ ಬಿದ್ದವಳು ನಾನಕ್ಕ

ಮನೆಯ ಕತ್ತಲಿಗೆ ಹೆದರಿ
ಹೌಹಾರಿದ ಈ ಜೀವಕ್ಕೆ
ಕತ್ತಲೆನ್ನದೆ ಬೆತ್ತಲೆನ್ನದೆ
ಅಲೆವ ಸಾಹಸ ಹೇಗೆ ತರಲಿ

ಒಡಲ ಹಸಿವಿಗೆ ಹೆದರುವ
ನಾನು ಪಾಳು ದೇಗುಲಕೆಂತು
ಒಲಿದು ನಿಲುವೆನು ಹೇಳು
ನಿಂದೆ ಸಂದೆಯ ಸಹಿಸಲಹುದೇನು?!

ನಿನ್ನ ಹೆಜ್ಜೆಯ ಜಾಡನು
ಹಿಡಿದು ನಡೆಯಲು ಹೊರಟು
ಮೊದಲ ಮುದ್ದಿಗೇ ಮುರಿದ
ಹಲ್ಲಿನಂತೆಯೆ ಸೋತವಳು ನಾನು

ನಾನು ನೀನಾಗಬೇಕೆಂಬ
ಹವಣಿಕೆಯಲ್ಲಿ ನೂರು ಕಸರತ್ತು
ಕೌಶಿಕನ ದಾರಿ ಕಾಯುವ ಹೊತ್ತು
ನಿನ್ನ ಅಂದ ಚೆಂದದ ಕಲ್ಪನೆಯಿತ್ತು

ಬರಲಿಲ್ಲ ಆದರೂ ರಾಜನೊಬ್ಬ
ಬಿಡುವ ನಾಟಕಕೆ ಗಂಡನ
ಪಾತ್ರವೇ ನನಗಿಲ್ಲ ಅಕ್ಕ
ಹೇಗೆ ಊಹಿಸಲಿ ಭವದ ದುಕ್ಕ (ದುಃಖ)
ಸುಲಭದಲಿ ಮಾಡಲಿಕೆ
ಬತ್ತಲಾಗುವುದೊಂದೇ ಸರಳ
ಸಂಬಂಧಗಳ ಹಂಗುಳಿದು

ಬದುಕಲಾಗುವುದಿಲ್ಲ ನನಗೆ
ನಿಂತ ನಿಲುವಿನಲಿ ಒಳನುಗ್ಗಿ
ಸೆರಗು ಜಾರಿಸುತ ನಿಂತೆ
ಸುತ್ತಿ ಬಳಸಿದ ದೇಹದ ಬಟ್ಟೆ

ಪೊರೆಗಳ ಕಳಚಿಟ್ಟೆ ಒಂದೊಂದೆ
ಹೊಸ್ತಿಲ ಹೊರಗೆ ಕಾಲಿಡುವ
ಮೊದಲೊಮ್ಮೆ ಕನ್ನಡಿಯ ಬಯಕೆ
ಸಂಭ್ರಮದ ಹೆಜ್ಜೆಯಲಿ ನಿಂತೆ ಮುಂದೆ
ಬೆತ್ತಲೆಯ ಬಿಂಬಕ್ಕೆ ಚೀರಿ ಕುಸಿದೆ

ಬೆತ್ತಲನ್ನು ಬೆತ್ತಲಾಗಿ
ಭಾವಿಸಿ ಭರಿಸಲಾಗದ ನನ್ನ
ಆತ್ಮದಾವರಣಗಳ ಕಳಚದೆ
ಹೋಗಲೆಂತೇ ಅಕ್ಕ ಬಯಲಿನೊಳಗೆ

ನಾನಂತು ನಿನ್ನಂತಾಗದೆ
ನಾನು ನಾನೂ ಆಗದೆ
ಏನೇನೋ ಆಗಲು ಹೊರಟು
ಕಡೆಗೆ ಕೆಂಬೂತವಾಗುಳಿದೆ

## ಹಕ್ಕು

ಹಕ್ಕಿಗೆ ಆಕಾಶವೇ ಸರಹದ್ದು
ಸ್ವಚ್ಛಂಧ ನಿರಾತಂಕ ಉಡ್ಡಯನ
ಸಿಹಿನೀರ ತೊರೆಯಲ್ಲಿ ಸ್ವೇಚ್ಛಾವಿಹಾರ
ಅಮೃತ ಫಲಗಳಾಮೋದ ಆಹಾರ

ಗಿರಿವನ ಕಣಿವೆಗಳ ದಾಟಿ
ಮೈಲಿ ಮೈಲಿಗಳ ದೂರವ ಮೀಟಿ
ಬಾನಂಗಳದ ಕೇಳಿ ನಿರತ ಹಕ್ಕಿಗೆ
ವಿಧಿಯೆಸೆದ ಮೊನಚು ಬಾಣದ ಸಂಘಾತ

ಮೇಲಿದ್ದೂ ಮೇಲಿರಲಾಗದೆ
ಭೂಮಿಯ ಮಡಿಲಿನ ಪ್ರೀತಿಗೆ ಬಿತ್ತು
ಬಿಳುಪು ಮಂಜಿನ ರೆಕ್ಕೆಯ ನಡುವೆ
ರಕ್ತಕುಸುಮವೊಂದರಳಿತ್ತು

ದೇವದತ್ತನ ಬೇಟೆಯ ತೀಟೆಗೆ
ಜೀವ ಸಾವುಗಳ ಸೆಣಸಾಟದಲಿ
ಚಡಪಡಿಸುತ ಒದ್ದಾಡಿತು ಹಕ್ಕಿ
ಮತ್ತಗೆಲುವಿನಲಿ ನಿಂತನು ಸೊಕ್ಕಿ

ಸದ್ದಿಲ್ಲದ ನೋವು ಚಾಚಿ ಸೆಳೆಯಿತು
ಮೃದುವೆದೆಯವನ ಭಾವವ ಬಾಚಿತು
ಮಿಂಚಿನೋಟದಲಿ ಹೆಜ್ಜೆಯು ಸಾರಿತು
ಹಕ್ಕಿವೇದನೆಗೆ ಮರುಕವು ಉಕ್ಕಿತು
ಮಾಂತ್ರಿಕ ಸ್ಪರ್ಶದಿ ಶರವ ಸೆಳೆದನು

ಪ್ರೀತಿ ಮುಲಾಮನು ಸವರಿದನು
ಮೂಕಜೀವದ ಕಣ್ಣಲಿ ಹೊಳೆಯಿತು
ಸಂತಸ ತುಂಬಿದ ಧನ್ಯತೆ ಕವಿತೆಯು

ನನ್ನ ಬಾಣದಲಿ ಬಿದ್ದ ಹಕ್ಕಿಯು
ಹಕ್ಕು ನನ್ನದು ಕೇಳು ಸೋದರ
ಮುಟ್ಟಿ ಒಯ್ಯದಿರು ಇದ ನೀನು
ಮೇಜವಾನಿಯಲಿ ರುಚಿ ನೋಡುವೆ ನಾನು

ಸಂಘರ್ಷಕೆ ನೀನೆಣಿಸಿ ಬಾರದಿರು
ಕೊಲೆಗೈದವ ನೀ ಒಲವೆರೆದವ ನಾ
ಕೇಳು ಹಕ್ಕಿಯನು ಹಕ್ಕು ಯಾರದು
ಬಳಿಗೆ ಸಾರಿದರೆ ನೀ ಒಯ್ಯುವುದಿದನು

ಜಾರಿಸಿ ಇಳಿಸಿದ ಹಕ್ಕಿಯನಿಳೆಗೆ
ದಿಕ್ಕು ತೋರದೊಲು ಹಕ್ಕಿ ನಿಂತಿತು ಗಳಿಗೆ
ನೋವ ಮರೆಯುತ ಹೆಜ್ಜೆ ಹಾಕಿತು
ಸಿದ್ಧಾರ್ಥನ ಮಡಿಲ ಸೇರುತ ಹಕ್ಕನು ತೋರಿತು

# ಬೆಸ್ಲಾನಿನ ತೋಟದಲಿ

ಮೊನ್ನೆಯಷ್ಟೆ ತೋಳಗಳ ಹಲ್ಲೆ
ಎದೆ ಝುಲ್ಲೆನಿಸುವ ಕಂಪನ
ಕೋವಿಗಳ ಆಸ್ಫೋಟ

ಮುಗ್ಧ ಮಂದಹಾಸ
ನಿರಾತಂಕ ಮನಸು
ಅರೆಬಿರಿದ ಎಳೆ ಪಕಳೆಗಳ
ಕುಣಿಸಿ ನಲಿಯುವ
ಕಾಮನ ಬಿಲ್ಲ ಹೂಗಳ ಮೇಳ
ಸ್ವಚ್ಛಂದದಲಿ
ರೆಕ್ಕೆ ಹಾಯಿಗಳ ಬಿಡಿಸಿ
ಹಾರುವ ಪಾತರಗಿತ್ತಿ ದಂಡು
ಹಾಲುಗೆನ್ನೆಯ ಮೃದು ಮಾಂಸ
ಕಣ್ಣರಳಿಸಿ ಕಚಗುಳಿಯ
ತೊದಲು ಮಾತಿನ
ಚಿನಕುರುಳಿ ಸಂಭ್ರಮ
ಶಬ್ದಾರ್ಥಗಳ ಹಂಗುಳಿದು
ಹಾಡುವ ಹಕ್ಕಿಗಳ ಸಂಗೀತ

ಕನಸು ಲೋಕದಲಿವರ
ಮೈಮರೆತ ವಿಹಂಗಮ
ವಿಹಾರ ಯಾನ ನಿರಾತಂಕ
ಆಸ್ಫೋಟದಬ್ಬರಕೆ
ಥಟ್ಟನಿಳೆಗೆ ಅಪ್ಪಳಿಸಿ
ತತ್ತರಿಸಿದವು ಹಕ್ಕಿಗಳು

ಫಡ ಫಡಿಸಿದವು ಚಿಟ್ಟೆಗಳು
ಉಡಿದು ಹೋದವು ಪಕಳೆಗಳು
ಬಣ್ಣ ಕಳೆದು ನುಗ್ಗಿತ್ತು
ಕೆನ್ನೆಗಳಲ್ಲಿ ರಕ್ತ ಕೆಂಪು
ಹಸಿದು ಹಾರಲು ನಿಂತ
ರಾಕ್ಷಸ ಕ್ರೌರ್ಯಕ್ಕೆ
ಸಿಡಿಹೊಡೆದ ಚೀತ್ಕಾರ
ಉಸಿರು ಕಟ್ಟಿಸಿ ಕೊಲುವ
ಸರಳು ಕೋಟೆಯ
ಬಂದಿವಾಸ

ಕಂಬನಿಗೆ ಕರಗಲಿಲ್ಲ
ವೇದನೆಗೆ ಮೃದುವಾಗಲಿಲ್ಲ
ಪುರುಷಾಮೃಗಗಳ
ಮೊನಚು ಹಲ್ಲಿನ ತೋಳಗಳ
ಗುರಿಗೆ ಪುಟ್ಟ ಎದೆಗಳು
ನಡುಗಿ ಒಮ್ಮೆಲೇ ಸ್ತಬ್ಧ
ರಕ್ತಚಿತ್ತಾರ ರಂಗವಲ್ಲಿ
ಬಣ್ಣಗಳು ಕಳೆದು ಕರಗಿ
ಬರಿ ಕೆಂಪು ಕೆಂಪು
ಹರಿದು ಮಂಜುಗಟ್ಟಿತು
ಬೆಸ್ಲಾನಿನ ತೋಟದ ಸೊಂಪು
ಮೌನ ಸಮಾಧಿಯಲಿ
ನಿಶ್ಚಲ... ನಿಶ್ಚಲ... ನಿಶ್ಚಲ
[ಒಂದು ದುರಂತ ಘಟನೆಯಾಧರಿಸಿ]

## ಪ್ರೀತಿ – ಮೌನ

ಇಟ್ಟಿಗೆ ಸಿಮೆಂಟು
ಸುಣ್ಣಗಳ ನಡುವೆ
ಅರಳಿತ್ತೊಂದು ಶಿಲಾಪುಷ್ಪ
ಆಗತಾನೇ ಮೂಡಿದ್ದ
ಚಿಗುರು ಮೀಸೆಯ
ಚೆಲುವು ಶೃಂಗಾರ
ಆದರವನ ಕಣ್ಣಲ್ಲಿ ಖಾರ
ಸಿಟ್ಟು ಸೆಡವಿನ ಠೇಂಕಾರ
ಅವ್ಯಕ್ತ ಅರಕೆ
ಸ್ಫೋಟಕ್ಕೆ ಅಣಿಗೊಂಡ ರೋಷ
ಉರಿವ ಕುಲುಮೆಗಳು
ನಡುವೆ ಎಲ್ಲೋ ಒಂದು
ತಣ್ಣನೆಯ ಜಲಧಾರೆ
ಕಂಡಕಂಡವರ ಮೇಲೆಲ್ಲ
ಕೆಂಡಕಾರುವ ತವಕ
ತುಟಿ ಬಿರಿದರೆ ಸಾಕು
ಕೇಡು ಸಿಡಿಸುವ ತವಕ
ಇಳಿಯದವನ
ಇನಿತಾದರೂ ಎದೆಯ ಭಾರ
ಸ್ವಾರ್ಥಲೋಕದ ವರ್ತುಲ
ಪ್ರವೇಶಕ್ಕೆ ನಿಷೇಧ
ನಿಷೇಧದ ಬೆನ್ನಲ್ಲೇ
ಬಂದಿಳಿದ ಹದಿ ಹರಯ
ಕಣ್ಣಲ್ಲಿ ತೊಟ್ಟಿಡುವ ಮರುಕ
ಇನ್ನೂ ಮೂಡದ ಮೀಸೆ

ಬಲವಿಲ್ಲದ ರೆಟ್ಟೆ
ಹೊರಲಾರದ ಹೊರೆಯ ಹೆಗಲು
ಕನಿಕರದ ಮಹಾಪೂರವೇ
ಅವನೆಡೆಗೆ ಹರಿದಿತ್ತು
ಬದಲಿ ಉದ್ಯೋಗ
ಕಾಂಕ್ರೀಟು ಕಟ್ಟಡದಲ್ಲೊಂದು
ಪುಟ್ಟ ಅಡಿಗೆ ಮನೆ
ಹೆಣ್ಣಷ್ಟೇ ಕೋಮಲ ಕರಗಳಿಗೆ
ರಸಪಾಕಗಳ ತೆಗೆವ ಹೊಣೆ

ಅಡಿಗೆ ಮನೆಗೂ ನುಗ್ಗಿತು
ಅಂದ ಚಂದದ ಬೀಸು ಗಾಳಿ
ಮೂಲೆಯೊಂದರಲಿ ಕುಳಿತ
ಹೂದಾನಿಯಲೊಂದು
ಚಂದದ ಹೂ ನಕ್ಕಿತು
ಪಿಸು ಮಾತಿನಲಿ
ಆಪ್ತ ಸಂವಾದ ಸಂಭ್ರಮ
ಅವನೊಳಗಿನ ಅವಳ
ನಿಗೂಢ ಚೆಲುವಿನೊಡನೆ
ಸಖ್ಯ ಸಲ್ಲಾಪ ಸಂಗೀತ
ಎಂದೂ ಇಲ್ಲದ ಅಡಿಗೆ ಮನೆಗೆ
ಹರಿದು ಬಂತು ಕಳೆಯ ಪೂರ
ರೊಟ್ಟಿಗೆ ರುಚಿ ಬಂತು
ಚಹಕ್ಕೆ ಘಮಲು ನಿಂತು
ಹೆಣ್ಣಿನ ಕೈಯ ಪರಿಮಳಕ್ಕೆ
ಮಾಂತ್ರಿಕ ಸವಿಯ ಸ್ಪರ್ಶಕ್ಕೆ
ವಾಹ್ ! ವಾಹ್ ! ತುತ್ತೂರಿ ಮೊಳಗು !!
ಯುವಕನೆದೆಯಲಿ
ಹೊತ್ತಿ ಉರಿಯಿತು ಕಿಡಿ
ಮೂಕ ವ್ಯಥೆಯಲಿ ಅಸ್ವಸ್ಥ
ಕನಸುಗಳ ಹಿಡಿವ ತವಕ

ಪ್ರತಿ ಸ್ಪಂದನದ ಚಂದನ ತಂಪು
ತಟ್ಟುವವರೆಗೆ ನಿಲ್ಲದು
ಎದೆಯಾಳದಲುರಿವ ಕಿಚ್ಚು
ಅಸ್ವಸ್ಥ ಆಸೆಗಳ
ಗಾಳಿಗುದುರೆಯೇರಿ
ರಾಜಕುಮಾರಿಯ ಹಿಡಿವ ಹಠ
ತಣ್ಣನೆಯ ಸಂಜೆಯಲಿ
ಮುರುಕು ಕಿಟಕಿಯ ಸರಳು
ಮುಚ್ಚಿದ ಗಾಜಿನ ತೆರೆ
ಅದರಾಚೆಯಲಿ ಯಾವುದೋ
ಛದ್ಮವೇಷದ ಅನಾವರಣ
ಹಿಮದೊಡಲು
ಬೆನ್ನಿಂದ ಇಳಿಬಿದ್ದ
ಕಾರಿರುಳ ಸರಮಾಲೆ
ಶ್ವೇತ ಸುಂದರಿಯ
ದಿವ್ಯ ಚೆಲುವಿನ ಝಲಕು
ಮತ್ತೇರಿದ ಅಮಲು
ಬಂಡೆಗಲ್ಲಿನೆದೆ ಕರಗಿ
ಹರಿಯಿತೊಂದು ಅವ್ಯಕ್ತ
ಪ್ರೀತಿಯ ಹೊನಲು
ಮೊಳೆತು ಚಿಗುರಿತು
ಮೂಕಭಾವದಲಿ ಭಾವಗೀತೆ
ಪ್ರಾಯದುನ್ಮತ್ತ ಗಂಧಗಾಳಿಯ ಸ್ಪರ್ಶ
ಕಚಗುಳಿಯ ಪುಲಕ
ಬಿಡದ ಚುಂಬಕ ಸೆಳವು
ಮಾತಿಲ್ಲ ಕತೆಯಿಲ್ಲ
ನೋಟ ಬೇಟಗಳಿಲ್ಲ
ಶೂನ್ಯದಾಗಸದಲ್ಲೊಮ್ಮೆ
ಫಳಕ್ಕನೆ ಮಿಂಚಿ
ಮರೆಯಾಗುವ ನಕ್ಷತ್ರ
ನೋಟದಚ್ಚರಿ

ಮೌನಭಾವಗೀತ
ನಿಲ್ಲದ ಭಾವ ಸ್ರೋತ
ಒಂದು ಕಂಬನಿಗೆ
ನೂರು ಕಂಬನಿ ಕಾಣಿಕೆ
ಒಂದು ನಿಟ್ಟುಸಿರಿಗೆ
ನೋವಿನ ಜ್ವಾಲಾಮುಖಿ
ಹಸಿವ ತಣಿಸಲು
ತವಕದೋಟ
ಘಾಸಿಗೊಂಡರೆ ಅಲ್ಲಿ
ಅವಳೆದೆಯಲ್ಲಿ ರಕ್ತ ಚಿಮ್ಮುವುದಿಲ್ಲಿ
ಅವಳ ತೋಟದಲಿ
ಹಕ್ಕಿ ಗರಿಗೆದರಿ ಹಾಡಿದರೆ
ಇಂಚರದ ಹಾಡು
ಮಾರ್ದನಿಸಿ ಮೊಳಗುವುದಿಲ್ಲಿ
ಇವನ ಮನದಲ್ಲಿ

ಎಂಥ ಮೋಡಿಯೋ ಈ ಪ್ರೀತಿಗೆ
ಇಹುದೆಂಥ ಶಕ್ತಿ ಇದರ ರೀತಿಗೆ
ಪ್ರೀತಿ ಸೇತುವೆಯಾಯ್ತು
ದಂಡೆಗಳು ದೂರವೇ ಉಳಿದವು
ಅವಳ ನೆನಪುಗಳಷ್ಟೆ
ಅವನ ಬದುಕು ಕಡಲಿನ ಕೂವೆ
ನಾಳೆಗಳು ಸರಿದಂತೆ
ಸರಿದು ಸಾಗುವುದು ಅವನ ನಾವೆ !!

[ಇರಾನಿ ಚಲನಚಿತ್ರ 'ಬರಾನ್'ನ ಸ್ಫೂರ್ತಿಯಿಂದ]

# ರಾಜಕುಮಾರಿ ಮತ್ತು ರಾಕ್ಷಸ

ಅಂತಃಪುರವಿದೆ
ಅನಂತ ಸುಖವಿದೆ
ಬಟ್ಟಬಯಲಿನ ಕೋಟೆ
ಬೆಳಕು ಪಹರೆ
ಎದೆಯ ಪೊದೆಯೊಳಗೆ
ಸರ್ಪಭೀತಿ
ಝುಗಝುಗಿಸಿ ಹೊತ್ತಿ
ಉರಿದರು ಬೆಂಕಿ
ಬೂದಿಯಾಗಿ ಗವ್ವೆನುವ
ಕತ್ತಲ ಕಬಂಧ ಬಂಧ
ತೀರದ ಹಸಿವಿನ ಬಸಿರು
ಮೈಲಿ ಮೈಲಿಗೂ
ಚಾಚುವ ಬಕಾಸುರ
ಬಯಕೆಗಳ ಬಂದೋ ಬಸ್ತಿಗೆ
ನೂರು ಸಾವಿರ ರೂಪ
ಪ್ರೀತಿಯ ಹಂಬಲ ಹಸ್ತಕ್ಕೆ
ಕಪಾಲ ಕರಂಡಕ
ಮೈಯೊಳಗೆ ಹೊಗರೆದ್ದ
ರಕ್ತ ಗಂಧ
ಒಂಟಿತನದಲ್ಲೆ ಗಿರಿಗಿಟ್ಟಲೆಯಾಟ
ದೂರದ ಹೆಜ್ಜೆ ಸದ್ದಿಗೆ
ನಿಂತನೆಲವೇ ಸಿಡಿವ
ಭೀತಿಯ ಗುದ್ದು
ಕರಿದೇಹದ ನೆರಳ
ಸರಳ ಇರಿತಕೆ
ಮೌನವಾಯಿತು ಕೋಗಿಲೆ

ಶೂನ್ಯ ಸಖ್ಯದಲಿ
ಕಾಡದ ಒಂಟಿತನವೀಗ
ಅವನ ಸನಿಹದ ವಾಸನೆಗೆ
ಕಂಪನದ ಕಡಲು
ಯಾತನೆಯ ಆತ್ಮ ಸಂಗಾತದಲಿ
ಸವೆದ ಬದುಕಿನಲಿದ್ದ
ಬಿಡುಗಡೆಯ ಕನಸಿಗೂ
ನಿರ್ಬಂಧ ಬಾಹು ಬಂಧ
ಗಾಳಿ ಸುಳಿಯುವುದಿಲ್ಲ
ಬೆಳಕು ಇಳಿಯುವುದಿಲ್ಲ
ಬೆಳ್ದಿಂಗಳು ಸುರಿವುದಿಲ್ಲ
ನಕ್ಷತ್ರ ಹಣತೆಗಳು
ಉರಿದು ಬೆಳಗುವುದಿಲ್ಲ
ಎದೆಯ ಪಂಜರದೊಳಗೆ
ಭಾವರಾಗದ ಹಕ್ಕಿಗಳು
ರೆಕ್ಕೆ ಬಿಚ್ಚುವುದಿಲ್ಲ
ಕೊರಳೆತ್ತಿ ಹಾಡಿ ಕಲರವಿಸುವುದಿಲ್ಲ
ಕತ್ತಲ ಮೌನವೇ ಆಳುವುದು ಇಲ್ಲಿ
ರಾಕ್ಷಸಧ್ವಜವೇ ಹಾರುವುದು ಇಲ್ಲಿ
ಬಂಧನವೇ ಬಿಡುಗಡೆ
ಬಿಡುಗಡೆಯೇ ಬಂಧನ
ರಾಜಕುಮಾರಿಯ
ಬಾಳಿನಲಿ ಪಿಸುದನಿಯಲಿ
ಉಲಿವುದೊಂದೇ ಕವನ
ಅದುವೆ ಯಾತನಾ ಚಿರಂತನ

# ಬಯಕೆ

ಹೊಸತು ಸವಿಯ
ಭವದ ಸಿಹಿಯ ಹಣ್ಣಿಗೆ
ಆಶಿಸಿದೆ ಈ ಜೀವ
ಬೆಸೆದು ಬೇರೆ
ಹೃದಯದೊಡನೆ
ಬೆರೆತು ಮರೆಯ
ಬೇಕಿದೆ ನೋವ

ಅಲೆದಲೆದು ದಣಿದ
ಹೆಜ್ಜೆಗಳಿಂದು
ಹೊಸತು ಹಾದಿಗಳ
ಶೋಧಕೆ ತವಕಿಸಿವೆ
ಹೆಜ್ಜೆ ಮೂಡದ ಹಾದಿಯೆಡೆ
ದುರ್ಬೀನ ಹಚ್ಚಿದೆ

ನೋಡಿದಂಥ ನೋಟ
ಮತ್ತೆ ನೋಡ ಬಯಸದು
ಮಾಡಿದಂಥ ಊಟ
ಮತ್ತೆ ಮಾಡೆ ರುಚಿಸದು
ಅಂತರಂಗದಲ್ಲಿ ಅರಕೆ
ಗುಡ್ಡ ಬೆಳೆದಿದೆ
ಸ್ಪಷ್ಟವಿರದ ತುಡಿತದಿಂದ
ಮನವದೇಕೋ ಬೇಸರಿಸಿದೆ
ಅದೇ ಮಾತು
ಅದೇ ಸರಸ

ಅದೇ ಸ್ನೇಹ ಪ್ರೀತಿ
ಅರ್ಥ ಸ್ವಾರ್ಥವಿಲ್ಲದಾ
ಶಬ್ದ ರಿಂಗಣ
ಮಾತು ಕೇಳುವವರಿಲ್ಲದ
ರಿಕ್ತ ಸಭಾಂಗಣ
ಹೃದಯ ಮರೆತು
ಚೆಲ್ಲುವಂಥ
ಹಳಸುಮಂದಹಾಸ
ಬೇಡ ಬೇಡ
ಜೀವವೇ ಸಾಕು ಎನಿಸಿದೆ

ಲೋಕಾಲೋಕದ
ಆಚೆಯ ಲೋಕಕೆ
ತೇಲಿಹೋಗಲು ಬಯಸುತಿದೆ
ಅಚ್ಚ ಪ್ರೀತಿಯ
ಸ್ವಚ್ಛಮಾನಸಕೆ
ಮಮತೆಯ
ಜಲಕೇಳೀ ಮೋದಕೆ
ಮೋಹನ ಮುರಳಿಯ
ನಾದೋನ್ಮಾದಕೆ
ಕೃಷ್ಣಾಧರ ಸವಿ ಸ್ಪರ್ಶಕ್ಕೆ
ಕುಣಿಯಲು ಹೆಜ್ಜೆ
ನುಡಿಯಲು ಗೆಜ್ಜೆ
ಅಣಿಯಾಗಲು
ಹಾತೊರೆದಿದೆ ನವ ರಾಸಕ್ಕೆ
ಕನಸಿದೆ ಮನಸು
ಗರಿಬಿಚ್ಚಿದೆ ವಯಸು

## ಅಂತರ

ನಿನಗೂ ನನಗೂ
ಅಂತರವೆಲ್ಲಿದೆ
ಹೇಳಲು ಬರುವೆಯ
ಹೇ ದೇವ
ಮಂಟಪ ಗುಡಿಗಳು
ಇದ್ದರೆ ಒಳಗೆ
ಆರತಿ ಪೂಜೆ ಅಭಿಷೇಕ
ಮಂತ್ರ ಪಠನಗಳು
ಸ್ತೋತ್ರ ಗೀತೆಗಳು
ತಪ್ಪುವುದಿಲ್ಲ ನೈವೇದ್ಯ
ಅಬ್ಬರದರ್ಚನೆ
ಭಕ್ತರ ಭಜನೆ
ಭಕ್ತಿ ಭಯಗಳ ಸರಮಾಲೆ!

ಗುಡಿ ಗೋಪುರಗಳ
ಹೊರಗುಳಿದೆಲ್ಲೋ
ಬಿದ್ದಿರಲಲ್ಲಿ ಹಾದಿಯಲಿ
ನಡೆಗಲ್ಲಾಗುತ
ನಮ್ಮಯ ಪಾದವ
ಚುಂಬಿಸಿ ಮೋಕ್ಷವ
ಪಡೆಯುವುದಷ್ಟೆ ನಿನಗೆ ವರ !!
ನನಗೂ ನನ್ನಯ
ಮನೆಯೇ ಗುಡಿಯು
ಒಳಗುಳಿದರೆ ಗೌರವ ಸನ್ಮಾನ
ಬೀಗುತ ಬಾಗಿಲ

ತೆರೆದಾಚೆ ಹೆಜ್ಜೆಯನಿಡಲು
ನನಗೂ ನಿನ್ನದೆ ಹಣೆ ಬರಹ
ಮಣಿತ ಭಣಿತಗಳ
ಭರಿಸುತ ಮೌನದಿ
ಸಾಗುವುದೊಂದೇ ಮಹಾವರ!!

# ಒಂದು ಸಂವಾದ

(ಪುಂಡರೀಕನ ಸಾವಿನ ನಂತರ ಮಹಾಶ್ವೇತೆ, ತರಳಿಕೆಯರ ನಡುವೆ ನಡೆದ ಸಂವಾದ)

ತರಳಿಕೆ: ಚಿತೆಯೇಕೆ ಹೇಳು ಸಖಿ
ಒಳಗೊಂದು ಚಿತೆಯಿರಲು?
ಬದುಕಿ ಉಳಿದರೆ ತಾನೆ
ಬರುವ ಕನಸಿಗೆ ಅರ್ಥ
ಪ್ರೀತಿಯಿರುವಲ್ಲಿ
ವಿರಹವದು ಅನಿವಾರ್ಯ
ದಿವ್ಯ ಪ್ರೇಮಕೆ
ನೂರು ದಿವ್ಯಗಳುಂಟು
ಪ್ರೀತಿಯನುಭೂತಿ
ಕಲಿತವನು ನಿನ್ನಿಂದ
ದೂರವಿಹನೇ!
ಮಿಲನ ಪೂರ್ವದ ವಿರಹ
ಕರಗಿ ಮಿಲನ ಗಳಿಗೆಯಲಿ
ವಿಧಿಯಿಟ್ಟ ವಿರಹವು
ನಿತ್ಯ ಮಿಲನದ ಸುಖಕೆ ನಾಂದಿ

ಮಹಾಶ್ವೇತೆ: ಎಂಥ ಮಿಲನವೋ ಏನೊ
ಪಂಚಾಗ್ನಿ ಚಿತೆಯುರಿದು
ಬದುಕು ಬೂದಿಯಾಗಿರೆ
ಮತ್ತೇಕೆ ನಂಬಿಕೆಯ ಬಿತ್ತಿ
ಕಾಡುತಿಹೆ ಸಖಿಯೆ
ಕ್ಷಣವೊಂದು ಯುಗವಾಗಿ
ಯುಗವೆ ಕಲ್ಪಗಳಾಗಿ

ಶರಮಂಚತಲ್ಪದಲಿ
ನಲುಗುತಿಹೆ ನೋವಿನಲಿ
ನನ್ನ ವಿರಹದ ಹಾವು
ಅವನಿಗಾಯಿತು ಸಾವು
ನಾನೆಂತು ಹರಣವನು
ಉಳಿಸಿಕೊಳಲೇ?
ಅವನ ಕೊಂಡೊಯ್ದ
ಕಾಲನ ಕ್ರೂರ ರಾತ್ರಿಗಳನ್ನು
ಭರಿಸಿ ಬಾಳಲು ಸುಖವೇ?
ತಡೆಯದಿರು ಮರಣವನು
ಉಳಿಸದಿರು ಶೂನ್ಯವನು
ಅಣಿಗೊಳಿಸು ಅಗ್ನಿರಥ
ಸೇರಬೇಕಿದೆ ನನಗೆ
ಅವ ಹೊರಟ
ವೈತರಣಿಯ ದಂಡೆಯಾಚೆ ಪಥ

## ಬಾಳ ಋತುಗಳು

ಬಾಳ ಋತುಗಳಿಗೆ
ಕ್ರಮವಿಲ್ಲ; ನಿಯಮವೂ ಇಲ್ಲ
ಮಳೆಗಾಲ ಚಳಿಗಾಲ
ಮಾಗಿ ಬೇಸಿಗೆ ಕಾಲ
ಮರ ಮರಳಿ ಆವರ್ತನದಲಿ
ಬಂದು ತಟ್ಟುವುದೆನ್ನ
ಎದೆಯ ಕದವ
ಎಂದೂ ಬಾರದ ವಸಂತ
ಮೋದಕ್ಕೆ ಹಾತೊರೆವ
ಜೀವಕ್ಕೆ ದಣಿವು ಬಹುಮಾನ

ಸದಾ ಜಿಟಿ ಜಿಟಿ ಮಳೆಯ
ವಟವಟಿಸುವಾಟ
ಕೆಸರು ಕೆಸರು ಕಡಲು
ಭೂಮಿಯಾಕಾಶಗಳ
ಎದೆನಡುಗಿಸುವ
ಗುಡುಗು ಸಿಡಿಲಿನ
ಅಬ್ಬರ ಉಬ್ಬರ
ತಪ್ಪಿದರೆ ಬರಲೊಪ್ಪಿನಿಂತ
ಹಿಮಗಾಲ ಚಳಿಗಾಲ
ಬಿಸಿನೆತ್ತರೂ ಹೆಪ್ಪುಗಟ್ಟಿ
ಭಾವದಂಕುರಗಳೆಲ್ಲ
ಅರಳದೆಯೇ ಶೀತಲ ಸಮಾಧಿ
ಮೈಮನಗಳ ತುಂಬೆಲ್ಲ
ಮುಳ್ಳುಕಂಟಿಯ ಮೊನಚು

ಇರಿತದಲಿ ಯಾತನಾ ಶಿಬಿರ
ನಳನಳಿಸಿ ನಗುವ ಹೂ
ಪಕಳೆಗಳು ಸಂಕೋಚದಲಿ
ಬಿಗಿದು ಕೊಂಡು
ಮೌನಲಯದಲಿ ವಿಲೀನ
ಬೇಸಿಗೆಯ ಬಿರುಬಿಸಿಲ
ಕೆಂಡ ಸುರಿ ಮಳೆಯಲ್ಲಿ
ಬಯಕೆ ವನವೆಲ್ಲ ಬೂದಿ ಭಂಡಾರ
ತತ್ತರಿಸುವ ಜೀವಕ್ಕೆ
ಪಂಚಾಗ್ನಿ ತಪದನುಭೂತಿ
ಹಸಿರ ಉಸಿರುರಿದು
ಚಿತಾಭಸ್ಮದ ಕುಂಭಮೇಳ
ಹೃದಯಗಳ ಅರಳಿಸುವ
ಕಾಮ ಪ್ರೇಮದ ಕಚಗುಳಿಯ
ಮೋಹ ಹೊತ್ತು ಬರುವ
ವಸಂತನ ಕನಸೂ ಪೂರ್ಣಾಹುತಿ

ನನ್ನ ಬಾಳ ಋತುಗಳಲ್ಲಿ
ಮೋದವಿಲ್ಲ ಆಮೋದವಿಲ್ಲ
ನೋವಿದೆ ನಿಟ್ಟುಸಿರಿದೆ
ಭಗ್ನ ಕನಸುಗಳ
ನಿರಂತರ ಆವರ್ತನೆಯಿದೆ
ಬತ್ತಿದ ಭಾವರಾಗಗಳ
ಗೋರಿ ಸಾಲಿದೆ
ಸದಾ ಹೆದೆಯಾಡಿಸುವ
ಸಾವಿನ ನೆರಳ
ತಂಪಿದೆ; ಸೊಂಪಿದೆ!!

## ಒಣ ಮರಗಳ ಜೊತೆಯಲ್ಲಿ

ಒಣಮರಗಳ ಜೊತೆಯಲ್ಲಿ
ಹಾದಿಯಿಕ್ಕೆಲದಲ್ಲಿ ನಿಂತ
ಒಣ ಮರದ ಸಾಲು
ಹಾದು ಬರುವಾಗೆಲ್ಲ
ಕಣ್ ಸನ್ನೆಯಲಿ
ಕರೆಯುತ್ತವೆ
ಮುರುಟಿದ ಕೈಗಳ ಚಾಚಿ
ಅಪ್ಪಿಕೋ ಎನ್ನುತ್ತದೆ
ಮತ್ತೆ ಮತ್ತೆ ಕರೆದ ಕೂಗು
ನನ್ನೊಳಗಿಳಿದು
ಆಲಿಸಿದೆ –
'ಎಂಥ ಸುಂದರ ಬದುಕು
ರಸವೊಸರುವೊಡಲ ಸೊಂಪು
ಮುಡಿದ ಹೂ ಮಂಜರಿಗಳ ಕಂಪು
ನಿತ್ಯ ಹರಿದ್ವರ್ಣದ ಸಿರಿ
ಮುತ್ತೈದೆಯ ಮಂಗಳ ರೂಪ
ಮುಗಿಲೆಡೆಗೆ ಕೈಚಾಚಿ
ಕರೆದರೆ ಸಾಕು
ಆಕಾಶರಾಯನ ಕೃಪೆಯ ಸಿಂಚನ
ರನ್ನ ಚೆಂಡುಗಳಂತೆ
ತೊನೆವ ಫಲಭಾರ
ನೆರಳ ಕೊಡೆಯಡಿಯಲ್ಲಿ
ಮೈಮರೆತು ಜೊಂಪಿನಲ್ಲಿ
ಚಾಚಿ ಮಲಗಿದ ದೇಹ
ಗಿಳಿಕೋಗಿಲೆ ಕಾಜಾಣ

ಮರಿಹಕ್ಕಿಗಳ ಬೆಚ್ಚನೆಯ
ಸಂಸಾರದ ಸವಿಯೌತಣ
ಗಾಳಿ ಸಖನ ಸ್ಪರ್ಶ
ಪುಲಕಗಳ ವರ್ಷ
ಬೇಸಿಗೆಯ ಧಗೆಯಳಿಸಿ
ಧರೆಗಿಳಿದ ಭಗೀರಥಿ
ಕೆಸರಳಿದು ಹಸಿರುಳಿದು
ಬೆಂಕಿ ಬಿಸಿಲನು ಕಳೆದು
ಚೈತ್ರಾಗಮನ ಸಂಭ್ರಮಕೆ
ಮುದಗೊಳುತಿದ್ದ
ಮನದಲ್ಲಿ
ಹೆಪ್ಪುಗಟ್ಟಿದೆ ಮೌನ
ಹಿಂಸೆ ಯಾತನೆಗಳ
ಮುಗಿಯದ ಧ್ಯಾನ

ಒಡಲ ಕಸುವಳಿದು
ಚೈತ್ರಬಾರದೆ ಮುನಿದು
ನಗ್ನ ಭಾವಗಳಷ್ಟೆ
ನಮ್ಮೆದೆಯ ಕೋಶದಲಿ ಭದ್ರ
ಹೂ ಕಳೆದುಹಸಿರಳಿದು
ವೈಧವ್ಯ ಚಿತೆಯಾಗ್ನಿಯಲಿ
ಕನಸುಗಳು ಭಗ್ನ
ನಿರ್ವಾಣದಲಿ ನಿಂತು
ನೆನ್ನೆ ನೆನಪುಗಳ ಪೋಣಿಸುತ
ನಾಳೆ ನಿರೀಕ್ಷೆಯಲಿ ನಿಂತು
ನರಳುವ ವಿಧಿಯು ಬೇಡ
ಕಡಿದುಬಿಡು ಒಮ್ಮೆಲೇ
ಸಾವಿನಲಿ ಸಾರ್ಥಕ್ಯ
ಬಿಡುಗಡೆಯ ಸಂಭ್ರಮವು
ನಮದಾಗಲಿ
ಎಚ್ಚೆತ್ತ ಮನದಲ್ಲಿ
ಚೀತ್ಕಾರದನುರಣನ!

## ಕೆ.ಎಸ್.ನ. – ಅವರ ನೆನಪಿಗೆ

ಪ್ರೀತಿ ದೇವರ ಪೀಠದಲಿರಿಸಿ
ನಡೆವ ಮಲ್ಲಿಗೆ ತೇರು ನೀನು ಕವಿಯೆ
ಮುಗಿಲ ತುಂಬೆಲ್ಲ ಕನಸು ಗೊಂಚಲನಿರಿಸಿ
ಬಲವಾಗಿ ಭೂಮಿಯಲಿ ಬೇರಿಳಿಸಿದವ

ನವಿಲೂರು ಹೊನ್ನೂರುಗಳ ಬೆಸೆವ
ಒಲುಮೆ ಬಳ್ಳಿಯ ತಬ್ಬಿ ಸೆಳೆದು
ದಾಂಪತ್ಯ ಘಮಲುಗಳ ಹಂಚಿಕೊಟ್ಟೆ
ಎಂದೂ ಬಾಡದ ಮೊಲ್ಲೆ ಕಂಪನು ಎಮಗೆ ಬಿಟ್ಟೆ

ನೀನೊಂದು ದಿವ್ಯ ಚಂದನ ಮರ
ಬಳಿ ಸುಳಿದು ಹಾದು ಹೋದರಷ್ಟೇ ಸಾಕು
ಮೈಯೆಲ್ಲ ಮತ್ತೇರಿಸುವ ಕಂಪಿನನುಭೂತಿ
ಗಂಧಗಾಳಿಯ ಸುಖ ಸ್ಪರ್ಶದ ರೋಮಾಂಚನ

ಬುವಿಬಾನು ಚಿಕ್ಕೆ ಚಂದ್ರರ ಸಖ್ಯದಲಿ
ಗರಿಗಟ್ಟಿ ನೂರೆಂಟು ಕವಿತೆಗಳ ಹಾಡಿದವನು
ಭೂಮಿಯಕ್ಕರೆ ಮಡಿಲ ಸಕ್ಕರೆ ಸವಿಯುಂಡು
ಮುಗಿಲ ಹಂಗನು ಮರೆತು ನಲಿದಾಡಿದವನು

ಮಡದಿ ಕೆನ್ನೆಯ ಸೊಂಪಿನ ಕೆಂಪು
ಮುಡಿದ ಮಲ್ಲಿಗೆಯ ಜೊಂಪಿನ ಕಂಪು
ಎಷ್ಟೊಂದು ಕವಿತೆಗಳನರಳಿಸಿದವು
ರಸಿಕತೆಯ ಹೊನಲುಗಳನುಕ್ಕಿಸಿದವು

ಮನೆಯ ಮುಂಗಟ್ಟಿನಾಗಸದಿಂದ
ನಗುವ ಚಂದ್ರನನು ಇಳಿಬಿಟ್ಟು
ಕತ್ತಲಿದ್ದಲ್ಲೆಲ್ಲ ನಕ್ಷತ್ರ ಹಣತೆಗಳ ಹಚ್ಚಿಟ್ಟು
ಕನಸು ಭರವಸೆಯಲ್ಲಿ ಜೋಕಾಲಿಯಾಡಿದೆ

ಹಗಲು ಸಂಜೆಗಳಲ್ಲಿ ಇರುಳ ನೀರವ
ಮೌನಗಳಲ್ಲಿ ಹಾಡು ಕಟ್ಟುತ ಹಾಡಿ
ಇನಿದನಿಯ ಕಂಪನ್ನು ಜಗಕುಣಿಸಿದವನು
ಅಗ್ನಿರಸದಲ್ಲೂ ಶಾಂತವಾಗಿಯೇ ತೇಲುತ್ತಿದ್ದವನು

ಮಡದಿ ಮಕ್ಕಳು ಗೆಳೆಯರಾಲೋಕದಲಿ
ಪ್ರೀತಿ ಸೂರ್ಯರ ಬೆಳಕು ಹೀರಿದವನು
ಬಡತನದ ಕೆಂಡಕಡಲಿನುಬ್ಬರದಲ್ಲೂ
ಸುಖದ ಹುಟ್ಟನು ಹಾಕಿ ದಡವ ಮುಟ್ಟಿದವನು

ನಾಳೆ ನಾಳೆಗಳ ಚಿಂತೆ ಹೊಸ್ತಿಲಾಚೆಯಲಿರಿಸಿ
ಇಂದು ಈ ಕ್ಷಣದ ಬದುಕೆ ಧನ್ಯವೆಂದರಿತವನು
ನನ್ನದೆಂದೆನುತ ದಾರಿಗೆಷ್ಟೋ ಅಷ್ಟು ಮಾತ್ರವೆ
ಬುತ್ತಿ ಕಟ್ಟುತಲಿರಿಸಿ ಪಯಣಕ್ಕೆ ಹೆಜ್ಜೆ ಅಣಿಗೊಳಿಸಿದವನು

ಬದುಕಿನಾಚೆಯ ಬಯಲು ಮರೆತು
ನೋವು ನಲಿವುಗಳನ್ನು ಹಂಚಿಕೊಳ್ಳಲು
ಗೆಳೆಯರಾಹ್ವಾನಿಸುತ ನೆನಪುಗಳ ಬಿಚ್ಚಿರಿಸಿ
ಉಜ್ಜುಜ್ಜಿ ಹೊಸದಾಗಿ ಬೆಳಗಿ ಹೊಳೆಸಿದವನು

ಅವನ ಆಶೀರ್ವಾದ ನನ್ನ ಮೇಲಿರಲೇಕೆ
ಭೀತಿ ಕಾಡುವುದೆಂದು ಎದೆ ತಟ್ಟಿ ನಿಂತವನು
ಮಿತ್ತು ಕತ್ತಲು ಕವಿದು ಬೇತಾಳನಾಗಿರಲು
ಭರವಸೆಯ ನಕ್ಷತ್ರದೀಪಗಳನುರಿಸಿದವನು

ಹರೆಯದುಕ್ಕುಸೊಕ್ಕುಗಳುರುಳಿ
ಏರುತಗ್ಗುಗಳಿಳಿದು ಸಮತಲದಿ
ಹರಿವ ಜೀವದ ಹೊನಲ ಕಣ್ಣಲ್ಲಿ
ಕಂಡದ್ದೆಲ್ಲ ದೇವರಾಗಿ ತೃಪ್ತಿ ನಗೆ ನಕ್ಕವನು

ಶಬ್ದದಬ್ಬರವಳಿದು ನಿಶ್ಶಬ್ದ ನಿಶ್ಶಬ್ದ
ಶಬ್ದಾತೀತ ಇಂಪು ಕಂಪೆಲ್ಲೆಲ್ಲೂ
ಬೆಳ್ದಿಂಗಳ ಸೋನೆ ಮಳೆ ರಾತ್ರಿಯಲಿ
ನಿಂತ ದೇವಕನ್ನೆಯ ತಬ್ಬಿ ಕರಗಿ ಹೋದೆ

ಶಾಂತವಾಯಿತು ಬಾನು ಶಾಂತವಾಯಿತು ಕಡಲು
ಮನೆಯ ಮುಂದಿನ ತುಳಸಿ ನಿನ್ನೊಲವ ಶಾರದೆ
ನಿನ್ನೆದೆಯ ಪದಕವಾದ ತುಂಗಭದ್ರೆಯರ
ಹಿಂದುಳಿಸಿ ನೀನೊಬ್ಬನೇ ಮಲ್ಲಿಗೆಯ ಪಲ್ಲಕಿ ಏರಿಬಿಟ್ಟೆ

ನೀಕೊಟ್ಟ ಕವಿತೆ ಕುಸುಮಗಳ ಕಂಪು ಹೀರುತ್ತ
ತೆರೆದ ಬಾಗಿಲ ಹೊಕ್ಕು ಅದ್ಭುತಗಳು ತುಂಬಿಕೊಂಡು
ನೀ ಹಚ್ಚಿಟ್ಟ ದೀಪ ಸಾಲಿನ ಬೆಳಕಲ್ಲಿ ಅಡ್ಡಾಡಿ
ನಕ್ಷತ್ರಗಳ ಎದೆ ತುಂಬಿಕೊಂಡು ಮೌನದಲಿ ಕನವರಿಸುತ್ತೇವೆ

# ಅಕ್ಟೋಬರ್ ೨ ಮುಗಿದಾಗ

ಮಹಾತ್ಮ ನೆನ್ನೆ ತಾನೇ ನಿನ್ನ
ನೆನಪು ಅರಳಿ ಮೈಮೂಡಿ ನಿಂತೆ
ನಿನ್ನ ಕಂಡವಳಲ್ಲ
ನಿನ್ನ ದನಿ ಕೇಳಿದವಳೇ ಅಲ್ಲ
ನಿನ್ನ ಜನ್ಮದಿನವಲ್ಲದೆ
ನೀನೇಕೆ ನೆನಪಾಗುವುದೇ ಇಲ್ಲ

ನನಗೆ ಗೊತ್ತಿರುವ ಗಾಂಧಿಗಳಲ್ಲಿ
ನಿನ್ನನ್ನು ಹುಡುಕುತ್ತಿದ್ದೇನೆ
ಕಂಡರೆ ನೀನೊಮ್ಮೆ ನಿನ್ನೊಂದಿಗೆ
ಮಾತಾಡಬೇಕೆಂದಿದ್ದೇನೆ
ಮಹಾತ್ಮನಾಗಿಯೂ ನಿನ್ನನ್ನು
ಕೊಂದದ್ದೇಕೆಂದು
ಇನ್ನೂ ನನಗೆ ಅರ್ಥವಾಗಿಲ್ಲ
ಒಂದು ಕೈಯಿಂದ ಕೊಡಿಸಿ
ಮತ್ತೊಂದು ಕೈಯಿಂದ
ಸೀಳಿ ಕಸಿದುಕೊಂಡೆ ಎನ್ನುತ್ತಾರೆ
ನನಗೂ ಒಮ್ಮೊಮ್ಮೆ
ಅದು ನಿಜವೇ ಎನಿಸುತ್ತದೆ

ರಕ್ತಕ್ಕೆ ರಕ್ತ ಹಿಂಸೆಗೆ ಹಿಂಸೆ
ಎಂದವರನ್ನು ದೇಶದ್ರೋಹಿಗಳೆಂದೆ
ನಿನ್ನಷ್ಟೇ ದೇಶಪ್ರೇಮದ
ದಳ್ಳುರಿಯ ತಣಿಸಲು
ಜೀವದ ಹಂಗುಳಿದು

ಬಿಸಿನೆತ್ತರು ಚೆಲ್ಲಿ ಚೆಲ್ಲಾಡಿದ
ಮಡಿದ ಮಂದಿಯು ನಿನಗೆ
ದೊಡ್ಡವರೆಂದೇಕೆನಿಸಲಿಲ್ಲ?
ಒಂದೊಂದು ಹಣತೆಯ
ಜ್ವಾಲೆಗಳನೆಲ್ಲ ಒಗ್ಗೂಡಿಸಿ
ಅಖಂಡವಾಗಿ ಉರಿಸಿ
ಆಕ್ರಮಣಕಾರರೆದೆಗೆಡಿಸಿದವನು
ಹಿಂದು ಮುಸ್ಲಿಂ ಸಿಕ್ಖ್ ಇಸಾಯಿ
ಎಲ್ಲರೊಂದೇ ಎಂದು ಹಾಡಿದವನು
ಒಂದಾದ ದೇಶವನು ಒಡೆದು
ಅವರಿಗೊಂದು ಇವರಿಗೊಂದೆಂದು
ರೊಟ್ಟಿಯಂತೆ ಹಂಚಿಕೊಟ್ಟು
ಕೋಮು ಕಿಡಿಗಳ ಉರಿಸಿರಿಸಿ
ದ್ವೇಷಕ್ಕೆ ಬಲಿಯಾದೆಯೇಕೆ!

ಅಂದು ಬೇಕಾದವನು
ಇಂದು ನೀನಾರೆಂದು
ಇತಿಹಾಸ ಪುಟಗಳ ಸಂದು ಗೊಂದುಗಳಲ್ಲಿ
ಕಳೆದು ಕಾಣದಾಗಿರುವಾಗ
ದುರ್ಬಿನು ಕಣ್ಣುಗಳಿಂದ
ನಿನ್ನ ಪತ್ತೆಗೆಂದು ಪರದಾಡುತ್ತಿದ್ದೇನೆ
ಮುಂದಿನ ಅಕ್ಟೋಬರ್ ಒಳಗಾದರೂ
ಸಿಗಬಹುದೆಂಬ ಭರವಸೆಯಿದೆ

ಮತ್ತೆ ಪತ್ತೆಯಾಗಿ ಬಂದು ನಿಂತಾಗ
ಬಿಡದೆ ನೂರಾರು ಪ್ರಶ್ನೆಗಳ ಕೇಳುತ್ತೇನೆ
ಗಾಂಧಿ ನನ್ನಪರಾಧಂಗಳ ಕ್ಷಮಿಸಿ
ಉತ್ತರಗಳ ಹೊತ್ತು ಸಿದ್ಧವಾಗಿ ಬಾ
ಜನತಾ ನ್ಯಾಯಾಲಯದ ಮುಂದೆ
ನಿನ್ನ ಸಮಜಾಯಿಷಿ ಬೇಕಾಗಿದೆ!

## ಗುಲಾಬಿ ಮತ್ತು ಗುಬ್ಬಚ್ಚಿ

ಇತ್ತೊಂದು ಶ್ವೇತ ಗುಲಾಬಿ
ಹಿಮದ ಬಿಳುಪೂ ನಾಚುವಂತೆ
ಸುತ್ತಮುಳ್ಳಿನ ನಡುವೆ
ಮೃದುವಾಗಿ ಚೆಲುವಾಗಿ
ನಳನಳಿಸಿ ನಿಂತು
ನೋಡಿದ ಕಣ್ಣುಗಳಲ್ಲಿ
ಅಚ್ಚರಿಗಳ ಕೆರಳಿಸಿತ್ತು

ನೀಲಾಕಾಶದಲ್ಲಿ ಹಾರುತ್ತಿದ್ದ
ಗಂಡು ಗುಬ್ಬಚ್ಚಿಯೊಂದು
ಗುಲಾಬಿಯ ಚೆಲುವ
ಕಂಡದ್ದೇ ಮಂತ್ರಮುಗ್ಧವಾಗಿ
ಮೋಹಾತಿರೇಕದಲಿ ಕೇಳಿತು
"ಓ ಗುಲಾಬಿಯೇ ನನ್ನ
ಪ್ರೀತಿಸಲಾರೆಯಾ? – ಎಂದು
ಗುಲಾಬಿಗೂ ಗುಬ್ಬಿಯೆದೆಯ
ಪ್ರೀತಿ ಬೇಕು ಬೇಕೆನಿಸಿತ್ತು
ಆದರೂ ಕವಾಯಿತಿನ
ಮುಳ್ಳುಕಾವಲು ಕಠೋರ
ದಾಟಿ ತುಟಿಯೊಡೆಯಲಾಗದ
ಅಸಹಾಯಕತೆಯಲ್ಲಿ ಹೇಳಿತು –
ವೇದನೆಯ ವೇದಿಯಲಿ
"ನನ್ನೊಡಲೆಲ್ಲ ಕೆಂಪಾದಾಗ
ನಾನೊಲಿದು ಬರುವೆ ನಿನ್ನೆಡೆಗೆ!"
ಕಾದು ಕಾದು ಕನಲಿದ

ಗುಬ್ಬಿ ಗುಲಾಬಿ ಕೆಂಪಾಗಲಿಲ್ಲವೇಕೆ
ಎಂದು ಯೋಚಿಸಿ ಯೋಚಿಸಿ
ಕೆಂಪಾಗಿಸಲು ಹಾತೊರೆದು
ಮುಳ್ಳು ಪೊದೆಗಳ ಮೇಲೆ
ಹೊರಳಿ ಚಡಪಡಿಸಿ
ರೆಕ್ಕೆ ಹರಿದು ರಕ್ತ ಜಿನುಗಿಸಿ
ಗುಲಾಬಿಯು ಕೆಂಪಾಗುವ
ಗಳಿಗೆ ಬಂದೇ ಬಂತೆಂಬ ಹಿಗ್ಗಿನಲಿ
ಹಾರ ಬಯಸುವ ಮೊದಲೆ
ಕೆಂಪೆಲ್ಲ ಸೋರಿ ಜೀವಹಾರಿ
ಗುಬ್ಬಿಯ ಬದುಕು ಬಯಲಾಯಿತು
ಗುಲಾಬಿಯೂ ಎದೆಯೊಡೆದು
ಮಣ್ಣು ಗೂಡಿತ್ತು

## ಉತ್ತರವಿಲ್ಲದ ಪ್ರಶ್ನೆ

ಕಾದು ಕಾದು ಹರಿಸಿದ
ಕಂಬನಿಯ ಕಡಲಲ್ಲಿ
ಮುಳುಗಿ ಸಾಯಲು
ನಿಂತ ಗುಡಿಯಾಳ
ಮುಂದೆ ಮೊಳೆತ
ಕೈಯಾಸರೆ ಕಿರಣ ಬೆಳಕಿನಲಿ
ದಡ ಮುಟ್ಟಿದವಳ
ಎದೆ ತುಂಬ
ಸಂಭ್ರಮೋಲ್ಲಾಸಗಳ
ರಿಂಗಣ ಕುಣಿತ
ಕಾಡಿಗೆಯ ಕಾರಿರುಳು
ಮುಗಿದು ಚೆಲ್ಲಿತ್ತು
ಬೆಳಕು ಬಿಸಿಲು
ನೀಲಾಗಸದ ಬಳ್ಳಿಯೊಡಲಲ್ಲಿ
ಕಾಮನಬಿಲ್ಲ ಗೊಂಚಲು!
ಬಾಳಿನಂಗಳದಲ್ಲಿ
ಒಡನಾಡಲೊಂದು ಜೀವ
ಬೊಂಬೆಯ ಬರವಕಾಯುತ್ತ
ಜೀವ ಸ್ಪಂದನದ
ಪಿಸುದನಿಯ ಮೋಜಿಗೆ
ಸಂತಸವರಳಿ ನಿಂತಾಗ
ಎಲ್ಲಿಂದಲೋ ಬಂದ
ಸಿಡಿ ಭೈರವ ಹದ್ದೊಂದು
ಎರಗಿತ್ತು
ಭೀತಿ ಭ್ರಮೆಯ ಕಣ್ಣಿಗೆ

ಅರ್ಥವಾಗಿತ್ತು ಅದು
ತನ್ನದೇ ಬಾಳ ಬಾನಿನ ಚಿಕ್ಕಿ!

ಮರೆತದ್ದು ಮರುಕಳಿಸಿತ್ತು
ಗುಡಿಯಾಳ ಹಕ್ಕು
ತನ್ನದೆಂದು ಅಹವಾಲು
ಎಸೆದಿತ್ತು
ತನಗೆ ಬೇಕೆಂದು
ಬೇಡಿ ಕಾಡಿತ್ತು

ಬಾಹು ಬಂಧನ ಚುಂಬನಗಳ
ಒದ್ದು ವಿದಾಯವ ಹೇಳಿ
ಹಕ್ಕು ಬೇಡಿದವನಿಗೆ
ಒಡ್ಡಿಕೊಳಲೇ ಹೇಗೆ?
–ಚೀರಿ ಕೇಳಿದ ಪ್ರಶ್ನೆ
ಒಳಗೊಳಗೆ ನೂರೆಂಟು
ಕಂಪನ ವಿಸ್ಫೋಟ
ದಿಗ್ಭ್ರಾಂತಿಯಲಿ ಶಿಲಾಪ್ರತಿಮೆ
ಜಳ ಜಳ ಸುರಿವ
ಕಂಬನಿಯ ಹೊನಲ ಪೂರ
ಬಸಿರಲ್ಲಿ ಮೊಳೆತ
ಪುಳಕಗಳ ಕಿತ್ತೆಸೆವ
ಬೆಂಕಿಯಾದೇಶಕ್ಕೆ
ಹೆಜ್ಜೆಯಡಿ ಸರಿವ ಭೂಮಿ
ಶೂನ್ಯದಲಿ ಕರಗಿ
ಕಥೆಯಾಗುವ ಹುನ್ನಾರದ
ನಡುವೆ ಪ್ರತಿಭಟಸೆಯ ಕಿಡಿ
ಹೊಸ ಕನಸುಗಳ ಬಿತ್ತಿ
ಆಕಾಶ ಮಲ್ಲಿಗೆಯ
ಮುಡಿಸಿದವನ ಬೆರಳ
ಹಿಡಿದು

ಭೂಗತ ನೆನ್ನೆಗಳಿಗೆ
ವಿದಾಯವ ಹೇಳಿ
ರಂಗು ರಂಗಿನ ನಾಳೆಗಳ
ಕೋಶದಲಿ
ಹುದುಗುವ ನಿರ್ಧಾರಕ್ಕೆ
ಸಹಿಯಾಗುವ ಸಂದಿಗ್ಧ
ಮೂಕ ಭಾವರಾಗ ಯೋಗದಲಿ
ಶಿಲಾತಪಸ್ವಿನಿ

# ನಿತ್ಯಾನಂದದೆಡೆಗೆ ಸಂದ ನಂದ

ನಂದ
ಆನಂದ
ಚಿದಾನಂದ
ಕಾಮದಾನಂದದಲಿ
ಕೈವಲ್ಯದಾನಂದ
ಕಡಲಲ್ಲಿ ದಿವ್ಯ ಹಂಸಿಯ
ಸಾಂಗತ್ಯದಲಿ ಜೀವ ಸಾರಥ್ಯ

ಲಕ್ಷ ನಕ್ಷತ್ರ ದೇಹಿ
ಸಖಿಯರ ಸೇವೆಯಲಿ
ಬೆಳ್ದಿಂಗಳ ಪುತ್ಥಳಿ
ಬ್ರಹ್ಮಸೃಷ್ಟಿಯಲಿ
ಮನುಕುಲಕೆ
ಅಪರೂಪದ ಬಳುವಳಿ
ನಂದನಾನಂದ ವಲ್ಲರಿ
ಸರ್ಪ ಬಂಧದಲಿ
ಸುಖದ ಕಡಲುಕ್ಕಿಸಿ
ಜೀವಭಾವ ನಶ್ವರಗಳ
ನೂಕಿ...ನೂಕಿ
ಪ್ರೀತಿಯೊಂದೇ ನಿತ್ಯ
ಪ್ರೀತಿಯೊಂದೇ ನಿತ್ಯ
ಪ್ರೀತಿಯೊಂದೇ ಸತ್ಯವೆನ್ನುವ
ಕಿನ್ನರಿ ಮದನ ಮಂಜರಿ
ದೇಹವೆರಡೊಂದಾಗಿ
ರತಿಸುಖವೆ ಮುಂದಾಗಿ

ಅದ್ವೈತ ಭಾವದಲಿ ಲೀನ
ಕಣ್ಣು – ಬೆಳಕು
ಹೂವು – ಗಂಧ
ರಸ – ರುಚಿ
ಗಾಳಿ – ತಂಪು
ತನ್ಮಯಾನನ್ಯ ಬೆಸುಗೆಯಲಿ
ಲೋಕವೆಲ್ಲವು ಶೂನ್ಯ
ಕಾಮಕೋಟೆಯ ಸೆರೆಯೊಳಗೆ
ಧನ್ಯಭಾವ
ಪ್ರೇಯಸಿಯ ಸ್ವರ್ಣ ಶೃಂಖಲೆಯಲ್ಲೂ
ವಿಜಿಗೀಷು ಭಾವ
ಲೋಕ ಸಾರ ಸರ್ವಸ್ವವೂ
ಪದತಲದ ಧೂಳಿ
ಈ ದಿವ್ಯಾಲಿಂಗನ ಪುಲಕ
ಮಲ್ಲಿಗೆ ತೋರಣ
ಒಡಲ ಹೊನ್ನಾಭರಣ
ಭರಣ!!

ಎಣಿಕೆಯಿಲ್ಲದೀ ಸುಖ
ದೆದುರು ಹೆದರುವುದು ಮರಣ
ಮತ್ತಮದನವಾರಣ
ಘೀಂಕೃತಿಯಲಿ
ಸಂಭ್ರಮೋತ್ಸಾಹದ
ಕನಕರಂಗವಲ್ಲಿ
ನಂದನಾನಂದ ಕೇಲಿಯಲಿ
ರಾಸಲಾಸ್ಯಗಳಲ್ಲಿ
ಬಣ್ಣಗಳು ಬಯಲಾದವು
ಬಂಧಗಳು ಬರಿದಾದವು
ಕಾಲತ್ರಯ ಹೊನಲ
ಕವಲುಗಳು ಒಂದಾದವು
ಅಧರಾಮೃತ ಪಾನಗಳೂ ಮುಂದಾದವು

ರಾತ್ರಿ ಹಗಲುಗಳು ಒಂದಾದವು
ಮೌನ
ಮೌನ
ಬರೀ ಮೌನ
ಬಿಸಿಯುಸಿರು ಗಂಧದಾಮೋದ
ನುಣುಪು ರೇಶಿಮೆ ದೇಹ
ಸ್ಪರ್ಶ... ಹರ್ಷ
ಪ್ರೀತಿವೇದನೆಯೊಂದೇ
ಸಂವೇದನೆ
ಮಧುರ ಭಂಗಿಯ ವಾಸನೆ
'ಭವತಿ ಭಿಕ್ಷಾಂದೇಹಿ
ಮೌನ ಸೀಳಿತು
ದನಿಯ ಸವಾರಿ
ಪ್ರೇಮ ಲೋಕದ ಭದ್ರ
ಕವಚದೆದುರಿನಲಿ
ಬಾರಿ ಬಾರಿಯ ಕರೆಯೂ
ಕರಗಿತು
ಶೂನ್ಯ ಸ್ಪಂದನಕೆ
ಬುದ್ಧನೆದೆಯಲ್ಲಿ
ನಿಟ್ಟುಸಿರ ಮೊಳಕೆ
ಮೊಗದ ನಿರ್ಮಲಾಗಸದಲ್ಲಿ
ಮಂದಹಾಸದ ಮಿಂಚು

ಕವಿದ ಕಾರ್ಮೋಡದ ತೆರೆ
ಸರಿದು ಕ್ಷಣದಲ್ಲಿ
ದಿವ್ಯ ತೇಜೋದಯ
ಚುಂಬಕದ ಸೆಳೆತ
ಸಾನ್ನಿಧ್ಯ ಸಂವಾದದಲಿ
ಭ್ರಮೆಯ ಪೂರ್ಣಾಹುತಿ
ಮನದ ಮೂಲೆಗಳಲ್ಲಿ
ಜೇಡಗಟ್ಟಿದ ಬಲೆಗೆ

ಅಗ್ನಿ ಸ್ಪರ್ಶ
ಬಿಡದೆ ಬಿಗಿದ
ಸೌಂದರ್ಯ ಪಾಶಕ್ಕೆ ವಜ್ರದಂಡ
ಕಾಮಾನುರಾಗಗಳ
ಕಬಂಧ ಬಂಧಕ್ಕೆ
ಬುದ್ಧನ ಸಿದ್ಧ ಬಡಿವಾರ
ವಿಷಯ ಕಾನನ ಘನಕೆ
ಕರುಣೆ ಕುಠಾರ
ಸಾಘಾದ ಎದೆಯಂಗಳದಲ್ಲಿ
ಮೋಕ್ಷ ತುಳಸೀ ಬೀಜ
ಬುದ್ಧನ ಅಮೃತ ವಾಣಿ ವರ್ಷಕ್ಕೆ
ನಳನಳಿಸಿ ಬೆಳೆದ
ಆತ್ಮ ವಿಶ್ವಾಸದ ಆಲ

ಸುಂದರಿಯಪ್ಪುಗೆಯ
ಕೋಟೆ ಕತ್ತಲಲ್ಲಿ ತಬ್ಬಿದ್ದ
ಕಾಮಕಾಳ ಸರ್ಪ
ನೋಟಮಾಟದ ಮಂತ್ರ
ದಂಡಕ್ಕೆ ಮುದುಡಿ
ಮಂಗಮಾಯ
ಅವ್ಯಕ್ತ ಚಡಪಡಿಕೆ
ತಣಿಯದ ದಾಹ?
ಮದರಂಗಿ ಮತ್ತು
ಮಂದಹಾಸದ ಹುಚ್ಚು
ಗೋಡೆಯಿಲ್ಲದ ಗೋಡೆ
ಭ್ರಮೆಯಲಿ ತಬ್ಬಿ
ಪ್ರಪಾತದೆಡೆ ಸಾಗಿದ ಹೆಜ್ಜೆ
ಗದ್ದಲ ಸಂತೆ
ಅಸ್ವಸ್ಥ ಮನಸು
ಕುದಿವ ಕಡಲಿನ ಭೀತಿ
ಕತ್ತಲು

ಕತ್ತಲು
ಎತ್ತೆತ್ತಲೂ
ದಿಕ್ಕುಗಾಣದಸಹಾಯಕತೆಯಲ್ಲಿ
ಅಲೆದಾಟ
ಕ್ಷುಬ್ಧ ವಿಕ್ಷುಬ್ಧ ಕ್ಷಣಗಳಲಿ
ಶಾಂತಿಮಂತ್ರ

ಸಾಂತ್ವನದ ಕೋಗಿಲೆ
ತಂಪು ನೆರಳಿನ ಸೂರ್ಯ
ಸುಟ್ಟ ಆತ್ಮ ಪಕ್ಷಿಗೆ
ಪ್ರೀತಿ ನೇವರಿಕೆ
ಆರೈಕೆ
ಚೈತನ್ಯ ಸಿಂಪಡಿಕೆ
ಅಮೃತ ಸ್ಪರ್ಶಕೆ
ಅಲರಿದ ರೋಮಾಂಚನ

ದಿವ್ಯಾನುಭೂತಿಯ
ರಸಕಾರಂಜಿ
ನಂದನೆದೆ ಮಡುವಿನಲಿ
ತೇಲುವ ಭವ ಹಂಸಿ
ಬುದ್ಧ ಕರುಣೆಯ ಕೋಟೆಯಲಿ
ಜೀವ ಜೋಭದ್ರ
ಅವನ ಶಾರಣ್ಯದಲಿ
ಶಾಂತ – ಪ್ರಶಾಂತ
'ಬುದ್ಧಂ ಶರಣಂ ಗಚ್ಛಾಮಿ'
ನಂದನಾನಂದ ಲೋಕದಲಿ
ನಿತ್ಯ ಪಲ್ಲವಿಯ ಅನುರಣನ
ಹುಟ್ಟು ಸಾವಿನ
ಸುಳಿಯ ಸೆಳವಿಗೆ
ದೂರವಾಗಲು ಇಹುದು
ಇದುವೆ – ಬುದ್ಧನೆಂಬುದೆ
ಮಂತ್ರ ಪಠನ

# ಬರುವ ಹಾಗಿದ್ದರೆ ಬಂದು ಬಿಡು

ಇಷ್ಟಿಷ್ಟೆ ಬಿದ್ದು
ರಂಪು ರಾಡಿ ಏಕೆ
ಗೊತ್ತಿದೆ ನಿನ್ನೆದೆ ತುಂಬ
ಬುವಿಯವರ ಆಸೆಗಳು
ಹೊತ್ತು ಒಳಗಿರಿಸಿಕೊಂಡು
ಗಜಗರ್ಭವಾಗಿ ಸುಳಿವ ಕರ್ಮ
ಸೂಸಿ ಬಿಡು ಒಮ್ಮೆಲೇ
ನಿನ್ನೊಡಲ ಪ್ರೀತಿಯ
ಮುಸಲಧಾರೆ
ಗಾರೆಗಟ್ಟಿದ ಧರೆಗೆ
ಹರಿಸು ಹರುಷ
ಕರಕು ಗಟ್ಟಿದ ತೊರೆಗೆ
ಜೀವ ಬರಿಸು
ನಂಜುಗಟ್ಟಿದ ಎದೆಗಳಲಿ
ಮುದದ ಹೂವರಳಿಸು
ಸುಕ್ಕಿ ಸುಲಿದು
ನಿರ್ವಾಣದಲಿ ನಿಂತು
ನಿಟ್ಟುಸಿರ ಬೇಗೆಯಲಿ
ಬರಿದಾದ ಮರಗಳಲಿ
ಹಸಿರ ಚಿಲುಮೆಗಳುಕ್ಕಿಸು

ಮುದವಾಂತು ಬಾ ಬೇಗ
ಮೇಘ ಮೋಹರವೆ
ಬಿರಿದು ಹರಿಯಲಿ ಒಮ್ಮೆ
ಮಡುಗಟ್ಟಿ ನಿಂತ

ನಿನ್ನೆದೆಯಮೃತ ಹೊನಲು
ಕೊಚ್ಚಿ ಹೋಗಲಿ ಈಗ
ಬೂದಿ ರಾಶಿ ರಾಶಿ
ಹಸಿರೊಡೆದು ನೆಲದಾಯಿ
ನಗೆ ಮುಗುಳನರಳಿಸಲಿ
ಬಳ್ಳಿಯೊಡಲಿನ ತುಂಬ
ಹೂಮೇಳವಿಳಿದಿರಲಿ
ಮಂದಗಾಳಿಯ ಮೃದುಲ
ಚುಂಬನಕೆ
ಒಯ್ಯಾರದಿ ಒಡಲು
ನಗುತ ನರ್ತಿಸಲಿ
ಶುಭ್ರಶಾಂತಿಯ ಮೌನದಲಿ
ಸ್ವಚ್ಛ ಬೆಳಕಿನ ಚಿಲುಮೆ
ಚಿಮ್ಮಿ ಬರಲಿ
ಪ್ರೀತಿ ಹಣತೆಗಳೆಲ್ಲ
ಹೊತ್ತಿ ಉರಿಯಲಿ ಒಮ್ಮೆ
ಬರುವ ಹಾಗಿದ್ದರೆ
ಬಂದು ಬಿಡು ನಿಲ್ಲದಿರು
ನಿಟ್ಟುಸಿರ ಹಿಡಿದು ಹೀಗೆ!

## ಪ್ರೇಮಾವತಾರಿ

ರವಿಶಂಕರ ಅಭಯಂಕರ ಶಿವಸುಂದರ
ಕರುಣೆ ಪ್ರೀತಿಗಳ ಸಾಗರ ವಿಸ್ತಾರ
ದಿವ್ಯತೇಜದ ಸೊಂಪಿನಾಗರ ನಿತ್ಯಜಾಗರ
ಮಂದಹಾಸದ ಮಂದಾರ ಹಾರ

ವಿಶ್ವದಗಲಕೆ ಚಾಚಿದೆದೆಯು
ಮುಗಿಲಾಚೆಗೆ ಹಬ್ಬಿದಾತ್ಮವು
ನಿನ್ನ ಪಾತ್ರಕೆ ಜಗವೆ ರಂಗವು
ಪ್ರೀತಿಯಭಿನಯವಷ್ಟೆ ಪಾಠವು

ನೀನೊಂದು ಅನಂತ ಆಕಾಶ
ಎಲ್ಲೆಗಡಿಗಳಿಲ್ಲದ ವಿಸ್ತಾರ ಬಯಲು
ಅಪ್ಪಿಕೊಳ್ಳುವ ಭೂಮಿ ನೀನು
ಅಂತರಾಳದಿ ಹೊಮ್ಮುವ ಮಾತೆಲ್ಲ ಜೇನು

ಪ್ರೀತಿ ಜಂಗಮನಾಗಿ ಊರೂರು ಅಲೆಯುತಿಹೆ
ಶಾಂತಿ ವನಗಳ ಬೆಳೆಸುವ ಹುನ್ನಾರ ನಿರತ
ಬದುಕು ಕಲೆಯಾಗಿಸಿ ಕಲೆಯೇ ಬದುಕಾಗಿಸಿ
ಮೋಡಿಯಾಡುವ ಮಂತ್ರಗಾರ ನೀನು

ತತ್ವ ಸಿದ್ಧಾಂತಗಳ ಗೊಡವೆ ಇಲ್ಲದೆಯೇ
ಜನಮನದ ಕೊಳಗಳಲಿ ಶ್ವೇತ ಕಮಲಗಳರಳಿಸಿ
ಪ್ರೀತಿ ಮಂತ್ರಾಕ್ಷರಗಳ ಬೋಧಿಸಿರುವೆ
ಜೀವ ಜೀವದ ಕುಶಲತೆಗೆ ತವಿಸಿಹೆ

ಮುಗ್ಧ ಮೋಹಕ ಮೋಹನ ರೂಪ
ದರ್ಶನ ಮಾತ್ರದಲಿ ದೂರ ನೂರು ತಾಪ
ಮನುಕುಲದ ಘನ ಗಗನದಲಿ ನಿರಂತರ
ಹೊಳೆವ ಬೆಳ್ಳಿ ಚಂದ್ರನಾನಂದ ರೂಪಾವತಾರ

ಮೆಲುದನಿಯ ಮೆಲುನುಡಿಯೆ ವೇದಸಾರ
ಶುಭ್ರದಂತ ಸ್ಮಿತ ಕಾಂತಿಯೇ ಕಂಠಹಾರ
ಕೊರಳದನಿಯಲಿ ನೂರು ಕೋಗಿಲೆಯಿಂಪು
ಪ್ರೀತಿ ಲೇಪಿತ ಅಧರಕೆ ಅದೆಷ್ಟು ಸೊಂಪು!

ಜಟೆಕೆದರಿ ನಿಂತ ಭಗೀರಥ ಭಂಗಿಯಲಿ
ಯಾವ ಭಾಗೀರಥಿಯ ಇಳಿಸ ಹೊರಟೆ !
ಇಳಿದವಳ ಹಿಡಿತಂದು ಇನಿತಿನಿತು ಹರಿಸು
ನಮ್ಮೆದೆಯ ಮರುಗಳಲಿ ಹಸಿರ ಬೆಳಸು

ವಿಶ್ವಜೀವನ ಪೂಜೆಯೇ ನಿನ್ನದಾಗಿದೆ ದೀಕ್ಷೆ
ಸಲಿಸಲೆಂದೇ ಅಲೆವೆಮನುಕುಲದಪೇಕ್ಷೆ
ನೀ ಕಲಿಸಿದ ಪಾಠಗಳ ನಮಗಹುದುರಕ್ಷೆ
ಬೇಡ ಬಂದವರು ನಾವು ನೀಡು ಭಿಕ್ಷೆ

ವಿಶ್ವದಗಲಕೆ ಹರಿದಾಡಿ ಹೆಜ್ಜೆಗಳ ಮೂಡಿಸುತ
ಬದುಕುವಾ ಕಲೆಗಳನು ಕಲಿಸಿದ ಗುರುವೆ
ಬದುಕು ಬದುಕಲಿಹುದೆಂಬ ತತ್ವ ಹರಿಕಾರ
ಕರುಣೆ ಪ್ರೇಮಗಳೆ ಐಕ್ಯತೆಗೆ ದಾರಿಯೆಂದ ಶಾಂತಿ ವೀರ

ಬುದ್ಧ ಸಿದ್ಧ ಗೌತಮ ಏಸು ಬಸವರು
ಮಹಾವೀರ ಗಾಂಧಿಗಳೆಲ್ಲರೂ ಸಾರಿದ
ಸತ್ಯ ಮುತ್ತುಗಳ ಮೌನದಲಿ ಆಯ್ದಾಯ್ದು
ನರಳಿ ನೋಯುವ ಜನಕೆ ಹಂಚಿಕೊಟ್ಟೆ

ಜಾತಿ ಭೇದವ ಮರೆತು ಲಿಂಗ ಸಾಮ್ಯವನರಿತು
ನಾವೆಲ್ಲ ಒಂದೇ ಕುಲ ಒಂದೇ ಬಾಳೆಂದವನು
ಮುಗ್ಧ ಮಗುವಿನ ತೆರದಿ ಕಾಲುಷ್ಯ ಮುಕ್ತತೆಯ
ಅಂತರಂಗದಲಿರಿಸಿ ಬಾಳು ಕಲಿಸಿಕೊಟ್ಟವನು

ನಾನೇ ನೀನು ನೀನೆ ನಾನು ಎನ್ನುತ ಲೋಕವ
ತಬ್ಬಿಕೊಳ್ಳುತಲಿ ಕೂಡಿನಡೆದರೆ ಅರ್ಥ
ಸ್ವಾರ್ಥ ಮೋಹಗಳ ಸೆರೆಗೆ ಸಿಲುಕಿದರೆ ಬಾಳೆಂಬುದೆ ವ್ಯರ್ಥ
ವಿಶ್ವ ವಿಶ್ವಗಳು ಬೆಸೆವುದಾಗಲಿ ನಮ್ಮಯ ಪುರುಷಾರ್ಥವೆಂದೆ

ಮೋಸವಂಚನೆ ಕ್ರೌರ್ಯಗಳ ಕರಿನೆರಳು ಕವಿದಿರಲು
ಉಗ್ರವಾದಿಗಳ ರಕ್ತಪಿಪಾಸೆಯ ನಾಗರ ಹೆಡೆ ಬಿಚ್ಚಿರಲು
ಹಿಂಸೆ, ಕೊಲೆ, ಕೋಮು ದಳ್ಳುರಿ ನಾಲಗೆ ಚಾಚಿರಲು
ಶಾಂತಿ ಪ್ರೀತಿಯ ಕಳಶ ಹೊತ್ತು ಹೊರಟಧೀರ ನೀನು

## ಕನಕವೆಂಬ ಕನಕ

ತಾಳ ತಂಬೂರಿ ಗೆಜ್ಜೆ
ಕುಣಿದು ಬಿಡಿಸಿದ ಕನಕ
ಭಕ್ತಿ ಭಿತ್ತಿಯ ತುಂಬ
ರಂಗೋಲಿ ಹೆಜ್ಜೆ
ಹರಿಚರಣದಲಿ ನಿಂದು
ಜಾತಿ ನಿಂದೆಯ ತಿಂದು
ನಗುತ ನಡೆದನು ಕನಕ
ವೈಕುಂಠ ಬೀದಿಗಳ
ತಲುಪುವನಕ

ಮಧ್ಯ ಕೊಳದೊಳಗೊಂದು
ಕನಕ ಕಮಲದ ಹೂವು
ಹುತ್ತಗಟ್ಟಿತು ಸುತ್ತ
ಒಳಗೆಲ್ಲ ಸೇರಿತ್ತು ನೂರು ಹಾವು
ವಿಷದ ಹೊಗೆಯುಗುಳುತ್ತ
ಹೆಡೆಯಾಡಿ ನಲಿದರೂ
ಕಂದದೊಲು ನಿಂತಿತ್ತು
ಕನಕ ಕಮಲ
ಬರಿ ಕಮಲವಲ್ಲವದು
ಬ್ರಹ್ಮ ಕಮಲ
ಅಪ್ಪ ಅಮ್ಮರ ಕನಸು
ರಾಜ್ಯಸಿರಿ ವೈಭೋಗ
ದಂಡನಾಯಕನಾಗೆ
ವೀರಸಿರಿಯೋಗ
ಎಲ್ಲಿಂದಲೋ ಬಂದ

ಕರೆಯ ಮರೆಗೆ
ಕನಕ ಜಾರಿದ್ದನಂದೆ
ಹರಿಯ ಮೊರೆಗೆ
ಆತ್ಮಾಂತರಾತ್ಮ ಮಥನ
ತತ್ವದ ನವನೀತ ಸವಿಗೆ
ಹರಿನಾಮ ಮಾರ್ಮೊಳಗಿ
ಇನಿದಾಯ್ತು ಕಿವಿಗೆ
ತಲ್ಲಣವ ತಣಿಸುತ್ತ
ಭರವಸೆಯ ಬಿತ್ತುತ್ತ
ನಂಬಿ ಕೆಟ್ಟವರಿಲ್ಲವೊ
ಎಂದೆನುತ ಗೆಜ್ಜೆತಾಳವ
ಕುಣಿಸಿ ಹರಿದಾಡಿದ
ಊರು ಮನೆ ಬೀದಿಯಲಿ
ಮನಮನದ ಗುಡಿಗಳಲಿ
ನಲಿದಾಡಿದ
ಹರಿಯೆದೆಯ ಪ್ರಿಯ ಪದಕ
ವೆಂದೆನಿಸಿ ಲೋಕದಲಿ
ತೊನೆದಾಡಿದ

ಜಾತಿ ನೀತಿಯ ವ್ಯಂಗ್ಯ
ಸರಳಿನೇರುಗಳೆಲ್ಲ
ಬ್ರಹ್ಮರಂಧ್ರಗಳಾಗಿ
ಬಲಿದು ನಿಂದು
ಮುಟ್ಟಿದೆಡೆ ಚಿಮ್ಮಿದುವು
ರಸಭಕ್ತಿ ಕಾರಂಜಿ
ಮೀಟಿದರೆ ತಂಬೂರಿ
ಗೀತಗಂಗೆಯ ಪೂರ
ಕುಣಿದ ಹೆಜ್ಜೆಗಳೆಲ್ಲ
ನಾಟ್ಯತರಂಗ
ಪುಲಕಗಳು ಮೊಗ್ಗಿಟ್ಟು
ತುಂಬಿದವು ಒಡಲೆಲ್ಲ

ಕಾಗಿನೆಲೆ ಕೇಶವನ
ಹೃದಯಾಂತರಾಳದಲಿ
ಕೌತುಕವುಕುಡಿಯೊಡೆದು
ಬಯಸಿತ್ತು ಕನಕ ಸಂಗ
ಅನುಭವದ ಹನಿಹೀರಿ
ಸೊಕ್ಕಿ ಸುಳಿಯಿತು ಕನಕ ಭೃಂಗ
ಕಾವ್ಯಗಿರಿಗಳ ಸಾಲು ಸಾಲುಗಳಲ್ಲಿ
ಸೆಟೆದೆದ್ದು ನಿಂತದ್ದು ಇವನ ಶೃಂಗ
ಮೋಹನ ತರಂಗಿಣಿಯ
ಜೋಕಾಲಿಯಾಟದಲಿ
ಜೋಡಿಹಕ್ಕಿಯರಾಗಿ
ಉಷಾ ಅನಿರುದ್ಧರಾ ಪ್ರಣಯ
ಪಯಣವು ಶುಭದ
ತೀರದೆಡೆ ಸಾಗಿತ್ತು
ಸರಸ ವಿರಸದ ಮಹಾಪೂರದಲಿ
ತೇಲಿತ್ತು ಮಾಧವನ
ಮೋದ ಆಮೋದ ಯಾನ
ರಾಗಿಗಾಯಿತು ರಾಘವನ
ರಾಗ ಸಂಭ್ರಮದ ಚೈತ್ರ್ಯಾಯಣ

ಕನಕ ಕನಕಾಕನಕ
ಇಳೆಯ ಅಗಸದಲ್ಲಿ
ಹೊಳೆ ಹೊಳೆವ
ಮಹಾ ನಕ್ಷತ್ರ ಪುಂಜ
ವ್ಯಾಸಗುರು ಗುರುತಿನಲಿ
ಬದುಕಿವನದಾಯ್ತೊಂದು
ಪುಣ್ಯತೀರ್ಥ

## ಸ್ವಘೋಷಿತೆ

ಆದಿಶಕ್ತಿ
ಆದಿಮಾಯೆ
ವಿಶ್ವಕೆಲ್ಲ ಮಹಾತಾಯೆ
ಕಂಗಳಲ್ಲಿ ಸೂರ್ಯತೇಜ
ಗರ್ಭದಲ್ಲಿ ಸೃಷ್ಟಿ ಬೀಜ

ಕಡಲು ನನ್ನ ದಿವ್ಯ ಒಡಲು
ಪ್ರಕೃತಿಯೇ ನನ್ನ ಮಡಿಲು
ಹೂಂಕಾರವೆ ಬರಸಿಡಿಲು
ಕೇಶರಾಶಿಯೆನ್ನ ಬಿಳಲು

ನೀಲಬಾನ ಮುಡಿಯಲೆನ್ನ
ಮಾಲೆ ಚಿಕ್ಕಿ ದಂಡೆಯು
ಗೆಜ್ಜೆಯುಲಿಯೆ ಸಪ್ತಸ್ವರವು
ಹೆಜ್ಜೆಗತಿಯೆ ನಾಟ್ಯವು

ಸುಳಿಗಾಳಿಯೆ ಉಸಿರೆನ್ನದು
ಸುರಿಮಳೆಯೆ ಕಂಬನಿಯು
ಕಣ್ಣಮುಚ್ಚಲದುವೆ ನಿಶೆಯು
ಎವೆ ಬಿಡಿಸಲು ಇಳಿವ ಹಗಲು

ಮಂದಸ್ಮಿತವೆ ಚಂದ್ರೋದಯ
ಪ್ರೀತಿ ಹರಿವೆ ಭಾಗ್ಯೋದಯ
ನಾನೊಲಿದರೆ ಜಗಕೇ ಸುಖವು
ನಾಮುನಿದರೆ ಸೃಷ್ಟಿಯೆ ಲಯವು

ಅಣು ಅಣುವಲಿ ಕಣ ಕಣದಲಿ
ಮರ ಮರದಲಿ ಗಿಡಗಿಡದಲಿ
ಹೂವಲಿ ಮೊಗ್ಗಲಿ ಬುವಿ ಬಾನಲಿ
ನಾನೇ ನಾನೇ ನನ್ನಯ ಠಾವೆ
ಅಲ್ಲಿಯು ನಾನೆ ಇಲ್ಲಿಯು ನಾನೆ

ಚಂದ್ರಕಿರಣಗಳ ಬಲೆಯಲಿ ನಾನೆ
ತಾರೆಯ ಬನದಲಿ ನೀರದದೆದೆಯಲಿ
ಜೀವ ಕೋಟಿಗಳ ಉಸಿರಲಿ ನಾನೆ

ನಾನೇ ಶಕ್ತಿ ನಾನೆ ವಿಮುಕ್ತಿ
ಆದಿ ಅನಾದಿ ಸರ್ವ ಶಕ್ತಿಮಯೆ
ನಾನೇ ನಾನೇ ನಾನಿಲ್ಲದ ಎಡೆಯಿಲ್ಲ
ಬ್ರಹ್ಮಾಂಡವೆ ನಾನಾಗಿರೆ ನಾನಿಲ್ಲದೆ ಬರಿದೆಲ್ಲ!

# ಕಡಲ ಸೇರುವ ಬಯಕೆ ನನಗಿಲ್ಲ

ನಾನಿದ್ದ ನೆಲದಲ್ಲೇ
ಹನಿಹನಿಯಾಗಿ ಜಿನುಗಿ
ಸರಳ ರೇಖೆಗಳಲ್ಲೋ
ಅಡ್ಡ ಹಾದಿಗಳಲ್ಲೊ
ನುಸುಳುತ್ತಾ ಮೆಲುದನಿಯ
ಮಂಜುಳ ರವಕೆ
ಮೋದಗೊಳ್ಳುತ್ತಾ
ಆಕಾಶಕ್ಕೆ ಮುಖ ಹಚ್ಚಿ
ಅದರ ನೀಲಿಯನ್ನು
ಇಷ್ಟಿಷ್ಟೇ ಕರಗಿಸುತ್ತಾ
ಹರಿಯುತ್ತಾ ಹರಿಯುತ್ತಾ
ಹರಿಯುತ್ತಲೇ
ಹರಿವನ್ನು ಬದುಕಾಗಿಸುತ್ತಾ
ದಣಿದು ದಾಹಕ್ಕೆ
ಹಾತೊರೆದು ತೆರೆದ
ಕೋಟಿಬಾಯಿಗಳನ್ನು
ತಣಿಸಬೇಕಿದೆ ನನಗೆ
ಪೊರೆಗಟ್ಟಿ ಬಿರಿದ
ಭೂಮಿಯ ತಣಿಸಿ
ತಂಪಾಗಿಸಿ
ಸಮಾಧಿಗೊಂಡ
ಆಸೆಕನಸುಗಳ
ಚಿಗುರಿಸಬೇಕಿದೆ ನನಗೆ
ಸಮತಟ್ಟು ಬಯಲಲ್ಲಿ
ಕಲ್ಲು ಬಂಡೆಗಳ

ಬಿರುಕು ಸಂದಿಗಳಲ್ಲಿ
ಉಬ್ಬರ ಅಬ್ಬರಗಳಿಲ್ಲದೆ
ಸಾಗಿ ಸಾರವತ್ತಾಗಿಸುವ
ಹಂಬಲದ ಬೆನ್ನೇರಿ
ಮರಳ ಕೆಂಡದ ಹೊಂಡಗಳಲ್ಲಿ
ಮರೆಯಾಗಿ ಕುಳಿತು
ಜೀವಸಾವಿನ ಕರಾಳ
ಕ್ಷಣಗಳಲ್ಲಿ
ಚಿಮ್ಮಿ ಚಿಲುಮೆಯಾಗಿ
ಗುಟುಕು ಜೀವವ
ತಣಿಸಿದಲ್ಲದೆ
ಜೀವದರ್ಥವೆ ಶೂನ್ಯ
ಕಡಲ ಕರೆಗೆ ಕರಗಿ
ಸಾಗಿ ಸೇರುತ
ನನ್ನನೇ ನಾ ಕಳೆದುಕೊಳ್ಳುವ
ಬಯಕೆ ನನಗಿಲ್ಲ...
ಇಲ್ಲವೆಂದಿಗೂ ಇಲ್ಲ!!

# ಹೀಗೊಂದು ರಾತ್ರಿ

ಹಬ್ಬಿದೆ ತಬ್ಬಿದೆ ಸುಂದರ ರಾತ್ರಿ
ಹೊನಲಾಗಿ ಹರಿದಿದೆ ಸುರಿದು
ಚಂದ್ರನ ಕಾಂತಿ
ಅದೃಶ್ಯ ಬೆರಳೊಂದು
ನುಡಿಸುವ ಲಯಕೆ
ಹಾಡಿತೂಗಿದೆ
ಮರಬಳ್ಳಿ
ಕೈಬೀಸಿ ಕರೆಯುತಿವೆ
ಬೆಳ್ಳಿ ಚಿಕ್ಕೆಗಳು
ರಾಸದಾಸೆಗೆ
ಸೆಳೆಯುತಿವೆ
ಆಡುತ ಹಾಡುತ ಬಾನಲ್ಲಿ
ಬಾ ನಲ್ಲ ಮುನಿದು
ಮೊಗದಿರುಹಿ ಕಾಡದಿರು
ನನ್ನೆದೆಯ ನವಿಲು
ಕುಕಿಲಿರಿದು ಕರೆಯುತಿದೆ
ಜೊತೆಯಾಗಿ ನಿನ್ನೊಡನೆ
ಕುಣಿಯೆ ತುಡಿಯುತಿದೆ
ಒಳಹೊರಗೆ ಶಾಂತಿಯೋ ಶಾಂತಿ
ಕೂಡಿಮಾಡುವ ಪ್ರೀತಿಯ ಕ್ರಾಂತಿ
ಇದುವೆ ಮುಹೂರ್ತವು ಮಿಲನಕ್ಕೆ
ಸುಖದಿಂದೇರುವ ದಿವ್ಯತೆಗೆ
ದೂರ ದೂರಕೆ ಸಾರದಿರು
ನಮದಲ್ಲದ ನಾಳೆಯು
ನಂಬದಿರು

ಜಗಮರೆಯುತ
ನಗೆಚೆಲ್ಲುತ
ಗರಿಬಿಚ್ಚುತ ನಲಿಯೋಣ
ಸಾವಿಲ್ಲದ ಗಡಿಗಳ
ಸೇರೋಣ

# ಚಿರ – ವಿರಹಿ

ಎಂಥ ಸೊಗಸಿತ್ತು
ನಮ್ಮ ಮಿಲನದಲಿ
ನನ್ನ ನಿನ್ನ ಮಿಲನಕ್ಕೆ
ನಕ್ಷತ್ರ ನೀಹಾರಿಕೆ
ರವಿ ಚಂದ್ರರ ಅಸ್ತು
ಕ್ಷಿತಿಜದಾಚೆಯ
ದಿವ್ಯಾತ್ಮಗಳ ಸ್ವಸ್ತಿ ಮಂತ್ರ

ಆದರಿಲ್ಲದೆ ಹೋಯ್ತು
ಚಿರಸುಖದ ಹರುಷ
ಮಿಲನ ಸಂಭ್ರಮವೆಲ್ಲ
ಉಳಿದಿತ್ತು ಒಂದೆ ನಿಮಿಷ
ವಿರಹವೊಂದೇ ನಮ್ಮ
ಬಾಳ ಪುಟಗಳು ತುಂಬಿ
ನನ್ನ ದಾರಿಗೆ ನಾನು
ನಿನ್ನ ದಾರಿಗೆ ನೀನು
ಮುಖ ಮಾಡಿ ಸಾಗುವುದು
ಅನಿವಾರ್ಯವೆನಿಸಿತ್ತು
ಇರಲಿ ಬಿಡು
ಹೊರಟವನು
ಹೊರಟೇಬಿಟ್ಟೆ
ಮರೆತು ಮರಳದೆ
ನನ್ನ ಒಂಟಿಯುಳಿಸಿಬಿಟ್ಟೆ
ನಿನ್ನ ನೆನಪುಗಳುಣಿಸಿ
ನಮ್ಮ ಮಕ್ಕಳ ಸಾಕಿ

ಸಲಹಿದ್ದೇನೆ
ಚಿಂತೆ ಬೇಡ
ಎದೆಯ ಕಡಲುಕ್ಕಿಸಿ
ಹಾಲೂಡಿಸಿದ್ದೇನೆ
ಮಡಿಲ ತೊಟ್ಟಿಲೊಳಿರಿಸಿ
ಹಕ್ಕಿ ಕೊರಲಿಂದ ಹಾಡಿ
ಜೋಗುಳವ ತೂಗಿದ್ದೇನೆ
ಬಣ್ಣಬಣ್ಣದ ಪಾತರಗಿತ್ತಿಗಳ
ಗಾಳಿಪಟವಾಡಿಸಿ
ನಕ್ಕು ನಲಿಸಿದ್ದೇನೆ
ನವಿಲುಗಳ ಹೆಜ್ಜೆಗೆ
ಗೆಜ್ಜೆ ಪೋಣಿಸಿ
ಕುಣಿಯ ಹಚ್ಚಿದ್ದೇನೆ
ಬಾಲ್ಯದದ್ಭುತಗಳ
ರೆಕ್ಕೆ ಬಿಡಿಸಿ
ಪುಲಕಗೊಳಿಸಿದ್ದೇನೆ
ಬಚ್ಚಬಾಯಿಯ ತುಂಬ
ಬೆರಗು ತುಂಬಿದ್ದೇನೆ
ಧಾರಾಳ ಪ್ರೀತಿಯ ಹರಿಸಿ
ನೋವ ಮರೆಸಿದ್ದೇನೆ
ಸಸ್ಯ ರಸಗಳ ಕುಡಿಸಿ
ಬಲವ ತುಂಬಿದ್ದೇನೆ
ಬೆಂಕಿ ಬಿರುಗಾಳಿ
ಕ್ಷಾಮ ಡಾಮರ ಭೂತಗಳ
ಮೆಟ್ಟಿ ನಿಲ್ಲುವ
ಎದೆಯ ಕೊಟ್ಟಿದ್ದೇನೆ
ಮುಂದೆ ಸಾಗುವುದನ್ನೂ
ಕಲಿಸಿದ್ದೇನೆ
ಗರಿಗಳ ಬಿಡಿಸಿದ್ದೇನೆ
ಆದರೂ ಒಮ್ಮೊಮ್ಮೆ
ಕೇಳುತ್ತಾರೆ –

ಅಮ್ಮಾ ಅಪ್ಪನನು
ತೋರಲಾರೆಯಾ?
ಕರೆಯಲಾರೆಯಾ ಬಳಿಗೆ
ಪ್ರಶ್ನೆಗೆಲ್ಲಿದೆ ಉತ್ತರ?
ಬರಿ ನಿರುತ್ತರ...!
ನನ್ನ ಸೌಭಾಗ್ಯ ಶೃಂಗಾರಗಳ
ತಿಳಿಸಿ ಬಿಡಲೇ?
ಕತೆಯ ವ್ಯಥೆಯ ಚರಿತ್ರೆ
ಓದಿ ಬಿಡಲೇ?
ನೀನೆಂದಿಗೂ ಬರಲಾರದ
ತೀರಕ್ಕಂಟಿದ
ಶಾಪಗ್ರಸ್ತಯಕ್ಷನೆಂದು
ಹೇಳಿ ಬಿಡಲೇ?

ನನಗೆ ಗೊತ್ತು
ನಿನ್ನೆದೆಯಲ್ಲೂ ಆಸೆ
ಚಿಗುರುತ್ತದೆ
ಮಿಲನ ಸಂಭ್ರಮ ಕ್ಷಣಕೆ
ಹಾತೊರೆಯುತ್ತದೆ
ನಿನ್ನ ಅಸಹಾಯಕತೆಯ
ನಿಟ್ಟುಸಿರ
ಬಿಸುಪಿನ ಕಂಪು
ನನ್ನ ಮೂಗಿಗೂ ಬಡಿಯುತ್ತದೆ
ನಿನ್ನ ದೂರುವುದಿಲ್ಲ ಇನಿಯ
ನೀನಿಲ್ಲದಿದ್ದರೂ
ನಿನ್ನ ಕಂಬನಿ
ಮಳೆಯಾಗಿ ಇಳಿದಾಗ
ನಿನ್ನ ಸನಿಹದ ಅನುಭೂತಿಯಲಿ
ತಣಿದು ಸುಖಿಸುತ್ತೇನೆ
ಅಪ್ಪನ ಪ್ರೀತಿ ಇದೆಲ್ಲವೆಂದು
ಮಕ್ಕಳನು ರಮಿಸುತ್ತೇನೆ

ಎಂದೆಂದಿಗೂ ನಿನ್ನ
ಸೇರಲಾಗದ ಚಿರವಿರಹಿ
ನಾನೆಂದು ಗೊತ್ತು
ಆದರೋ ಒಮ್ಮೊಮ್ಮೆ
ನೀನಿಲ್ಲದ ನೆನಪು
ಹಿಂಡುತ್ತದೆ
ದೂರ ತೀರದಿ ನಿಂತು
ನಿನ್ನೊಡಲ ಕಾಂತಿ
ತುಂಬಿಕೊಳ್ಳುತ್ತೇನೆ
ನಕ್ಷತ್ರ ಶೃಂಗಾರದಲಿ
ಹೊಳೆವ ನಿನ್ನೊಡಲ
ನೋಟ ಮಾಟಕೆ
ಬೆರಗಾಗಿ ನಿಲ್ಲುತ್ತೇನೆ
ನೆನಪೊಡೆದು
ವಿರಹಗೀತೆ ಹೊನಲಾಗಿ
ಹರಿಯೆ ನಿನಗೆ
ಕೇಳಿಸಿದಣಿದು ತಣಿಯುತ್ತೇನೆ
ಹಿಗ್ಗಿನಲಿ ಹಿಗ್ಗುತ
ನಿನ್ನ ಯುಗಾಂತರದ
ಅಗಲಿಕೆಯನ್ನು
ವಿಧಿಯ ಶಾಪವಿದೆಂದು
ಸ್ವ ಸಾಂತ್ವನದಲಿ
ಮನವ ನಿಲಿಸುತ್ತೇನೆ
ಚಿರವಿರಹಿಯಭಿದಾನದಲಿ
ತಪೋನಿರತೆಯಾಗುತ್ತೇನೆ

# ನೆನಪು ನೆರಳಿನ ಹಾದಿಗುಂಟ

(ಅಪ್ರಕಟಿತ ಕವನಗಳು)

# ಭಕ್ತಿ ಪುಷ್ಪಾಂಜಲಿ

ಒಲವೇ ನಲವೇ ಗುರುವೇ
ದಿಟದಿ ನೀನಹೆ ಶಿವಕುಮಾರ
ಭಗ್ನಗೊಂಡ ಬಸವಣ್ಣ
ಕನಸುಗಳ ಸ್ಞಾಕ್ಷಾತ್ಕರಿಸಲೆಂದೇ
ಬುವಿಗಿಳಿದ ಬಸವನವತಾರ
ಸಿದ್ಧಗಂಗೆಯ ಆಧ್ಯಾತ್ಮ ಲೋಕದ
ಅನನ್ಯ ಅನುಪಮ ಸಾರ್ವಭೌಮ
ನಿನ್ನ ಕೀರ್ತಿ ಕಿರೀಟ ತಬ್ಬಿದೆವ್ಯೋಮ
ಕೋಟಿ ಕೋಟಿ ಮಾನಸಗಳಲ್ಲಿ
ಭಕ್ತಿ ಹಣತೆಗಳ ಹಚ್ಚಿಟ್ಟೆ
ಕರ್ಮಯೋಗದ ತಪಸ್ವಿ ನೀನಾಗಿರಲು
ಹಾಡಿ ಮುಗಿದಿವೆ ಕಾನು ಬಾನು
ನೀನಡೆವ ಹೆಜ್ಜೆ ಸ್ಪರ್ಷಕ್ಕೆ
ಇಳೆಯರಳಿಸಿದೆ ಪುಲಕ ಪುಷ್ಪ
ಹೊಳೆವ ತೇಜದ ಕಣ್ಣಕಾಂತಿ
ಹೊನಲಾಗಿ ಹರಿದು ಹರಿದು
ಜಗದ ಕತ್ತಲಿನಲ್ಲಿ ಬತ್ತಲಾಗಿಸಿದೆ
ಬೇಡಿ ಬಂದವರಿಗೆಲ್ಲ ಇಲ್ಲವೆನ್ನದೆ
ನೀಡುವ ಕೊಡುಗೈಯ್ಯ ಕಲ್ಪವೃಕ್ಷ
ಕರ್ಮರತನಾಗಿಯೇ ಪಡೆದೆ ಮೋಕ್ಷ
ಮಾತಾಡಿದರೆ ಮಲ್ಲಿಗೆಯ ಘಮಲು
ಜ್ಞಾನದಾಹಿಗಳು ಬಳಿ ನಿನ್ನ ಸಾರಿದರೆ
ಸಾಕು ಬರಿಸುವೆ ಎಣೆಯಿಲ್ಲದ ಅಮಲು
ದಯೆ ಧರ್ಮ ಪ್ರೀತಿಗಳಿನಲ್ಲಿ ಬಿತ್ತಿ
ಮನುಕುಲಕೆ ಕಲ್ಯಾಣ ಫಸಲುತೆಗೆವೆ

ಕ್ರೌರ್ಯ ಹಿಂಸೆ ನಿಷ್ಠುರ ಮೆಟ್ಟಿ ನಿಲುವೆ
ಜಾತಿ ಮತ ಪಂಥಗಳ ಮೀರಿ
ಚರಾಚರ ಸೃಷ್ಟಿಯೆಲ್ಲವ
ತಬ್ಬಿ ಎದೆಗಪ್ಪಿ ಪ್ರೀತಿ ಬರೆದೆ
ಇವ ಯಾರವ ಇವ ಯಾರವ
ಎಂದೆನ್ನದೆ ಇವ ನನ್ನವ ಇವ ನನ್ನವನೆಂದೆ
ಹಸಿದ ಉದರಗಳಿಗೆ ಅನ್ನವಿತ್ತೆ
ಅಸ್ವಸ್ಥತ್ರಸ್ತಮನಗಳಿಗೆ ಶಾಂತಿಯಿತ್ತೆ
ನೇರ ನುಡಿ ನೇರ ನಡೆಗಳ ಬೋಧಿಸಿ
ಬದುಕಿಗೊಂದು ಅರ್ಥವನಿತ್ತೆ
ಕ್ರಿಯಾಶೀಲ ಕರ್ಮರತ ಯೋಗಿಯೇ
ಎಣೆಯಿಲ್ಲದ ಬಿರುದು ಬಾವಲಿಗಳು
ಸದಾಚಾರ ಸಂಪನ್ನ ಮೇರು ವ್ಯಕ್ತಿತ್ವದ
ಎದುರು ನಾಚಿ ಅವಿತಿವೆ ಎಲ್ಲೋ
ನಿನ್ನ ಸಾನ್ನಿಧ್ಯದಿ ಸಿದ್ಧಗಂಗೆಯು
ಬುವಿಯ ಕೈಲಾಸವಾಗಿರಲು
ಪುಣ್ಯಕೆಣೆಯುಂಟೆ ನಿನ್ನ ನಂಬಿದ
ಈ ಯುಗದ ಭಕ್ತಿ ಸಂದೊಹಕ್ಕೆ
ನೊಂದ ನಿಷ್ಪ್ರಾಣ ಜೀವಿಗಳಿಗೆ
ಅಮೃತ ಸಿಂಪಡಿಸುವ ಗರುಡನೀ
ಶತಾಯುಷಿಯೇ ಮಹಾಋಷಿಯೇ
ನೀನೊಬ್ಬ ದ್ರಷ್ಟಾರ ಕರುಣೆ ಅಪರಂಪಾರ
ಅನುಭಾವ ಅಧ್ಯಾತ್ಮ ಶಾಸ್ತ್ರ ಸಾರಾಸಾರ
ಜಗದ ಪುಣ್ಯದಿ ನಡುವೆ ನಮ್ಮ ಉದಿಸಿ
ಮನುಕುಲದ ಶಾಂತಿ ಸಂಕ್ಷೇಮಕ್ಕೆ ದುಡಿವ
ಮಹಾ ಚೇತನವೇ
ನಿನಗಿದೋ ನನ್ನ ಭಕ್ತಿ ಪುಷ್ಪಾಂಜಲಿ
ನನ್ನದೆಯಲಿ ಮೊಗೆದ ಆನಂದ ಬಾಷ್ಪಾಂಜಲಿ

# ನನಗೆ ನನ್ನಲ್ಲೇ ಹೆಮ್ಮೆ

ಹೆಣ್ಣಾಗುವುದೆಂದರೆ ವಿಚಿತ್ರ
ಭಾವಾನುಭೂತಿಗಳ ಗಂಧ
ಬಟ್ಟಲಾಗುವುದು
ತುಟಿಯ ಸರಹದ್ದುಗಳ
ದಾಟದಂತೆ ಮನದಾಳದ
ನಿಗೂಢತೆಗಳ ನಿಲುಕದಂತೆ
ತಿಜೋರಿಯಲಿ ಬಂಧಿಸುವುದು

ಮರುಗ ಮಲ್ಲಿಗೆ ಸಂಪಿಗೆ
ಸೇವಂತಿಗೆ ಕೇದಿಗೆಗಳ
ಜೊತೆಜೊತೆಗೇ ಬಣ್ಣ ಬಣ್ಣದ
ಗುಲಾಬಿಗಳನ್ನು ಅರಳಿಸುವ ವನವಾಗುವುದು

ರಹಸ್ಯಕೂಟಗಳ ಮಾಟಗಳ
ಮೈನವರೇಳಿಸುವ
ಮೆಲ್ಲುಲಿಗಳ ಕಚಗುಳಿಯ
ರೋಮಾಂಚನಗಳ ನಿಮ್ಮ
ಊಹೆಗೂ ಸಿಲುಕದಾಗಿಸಿ
ಭದ್ರಗೊಳಿಸಿ ಕೀಲಿಸುವುದು

ಬಿಟ್ಟುಕೊಡಲಾರೆ ಕಣ್ಣಕಾಂತಿ
ಹಳದಿ ಚಂದ್ರನ ಕಾಂತಿ
ದುಂಬಿಗುರುಳಿನ ಕನ್ನೆ
ಮೋಹಕ ಮಂತ್ರದಂಡದ ಚಿನ್ನೆ
ಚಂಚಲತೆಯನ್ನಿಷ್ಟು ಹರಿಣಿಗಿತ್ತವಳು

ಕೆಂದುಟಿಯ ರಾಗ ರಸವನ್ನಿಷ್ಟು
ಬೊಗಸೆಯ ಗುಲಾಬಿಗೆ
ಬಡಿಸಿ ಉಣಿಸಿ ತಣಿಸಿದವಳು

ನವಿಲಿಗೆ ಹೆಜ್ಜೆ ಹೇಳಿ ಕೊಟ್ಟವಳು
ಗಿಳಿಗೆ ಮಾತಾಡ ಹಚ್ಚಿದವಳು
ಋಷಿ ಮುನಿ ಚಕ್ರವರ್ತಿ ಮಾರ್ತಾಂಡ
ಮಂದಿಯೆಷ್ಟೋ ಸೊಬಗ
ಸೋನೆಯ ಸವಿಗೆ
ಮಾದಕ ಚೆಲುವಿನ ಮಧು
ಬಟ್ಟಲಿಗೆ, ಬಿಟ್ಟೋಡುತ ಸಿರಿಗಳ
ಸಾಮ್ರಾಜ್ಯಗಳ ಸಮರ ಕಾಯುತಲೆ
ಸಾವಕೊಂಡವರು; ಬಿಟ್ಟೆಲ್ಲವನು
ಹೆಣ್ಣ ಕನಸಿಗೆ; ಹೆಣ್ಣ ಮುನಿಸಿಗೆ
ಕಣ್ಣ ಸೆಳೆವಿಗೆ ಮನದ ಒಲವಿಗೆ!!

ಅವನ ಹತಾಶೆ ನಿಟ್ಟುಸಿರಲ್ಲಿ
ಆತ್ಮಹತ್ಯೆಯ ಪ್ರಯತ್ನಗಳಲಿ
ಮೂಕ ರೋದನದ ಕ್ಷಣಗಳಲ್ಲಿ
ಒಂಟಿತನದ ಭೂತದ ಸೆಣಸಾಟದಲ್ಲಿ
ಕುಸಿದು ಕುಪ್ಪೆಯಾಗುವಾಗ
ತಂಗಾಳಿಯಾಗಿ ಬೀಸಿ
ಮಂದಹಾಸ ತುಂತುರು ಚೆಲ್ಲಿ
ಮೊಗ್ಗಾದ ಮನವರಳಿಸಿ
ಸಿಗ್ಗಾದ ಒಡಲ ನೇವರಿಸಿ
ಆಸೆ ಕಿಡಿಯ ಹೊತ್ತಿಸಿ
ಬದುಕಿನಂಗಳದಲ್ಲಿ ಪ್ರೀತಿ
ಬೆಳಕನು ಚೆಲ್ಲಿ ಭರವಸೆಯ
ಬಿತ್ತಿದವಳೆ ಹೆಣ್ಣು; ನಾನು!!
ಹೆಣ್ತನದ ರೋಮಾಂಚನಗಳು
ರಹಸ್ಯಗಳು ರಮ್ಯರಾಗಗಳು

ಹೆಣ್ಣಿಗಿತ್ತ ಉಡುಗೊರೆ
ಯಾರಿಗುಂಟು ಯಾರಿಗಿಲ್ಲ!
ಹೆಣ್ಣು ಹೆಣ್ಣಲ್ಲ ಜಗದ ಕಣ್ಣು
ಅವಳೆ ಸೃಷ್ಟಿ; ಅವಳೆ ವಿಶ್ವ!

## ಸಿಟ್ಟಾಗ ಬೇಡ ಶಿವ

ಆದಿ ಅನಾದಿ ಅನಂತ ಅಚಿಂತ್ಯ
ಬಿರುದು ಬಾವಲಿಗಳೆಷ್ಟೋ
ನೀನಿದ್ದೀ ಎಂದು ನಂಬಿಯೆ
ಗಿರಿಗಹ್ವರಗಳಲ್ಲಿ ಕಡಲ ತಡಿಗಳಲ್ಲಿ
ರಣರಣ ಬಂಡೆಗಲ್ಲುಗಳಲ್ಲಿ
ಅಲೆದಲೆದು ಬೇಯುತ್ತಿದ್ದಾರೆ
ಗ್ರೀಷ್ಮಬಿಸಿಲ ಪ್ರತಾಪ ಪ್ರತಾಡನಕ್ಕೆ
ಹೌಹಾರಿ ಹೆದರಿದರೂ ಪಂಚಾಗ್ನಿ
ಮಧ್ಯದಲಿ ನಿನ್ನ ಕಾಣುವ ತವಕಕ್ಕೆ
ಜೋತು ಬಿದ್ದು ಒಂಟಿ ಕಾಲು
ನಿಂದು ಬೆಂದು ಕರೆಕರೆದು
ಕೂಗಿ ಕರಗುತ್ತಲಿದ್ದಾರೆ
ವನವನವು ನೀನೆ ವನದ
ಅಣು ಅಣುವಲ್ಲೂ ನೀನೆ
ಕರೆದರೆ 'ಓ' ಎನ್ನದಿರಲಾರೆ
ಎಂಬ ನಂಬಿಕೆಯಲಿ
ನಿನ್ನಾಗಮನ ನಿರೀಕ್ಷೆಯಲಿ
ನೀ ಕರುಣಿಸಿ ಕರೆವ ವರಗಳ
ಕನಸು ಪುಲಕಗಳ ಪರಿಸೇಚನದಲ್ಲಿ
ಕಾತರಾತುರಗಳ ಕಣ್ಣ ತುಂಬಿಕೊಂಡು
ಜಪಮಣಿಯ ಎಣಿಕೆಯಲಿ
ಕಾಲವಳೆಯುತ್ತಿದ್ದಾರಾದರೂ
ನಿನ್ನ ಜಡನಿದ್ದೆ ಮಿಸುಕಾಡಲೇ ಇಲ್ಲ!
ಕರೆಗೆ ಕಿವಿದೆರೆದು ಬರಲೆಲ್ಲಿದೆ
ಪುರಸೊತ್ತು, ಇಳಿಯುವುದೆಂದು

ನಿನ್ನ ನಿದ್ದೆಯ ಮತ್ತು?
ನಿನ್ನ ಭರವಸೆಯಿಲ್ಲ ನನಗೆ
ಗೋಗರೆದು ಕೇಳಲಾರೆ ನಿನಗೆ
ನನ್ನೊಳಗೆ ನಾನೇ ಬೇರಿಳಿಸಿ
ಬೆಳೆವೆ ಹೆಮ್ಮರವಾಗಿ
ನನ್ನೊಡಲಾಳದಿ ಹರಿವ
ಜೀವರಸವ ಹರಿಸಿ ಹನಿಸಿ
ಹಣ್ಣು ಬೀಜಗಳ ನಾನೀವೆ

ಅಳಿವ ಮುನ್ನವೆ ಆನುವಂಶದ
ಅಭಿವೃದ್ಧಿಗೆ ರಕ್ತಧಾರೆಯೆರದಿ
ಡುವ ಯಾರೂ ಇಲ್ಲದ ಏಕಾಂತವನು ಮುರಿದು
ಸಖ್ಯದ ಸಸಿಗಳ ಸಾವಿರ ಬೆಳೆವೆ

ಎಲ್ಲೆಲ್ಲೂ ನೀನಿರಬಹುದಾದರೆ
ಬಾ ನನ್ನಲ್ಲೂ ಇರಲು ನಿನಗಿದೋ
ನನ್ನದೆಯ ತೆರವುಗೊಳಿಸಿ ನಿಲುವೆ
ನನ್ನ ಹೆಜ್ಜೆಗಳಿಗೆ ನಾನೇ ಕಲಿಸುವೆ
ದಾರಿಗಳ ಹುಡುಕುವ ಪರಿಯ
ನನ್ನ ಅಹಮಿಕೆಯಿದೆಂದು
ಭಾವಿಸಿ ಸಿಟ್ಟಾಗಬೇಡ ಶಿವ
ನಿನ್ನ ಸಿಟ್ಟು ಸುಟ್ಟೀತು ಲೋಕವ!

## ಪ್ರಶ್ನೆಗಳು

ಅನಂತ ಆಕಾಶದ ಎಲ್ಲೆಗಳ
ಶೋಧಕ್ಕೆ ಮಿಟಿವ
ಕಾತರದ ಕಿರುಹಕ್ಕಿಗಳ
ಗರಿಸುಡುವ ಬೆಂಕಿಮೂಲವೆಲ್ಲಿ?

ನಿಲ್ಲದ ಶಬ್ದ ಸಂತೆಗಳಲ್ಲಿ
ಶಾಂತಿ ಮಂಗಳ ಮಂತ್ರಗಳ
ಜಪದ ಕಾಡಿನ ಜಾಡು ಬೀಡು
ಛಲದ ಬಲದ ಬೇರು
ನೆಲೆಯ ಕಾಣದ ಮುಖ
ಯಾವ ದಿಕ್ಕಿಗೆ ಮೂಡಿದೆ?

ಕಮರಿದ ಕನಸುಗಳು
ಶವಾಗಾರದಲ್ಲೂ ಮುಲುಗುವ
ಆಸೆ ಜೀವಗಳು
ಆಘಾತಗಳು ಆತಂಕಗಳು
ಅವಸರದ ದಿಕ್ಕಿಲ್ಲದ ದಿಕ್ಕಿನತ್ತ
ದಿಕ್ಕುಕಾಣದ ಓಟಗಳು
ಅನಿವಾರ್ಯವಾಗುವುದೇಕೆ?

ಜೀವ ಜೀವದೆದೆಗಳಲಿ
ಸಿಡಿವ ಜ್ವಾಲಾಮುಖಿ
ದಾಹಕ್ಕೆ ಪ್ರಾಸವಾಗಿ ಬೂದಿ
ಮರಳ ದಂಡೆಗಳ ನಡುವೆ
ಜಲರೇಖೆಯ ಸುಳಿಯು ಕಾಣದೇಕೆ?

ಸೊಕ್ಕಿದ ಗೂಳಿಗಳ
ತಿವಿತದಲಿ ರಕ್ತ ಹೊನಲು
ತೇಲುವ ಚೀತ್ಕಾರಗಳ
ನಾವೆಗಳು ಹಿಂಡು ದಂಡು
ಅಪ್ಪಳಿಸಿದ ಆಘಾತದ
ಅಲೆಗಳಬ್ಬರದಲ್ಲಿ
ಗೊತ್ತುಗುರಿಯಿಲ್ಲದಲೆವ
ಹತಾಶೆಗೆ ದಿಕ್ಕು ತೋರಲು
ಸಾಗರದೀಪದ ಕಾಂತಿ
ಜ್ವಾಲೆಗಳಿಗೆ ಗರಿಮೂಡಲಿಲ್ಲೇಕೆ?

ಪ್ರೀತಿ ಪ್ರೇಮದ ಫಲವತ್ತಾದ
ಮನುಜನೆದೆಯೊರತೆ ಬತ್ತಿ
ಸೀದು ಕರಿಕಾಗಿ, ಕ್ರೌರ್ಯ
ಹಿಂಸೆ, ರಕ್ತದಾಹಗಳೇ
ಕೊಸರಿ ಸಿಡಿಯುತಿಹವೇಕೆ?

# ಬರಹಗಾರ್ತಿಯ ಬವಣೆ

ಬರೆಯುತ್ತೇನೆ ತಲೆ
ತುಂಬಿ ಎದೆತುಂಬಿ
ಬಿರಿವ ಕ್ಷಣಗಳಲ್ಲಿ
ಬಿಡುವಿಲ್ಲದ ಸಮಯದ
ಸಂದಿಗೊಂದಿಗಳಲ್ಲಿ
ಹಾಗೂ ಹೀಗೂ ಅಡುಗೆ
ಮನೆಯ ಬ್ರಹ್ಮಾಂಡದಲ್ಲಿ
ಅನಂತಾನಂತ ಕೆಲಸಗಳಲ್ಲಿ
ಅತಿಥಿ ಅಭ್ಯಾಗತರ ಸತ್ಕಾರ
ಸಮಾರಾಧನೆ ಸಂಭ್ರಮಗಳಲ್ಲಿ
ಆಫೀಸಿಗೆ ಓಡುವ ಆತುರದಲ್ಲಿ
ನೂರೆಂಟು ಇಕ್ಕಟ್ಟು ಬಿಕ್ಕಟ್ಟುಗಳಲ್ಲಿ
ಬರೆಯದಿರಲಾರದೆ ಬರೆಯುತ್ತೇನೆ

ಬರೆಯುವುದು ಅನಿವಾರ್ಯ
ಕರ್ಮವೆಂದು ಬರೆಯುವುದಿಲ್ಲ
ಬರೆಯುತ್ತೇನೆ ಒಂದೆರಡು
ಕಣ್ಣುಗಳ ಬಯಸಿ
ಹಾಡುತ್ತೇನೆ ಒಂದಷ್ಟು ಕಿವಿಗಳ
ಕೇಳಿಸಲು ಕರೆಸಿ
ಸ್ವಂತಕ್ಕೆ ಬರೆಯುತ್ತೇನೆಂಬ
ಉಢಾಫೆ ನನಗಿಲ್ಲ
ಕಾಳಿದಾಸನೇ ಹೇಳಿದನಲ್ಲ
ಕವಿಯಶಃ ಪ್ರಾರ್ಥಿನಃ – ಎಂದು!
ನನಗೂ ಬೇಕು ನಾ ಹೆರುವ
ಕವನ ಕಥೆ ಹಾಡು–ಗಳ

ಕಂದಮ್ಮಗಳ ಅಂದ ಚಂದವ
ಮೆಚ್ಚುವ ಮುದ್ದಾಡುವ
ಮಂದಿ ವಂದಿ ಮಾಗಧರು

ಹೊಟ್ಟೆಯಲ್ಲಿ ಹೊರಲೆಷ್ಟು
ದಿನ? ಬೇಡವೇ ಬೆಳಕು, ಗಾಳಿ?
ಭ್ರೂಣ ಹತ್ಯೆಯ ಹಿಂಸೆಯಲಿ
ಜರ್ಝರಿತಳಾಗುವ ಬಯಕೆ
ನನಗಿಲ್ಲ ಹೆರುತ್ತೇನೆ!!

ಬರೆ ಬರೆದು ರಾಶಿ ಮಾಡುತ್ತೇನೆ
ಕತೆ ಕವಿತೆ ಕಡತಗಳು
ಬೆಟ್ಟವಾಗಿ ಕಾಲದ ಗಜಗರ್ಭ
ದೊಳಗೆ ಹಾಯಾಗಿ ಮಲಗುತ್ತವೆ
ತಟ್ಟನೊಡೆದ ನೆನಪು ನೋವಾಗಿ
ಕತ್ತಲ ಸೆರೆಯಿಂದೆತ್ತಿ ಒಂದಿಷ್ಟು
ಸೂರ್ಯಪಾನ ಮಾಡಿಸಲೆಂದು
ಪ್ರಕಾಶಕ ಪ್ರಭುಗಳ ಮೊರೆ
ಹೊಕ್ಕು ಬೇಡುತ್ತೇನೆ:

ಮಹಾಶಯ ನಾನು ಬರೆದಿದ್ದೇನೆ
ನೀವು ಬಯಸುವ ಮಾದರಿಗಳನ್ನು
'ಅಡಿಗೆಮನೆ ಸಾಹಿತ್ಯವೇ ಅಲ್ಲ'
'ನಮ್ಮದೆಯ ಅಳಲಿನಾಳ
ಇಲ್ಲಿದೆ: ಮೆದುಳ ಬಲವೂ ಇದೆ!'
– ಎಂದರೂ ಪ್ರಕಾಶಕ ಮಹಾಶಯ
ದೇಶಾವರಿ ನಗೆಯ ನಗುತ್ತಾನೆ
ಪುಂಖಾನುಪುಂಖ ಹೊಮ್ಮುತ್ತವೆ
'ಅರೆರೆ ನಿಮ್ಮಖ್ಯಾತಿಯೇ
ಕೃತಿಯೇ? – ತಿಳಿದಿಲ್ಲವೇ?!
ಆದರೇನು ಮಾಡಲಿ!
ಸರದಿಯಲಿ ಸಾಲುಗಟ್ಟಿ ನಿಂತ

ಶ್ರೇಷ್ಠಾತಿಶ್ರೇಷ್ಠರ ಹಸ್ತಪ್ರತಿಗಳು!
ಬರಿದಾದರೆ ನಿಮ್ಮದೇ ಆದ್ಯತೆ!

ಮತ್ತೊಂದು ಜಾತಿಯ
ಪ್ರಕಾಶಕರಿದ್ದಾರೆ – ಆಟಕ್ಕೆ ಕೂಟಕ್ಕೆ
ದೊಡ್ಡ ದಣಿಗಳ ಖುಷಾಮದಿಗೆ
ಬೊಕ್ಕಸ ಬರಿದಾಗಿಸುತ್ತಾರೆ
ಹತ್ತೆಂಟು ತಿಂಗಳಿಗೆ
ಹೊತ್ತಗೆಗಳ ಹೊರೆಯ
ರಿಲೀಸು ಮಾಡುತ್ತಾರೆ

ಹೆಂಗಸರ ಕೃತಿಗಳಚ್ಚಾಗಲು
ಸಮಸ್ಯೆಗಳು ಸಾವಿರ
ಎದುರಾಗಿ ಕೈಕಟ್ಟಿ ಹೋದಂತೆ
ಆಷಾಢ ಭೂತಿ ತನದಿ
ನಿಟ್ಟುಸಿರು ಹೊಮ್ಮಿಸುತ್ತಾರೆ
ಸಬೂಬುಗಳ ಹೆಡೆಬಿಚ್ಚುತ್ತಾರೆ

'ಹೆಂಗಸರೇ ಬರೆಯಬೇಡಿ'
–ಎಂಬ ಬ್ಯಾನರ್ ಹಿಡಿದು
ಕೂಗಬೇಕೆನಿಸುತ್ತದೆ
ಹೋಳಿ ಹಬ್ಬಕ್ಕೆ ಕಾಮ
ದಹನದ ಕಿಚ್ಚಿನ ಬಸುರಿಗಿಕ್ಕಿ
ಕಡತಗಳ ಸುಟ್ಟು ಬೂದಿಯ
ನಿಮಜ್ಜನಕ್ಕೆ ಮುಂದಾಗ
ಬಯಸುತ್ತದೆ. ಶೋಕ ಸೂತಕ
ದಿನಗಳಲ್ಲಿಯೇ ಉಸಿರಾಡುತ್ತಾ
ಕಾಯುತ್ತೇನೆ: ಕನಸುಗಳ
ಬಿತ್ತುತ್ತಾ, 'ಕಾಲಬರಬಹುದವ್ವ'
ಕೋಗಿಲೆ ಕಾಲಬರಬಹುದೆಂದು
ನನ್ನೆದೆಯ ಕೋಗಿಲೆಯ
ಸಾಂತ್ವನಗೊಳಿಸುತ್ತೇನೆ

# ಪ್ರೇಮ ನಿವೇದನೆ

ಚಂದ್ರಕಾಂತಿ ಬೆಳ್ದಿಂಗಳು
ಹಿಮರಾಶಿಯನೊಟ್ಟಿ
ಕೋಟಿ ಕೈಗಳ ಕುಶಲತೆಯ
ಸೂಕ್ಷ್ಮತೆಗಳ ಹೆಣೆದು
ಅಮರನಗರಿಯ ನಾಚಿಸುವ
ಸೌಧ ಸಂಕೀರ್ಣವನು
ಸಹಸ್ರದಳದಿ
ಕಂಗೊಳಿಪ ಶ್ವೇತ ಕಮಲವನು
ನನ್ನ ನಿನ್ನ ಅಮರ ಪ್ರೇಮದ
ಪತಾಕೆಯೆನಲಿತ್ತೆ ಬಹುಮಾನ
ನಿನಗೆ ಓತಾಜ್ ನನ್ನ
ಪ್ರೇಮಲೋಕದ ಸರ್ ತಾಜ್
ನಿನ್ನಮರ ಸೌಂದರ್ಯ
ದೆದುರಿದೋ ಈ ಆಲಮ್ ಪನಾಹ್

ಸಲ್ತನೇ ಸರದಾರ್
ಶಿರವ ಬಾಗಿಸಿಹನಿದೋ ನಲ್ಲೆ
ಹಿಡಿದಿಹುದು ಜೀವ ನಿನ್ನ
ನೆನಪುಗಳಲ್ಲಿ ನಾ ಬಲ್ಲೆ
ಸೆರೆಮನೆಯ ಕತ್ತಲ ಆವಾಸದಲ್ಲಿ
ನರೆ ಜರೆ ಹೊರೆ ಭಾರದಲ್ಲಿ

ನಿದ್ದೆಯಿಲ್ಲದೆ ಕನಸುಗಳಿಗೂ
ಕಂಗಾಲಾಗಿ ಕಾತರಿಸುತ್ತಾ
ನಿಟ್ಟುಸಿರು ನಿರಾಸೆಗಳಲ್ಲೊ

ಜೀವ ಪಾರಿವಾಳ ಎದೆಯ
ಗೂಡಲ್ಲಿ ಬಂದಿಯಾಗಿ
ಬದುಕಿದೆ ನಿನ್ನ ನೆನಪು ನೆಮ್ಮಿ
ಅವಿಶ್ರಾಂತ ಕ್ಷಣಗಳಲ್ಲಿ
ಆಸರೆಯಾಗಿರಲೆಂದು

ನೀ ಕೊಟ್ಟ ಮುತ್ತು ಮಾದಕಗಳ
ಸ್ಮೃತಿಯ ಕೋಶದಲಿ
ಇರಿಸಿದ್ದೇನೆ ಜೋಪಾನವಾಗಿ
ನೀನುಣಿಸಿ ತಣಿಸಿದ
ಅಧರ ಮಧುರ ಮಧುಪಾನ
ಪ್ರೀತಿಯ ಹುಟ್ಟು ಹೇಗೋ
ದೂಡಿ ಸಾಗಿಸುತ್ತಿದೆ ಕಾಲ
ಪ್ರವಾಹದಲಿ ನನ್ನ ಜೀವನಯಾನ

ಲೋಕ ಲೋಕಗಳಲ್ಲಿ
ಅತಿಲೋಕಗಳಲ್ಲಿ
ಅನೂಹ್ಯ ಕಲಾಸೌಧದಲ್ಲಿ
ಚಿರನಿದ್ರೆಯಲಿ ವಿಶ್ರಾಂತ
ನನ್ನೊಲವೇ ಬಲವೇ
ನನ್ನೊಡಲ ಉಸಿರಲ್ಲಿ
ಅಣು ಅಣುವೂ ನೀನಾಗಿ
ಹರಿವ ನೆತ್ತರಿನ ಕಣ ಕಣದಲ್ಲೂ
ತುಂಬಿರುವ ತಾಜ್ – ಮುಮ್ತಾಜ್
ನನ್ನೊಡಲ ಬೇಗೆಯ ಬೆಂಕಿ
ಸುಳಿಯಲಿಲ್ಲವೆ ಸನಿಹ?
ಕರುಳಕುಡಿಯ ಕ್ರೌರ್ಯ
ಹಿಂಸೆಗಳ ನೇಣಲ್ಲಿ
ಅತ್ತರಲ್ಲಿ ಮುಳುಗೆದ್ದ
ಈ ದೇಹ ನೆತ್ತರಿನ ನಾತದಲ್ಲಿ
ನಾರುವುದು ನಿನಗೆ ಪ್ರಿಯವೆ

ಹೇಳು ನನ್ನೊಲವೆ!
ಜನ್ನತದ ದೇವಿಯೇ
ಮೌನವನು ಮುರಿದೆದ್ದು ಬಾ
ನೀನಿಲ್ಲದ ನಿನ್ನ ನಿರ್ಗತಿಕ
ನಲ್ಲನ ಕೇಡ ನೋಡುಬಾ

ಯಮುನೆಯಲೆಗಳೂ
ಮುನಿದು ಮುಷ್ಕರದಿ
ನಲಿದು ನೆಗೆವುದನ್ನೇ
ಮರೆತಿದೆ ಉದ್ಯಾನದ ಗುಲಾಬಿಗಳೆಲ್ಲ
ಕೆಂಪು ಕಳೆದುಕೊಂಡು
ಎದೆ ಬಿರಿದು ನಗುವುದನ್ನೇ
ಮರೆತಿವೆ ಸೊರಗಿವೆ
ನನ್ನಗಲಿಕೆಯ ಅಳಲಿಗೆ
ಕಟ್ಟಿದ ಗಂಟಲು ಬಿರಿಯದೆ
ಕೋಗಿಲೆಗಳು ಹಾಡನ್ನೇ ಮರೆತು
ಮಲಗಿವೆ ಮೂಲೆ ಸೇರಿ

ಮರೆಯಲಾಗದೆ ಮುಗಿಲು
ಕಂಬನಿ ಮುತ್ತುಗಳ ಹನಿಸಿವೆ
ಆಗೊಮ್ಮೆ ಈಗೊಮ್ಮೆ
ಸ್ತಬ್ದ ನೀರವ ರಾತ್ರಿಗಳು
ಚಂದ್ರ ಕುಂಕುಮವಿಲ್ಲದ
ಬೋಳು ಆಗಸ ಬಯಲು
ಬೆಳಕಿನೆಳೆಗೂ ಬರಗಾಲ
ನೀ ಮಲಗಿರುವ ಸಿತ
ಮಂಚದಲಿಷ್ಟು ಎಡೆ ನೀಡು
ಪ್ರೀತಿ ಬತ್ತಿದ ಈ ನರಕದ
ನಿಟ್ಟುಸಿರಿನಿಂದ ಆಚೆಗೆಳೆದು
ನಿನ್ನ ಪ್ರೇಮಲೋಕದ
ಶಾಹಂಶಾಹಿಯಾಗಲ್ಲದಿದ್ದರೂ

ನಿನ್ನ ಸ್ನೇಹ ಪ್ರೀತಿ ಸೌಂದರ್ಯ
ಗುಲಿಸ್ತಾಂಗಳ ಕಾವಲು
ಭಟನಾಗಿಸು ಇಲ್ಲ ಗುಲಾಮನಾಗಿಸು
ಓ ನನ್ನ ಮಧುವೇ! ವಧುವೇ!!
ಷಹಜಹಾನನ ಪ್ರೇಮ ಬರಹವೇ
ಇದೋ ನಿನಗೆ ನನ್ನ
ಕೊನೆಯ ಸಲಾಮ್
ಖುದಾ ಹಾಫಿಜ್!!

# ಕಲಿತಿದ್ದೇನೆ ಶಿಲಾಶಾಸನಗಳಿಂದ

ನಿನ್ನ ತಿರಸ್ಕಾರ
ಅಹಂಕಾರ ಕೆರಳಿ ಕೆದರಿ
ಶಾಂತ ಸರೋವರದಲ್ಲಿ
ತಳದಾಳವನ್ನೂ ಕದಡಿ
ರಾಡಿ, ಮಾಡಿದರೂ
ನಿನ್ನ ಬೆನ್ನಿಗೇ ಆತು
ನಿನ್ನೆ ಹೆಜ್ಜೆ ಪಥದಲ್ಲಿಯೇ
ಹೆಜ್ಜೆಯಿರಿಸಿದ್ದೇನೆ
ತಲೆಮಾರುಗಳ ಶಿಲಾಶಾಸನಗಳಿಂದ!

ತುಳಿದಷ್ಟೂ ಸಿಡಿದೆದ್ದು
ಸ್ಫೋಟಗೊಳ್ಳದೆ ಆವಿಯಾಗಿ
ಮುಗಿಲಾಗಲು ಮುಂದಾಗುತ್ತೇನೆ
ಕಿನಿಸಿದಷ್ಟೂ ಕನಸುಗಳೊಳಗೆ ಜಾರಿ
ನನ್ನದೊಂದು ಕಾಮನ ಬಿಲ್ಲಿನ
ಪುಟ್ಟಲೋಕವೊಂದನ್ನು
ಕಟ್ಟಿಕೊಂಡು ಕನಸುಗಳಲ್ಲಿ
ಉಸಿರಾಡುತ್ತೇನೆ
ಕಿಡಿನುಡಿಗಳ ದಾವಾನಲ
ದಲ್ಲಿ ಉರಿದು ಬೂದಿಯಾಗಿಸಿದರೂ
ಬೂದಿಯೊಳಗೂ ಬದುಕುವಾಸೆಯ
ಹಸಿರಾಗುಳಿಸಿಕೊಂಡು
ಭಗೀರಥನ ಬರವಿಗೆ
ಕಲ್ಪ ಕಲ್ಪಗಳವರೆಗೂ
ಕಾಯುವುದನ್ನೂ ಸುಖಿಸುತ್ತೇನೆ

ಮೊಳೆತೊಡೆವ ಉಲ್ಲಾಸ
ಭಾವಗಳ ಕುಕ್ಕಿಕೊಲೆಗೈದರೂ
ಕಣ್ಣ ಆರ್ದ್ರತೆಯಲಿ ಕೆಂಡಗಳ
ತಣಿಸಿ ನಿನ್ನ ಬಂಜರು
ಭಾವಕ್ಕೆ ವಿಷಾದಿಸುತ್ತೇನೆ
ಮರುಕದಲಿ ಮುಸಿ ಮುಸಿ
ನಕ್ಕು ಹಗುರಾಗುತ್ತೇನೆ

ಬದುಕು ಹಾದಿಗಳ ಮುಚ್ಚಿ
ಆಸೆಕಿರಣಗಳ ಕೊಚ್ಚಿ
ಗಂಡು ಗರ್ವದ ಗದೆಯ
ಘಾತಗಳಿಂದ ಮಣಿಸುವ ನಿನ್ನ
ಹುನ್ನಾರಗಳ ಮರೆತು
ಮೌನ ಶಾಂತತೆಯಲ್ಲಿ
ಮುದಗಳ ಕಡೆದುಕ್ಕಿಸಿ
ಉಂಡು ಸವಿಯುತ್ತೇನೆ

ನಿತ್ಯ ನೇಮದ ತೆರದಿ
ಸಿಡಿವ ಸ್ಫೋಟಗಳು
ಮಳೆಗರೆವ ಕೆಂಡಗಳು
ಬಿರುಗಾಳಿಯ ಪ್ರತಾಡನಗಳು
ಇದ್ದದ್ದೇ ಆದರೂ
ನಡು ನಡುವೆ ಅಪರೂಪಕ್ಕೆ
ಅರಳುತ್ತಿದ್ದ ನಗೆ ಮಲ್ಲಿಗೆ ಕಂಪು
ಮಂದ ಗಾಳಿಯ ತೆರದ
ನಿನ್ನುಸಿರ ತಂಪು
ಬಾಹು ಬಳ್ಳಿಯ ಬಂಧನದಲಿ
ಕೊನರಿದ್ದ ಶೀತ ಚಂದನ ಪುಲಕ

ತುಟಿ ಬಿರಿದು ಒಡೆದೆದ್ದ ಕವಿತೆ
ಪ್ರೀತಿಗಳ ನೆನೆ ನೆನೆದು

ಅಗ್ನಿರಸ ಚಿಲುಮೆಗಳನ್ನು
ಬತ್ತಿಸುತ್ತೇನೆ; ಹೊತ್ತಿಸುತ್ತೇನೆ
ಹೊಂಬೆಳಕಿನ ನಕ್ಷತ್ರ ಹಣತೆಗಳ
ಸಿಡಿಲ ಹಕ್ಕಿಯ ರೆಕ್ಕೆಗಳ ನೇವರಿಸಿ

ಪ್ರೀತಿ ಸಂಕೋಲೆಗಳಲ್ಲಿ
ಮುದಗೊಳಿಸಿ ಜೋಗುಳವ
ಹಾಡುತ್ತೇನೆ; ಹಾಡಿ ತೂಗುತ್ತೇನೆ

ಓ ಪ್ರಿಯತಮನೆ ನೀನೇನಾದರೂ
ನೀನು ನನ್ನೆದೆಯ ಶೂನ್ಯವನು
ತುಂಬಿ ತಣಿಸಿದವನು
ನೂರು ರೋಷದ ನಡುವೆ
ತೋಷ ಕುಸುಮವನೊಂದಾದರೂ
ಅರಳಿಸಿದ ಆ ಕ್ಷಣಗಳಿಗಾಗಿ
ಉರುಬಳಿದು ಸೊಕ್ಕಿಳಿದು
ಕೆಂಡಗಳ ಕಾವಿಳಿದು
ಮಂಜುಗಟ್ಟಿ ನಡೆಯಲಾಗದೆ
ನಡೆಯುವಾಗ ನಿಲ್ಲುತ್ತೇನೆ
ನಿನಗೊಂದು ಊರು ಗೋಲಾಗಿ
ನನ್ನ ನೋವುಗಳನ್ನು ನಿನ್ನ
ನೆಮ್ಮದಿಯ ಪಯಣಕ್ಕೆ
ಗುಲಾಬಿಗಳಾಗಿ ಅರಳಿಸಿ ಅರಳಿಸಿ
ಹಾಸುತ್ತೇನೆ ನೀನಡೆವ ಹಾದಿಗಳಲ್ಲಿ
ಹೆಜ್ಜೆಯಿರಿಸುತ್ತೇನೆ ನಿನಗೆ
ಎದುರಾಗುವ ಮುಳ್ಳು ಕಂಟಿಗಳಲ್ಲಿ

ನಿರ್ವೀಯತೆಯ ನಿಟ್ಟುಸಿರಲ್ಲಿ
ಕನಲಿ ಕುಸಿದಿದೆ ಒಲವು
ಸವಿಯ ಸಂಗೀತ ಸ್ಪರ್ಷವಿಲ್ಲದ
ಒಲವಾಂತು ಇರಬಹುದೆಂತು?

ಸಖ್ಯ ಸಾಂಗತ್ಯಗಳ ಮಧುರ
ಕನಸುಗಳ ನೆಮ್ಮಿಕಾದಿದ್ದೇನೆ
ಹೂ ಮರ ಗಿಡ ಬಳ್ಳಿಗಳ
ಪಿಸು ಮಾತುಗಳಲ್ಲಿ ನಿನ್ನ
ದನಿ ಅರಸುತ್ತಿದ್ದೇನೆ
ಮಂದ ಗಾಳಿಯ ಹೆಜ್ಜೆಲಯಗಳ
ಹುಡುಕಿ ಹೆಣೆಯುತ್ತಿದ್ದೇನೆ
ನಿನಗೊಂದು ಕವಿತೆ
ನಿನ್ನ ಬರವಿನ ಆಸೆ ಕಿರಣದ
ಕಿಡಿಯಿಂದ ಹಚ್ಚುತ್ತಿದ್ದೇನೆ
ಭರವಸೆಯ ಬಾಳ ಹಣತೆ

ಬದುಕು ಬಂಜರು ನೆಲದಲ್ಲಿ
ನೆನಪಿನ ಹಸಿರ ಹಾಸಿದ್ದೇನೆ
ಮುರುಕು ಗುಡಿಸಲ ಮುಂದೆ
ಮಧುರ ಭಾವ ರಂಗೋಲಿಯ
ಬಿಡಿಸಿ, ನಯನ ನಂದಾ ದೀಪಗಳುರಿಸಿ
ಕಾದಿದ್ದೇನೆ; ಕನವರಿಸಿದ್ದೇನೆ ಬರುವೆಯಲ್ಲವೆ ನಲ್ಲ ಕರ್ಬುವಿಲ್ಲ!!

# ಆಸೆಗಿಲ್ಲ ಎಲ್ಲೆ

ಇದ್ದಷ್ಟೂ ಇನ್ನಷ್ಟು ಬೇಕು
ಇದ್ದುದು ಬಿಟ್ಟು ಇಲ್ಲದ್ದು ಬೇಕು
ಕೈಗೆಟಕದ್ದು ಕಾಲ ವಿಧಿಸಿದ್ದು
ಮೀರಿ ತುಡಿವ ಮನಸು
ಕರೆದು ಕೈ ಚಾಚಿ ಹಿಡಿವ ಕನಸು

ಬೆಂಕಿ ಬೂದಿ ಎದೆಯ ತುಂಬ
ಉರಿವ ಹಿಂಸೆ ಗ್ರೀಷ್ಮಗೆ
ಚೈತ್ರ ಮಧುರ ಸವಿಯ ಬಯಕೆ
ಸಾಗುವಾಸೆ ಹೂತ ವನಕೆ
ಅರಳುವಾಸೆ ಪುಲಕಕೆ

ಅಂಕು ಡೊಂಕು ಹರಿದು ಸರಿದು
ಹಳ್ಳವಳಿದು ಗುಡ್ಡವೇರಿ
ಏಳು ಬೀಳು ಹಾಳು ಹೆಜ್ಜೆ
ದಣಿದು ಮಣಿದು ಬೇಸರಾಗಿ
ನೇರ ಹರಿವ ಕನಸು ಹೊಳೆಗೆ

ಹೆಜ್ಜೆಭಾರ ಬೆಟ್ಟ ಬೇತಾಳ
ಪುಂಡು ಪೋಕರಿಗಳೆಸೆದ ಹೊಲಸು
ಬೇರಿಳಿಸಿಕೊಂಡು ಎದೆ ಛಿದ್ರ
ಹೆಣಗಳ ನುಂಗಿದ ವಾಕರಿಕೆ
ಕಳೆದೊಮ್ಮೆಬುವಿಗೆ ಬಾನಾಗುವಾಸೆ
ಇದ್ದಲ್ಲೇ ಇದ್ದು ಕಾಡಿದ ಹೆಳವ ಭಾವ
ಕಲ್ಲುಬಂಡೆ ಕಾಯದಲಿ ಹೆಪ್ಪಾದ ಉಸಿರು

ಮುಗಿಲಾಮೋದಗಳಿಗೂ ತತ್ವಾರ
ಶಪಿತ ಅಹಲ್ಯೆಯಾಗಿ ನಿಂತ ಗಿರಿ
ಯೆದೆಯಲ್ಲಿ ಚಿಗುರೊಡೆದಿದೆ ಹಕ್ಕಿಯಾಸೆ

ಯಾವ ಊರೋ ಯಾವ ಕಾಡೋ
ಯಾವ ಕತ್ತಲ ಬಸಿರಿನಾಳದಿ
ಇದ್ದು ಬಂದವಳೆದೆ ತುಂಬ ಕನಸು
ಹಸಿರುಸಿರ ನೆಲ ಬಗೆದು ಮುಗಿಲಿಗೂ
ಮಿಗಿಲಾಗಿ ಆದಿ ಅನಾದಿಗಳ ಹಿಡಿವ ಬಯಕೆ

# ಸಮರ್ಥನೆ

ಗೋರಿಗೊಂಡ ಕನಸುಗಳು
ಮುಕ್ತ ಆಕಾಶದಲ್ಲಿ ಗರಿಪಡೆದು
ನಲಿದಿವೆ; ಹಾರಿ ಹಾರಿ ಅಳೆದಿವೆ
ಅಡುಗೆ ಮನೆ ಅಂತಃಪುರಗಳು
ಕೇಳಿಸಿಕೊಳ್ಳುವುದಿಲ್ಲ ನಮ್ಮ
ನೋವು ನಿಟ್ಟುಸಿರ ಕವಿತೆಗಳನ್ನು
ಕುದಿಕುದಿದು ಕತ್ತಲೆಯ
ಗಹ್ವರಗಳಲ್ಲಿ ಕಣ್ಣುಮುಚ್ಚಿ
ಹಲ್ಲುಕಚ್ಚಿ ನಿಲ್ಲುವ ಬಂದಿಗಳಲ್ಲ
ನಿಮ್ಮಂತೆ ನಮಗೂ ಬದುಕಿದೆ;
ಕನಸಿದೆ; ಕಾಮನೆಯಿದೆ
ಒಡಲಿಗೆ; ಒಡಲಿಗಂಟಿದ
ರುಚಿಗಳೂ ಇದ್ದೇ ಇವೆ!
ಅಪ್ಪನಧಿಕಾರದಂಕುಶದ ಭೀತಿ
ಅಮ್ಮನಕ್ಕರೆಯ ಸೆರಗಿನ
ಮರೆಯ ನೀತಿ ಪಾಠಗಳು
ಪುರುಷಹಂಕಾರದ ಸರಳುಗಳ
ಯಾತನೆಗೆ ವಿದಾಯ ನುಡಿದಿದ್ದೇನೆ

ಹೆರುವ ಯಂತ್ರಗಳಲ್ಲ
ದಾಹದಾಟಗಳ ದಾಳಗಳಲ್ಲ
ನದಿಗಳಾಗಿ ಹರಿದು ಕಡಲುಗೊಂಡವರು
ಕಿಡಿಗಳಾಗಿ ಸಿಡಿದು ಜ್ವಾಲೆಯಾದವರು
ನೋವು ನಂಜುಗಳಲ್ಲಿ ಕುದಿದು
ಬಲಗೊಂಡವರು ಹುರಿಗೊಂಡವರು

ನಮ್ಮ ಬದುಕಿನ ಭಾಗ್ಯರೇಖೆಗಳ
ನಾವೇ ಬಿಡಿಸಿ ನಲಿವುಗೊಂಡವರು
ಕಾಮಪ್ರೇಮದ ಕವಿತೆಗಳ
ಸೊಲ್ಲಿಗೆ ಸೋಲುವುದಿಲ್ಲ ಇನ್ನು
ನಯದ ಬಣ್ಣಗಳ ಬಣ್ಣಿಸೆ
ಬೇಕಿಲ್ಲ ಮೈಮರೆಯಲು
ಸೀತೆ ಸಾವಿತ್ರಿ ಪತಿವ್ರತೆಯರ
ನಿಟ್ಟುಸಿರಿನ ಪಾಠಗಳ ಕಲಿತಿದ್ದೇವೆ
ಮಾತು ರೀತಿ ಪಾತ್ರಗಳಿಗೆಲ್ಲ
ಹೊಸ ಭಾಷ್ಯಗಳ ಬರೆಯುತ್ತೇವೆ
ಹೊಸ ನಾಟಕಗಳ ರೂಪಿಸುತ್ತೇವೆ

ಅಳುವುದಿಲ್ಲ ಅಳುಕುವುದಿಲ್ಲ
ಎದೆ ತೆರೆದು ಎದುರಾದ
ಬಂಡೆಗಳ ಢೀ ಕೊಟ್ಟು ನಿಲ್ಲುತ್ತೇವೆ
ಬುವಿಬಾನು ನಕ್ಷತ್ರ
ಚಂದ್ರ ಸೂರ್ಯರನೆಲ್ಲ
ನಮ್ಮುದರದಲ್ಲಿ ಧರಿಸಿ ಬೆಳೆಯುತ್ತೇವೆ
ಬೆಳೆ ಬೆಳೆದು ದಿಗಂತದಾಚೆಯ
ಗಡಿಗಳನ್ನು ದಾಟಿ ತುಂಬುತ್ತೇವೆ
ಹಂಗುಗಳ ಹಂಗಿಸಿ ಹಿಂಗಿಸಿ
ವಿಶ್ವರೂಪಿಣಿಯರು ನಾವಾಗುತ್ತೇವೆ
ಕೆಂಡದುಂಡೆಗಳ ಕರಗಿಸಿ
ಬೆಂಕಿ ಹೂಗಳಾಗಿ ಅರಳಿ ನಿಲ್ಲುತ್ತೇವೆ

## ಅಳಲು

ಸರಸವೇ ಜನನ ವಿರಸ ಮರಣ
ಸಮರಸವೇ ಜೀವನ
ಎಂದ ಕವಿ ಸಾಲುಗಳೂ ಗೋರಿಯಾಳದಲಿ ಸದ್ದಡಗಿ
ಮೌನ ಬಿಕ್ಕುಗಳಲ್ಲಿ ಮುಗಿದಿವೆ

ಮುಗಿಲ ಮುನಿಸು
ಕಡಲ ಸ್ಫೋಟ ನಕ್ಷತ್ರ
ಲೋಕದಲಿ ಹೊತ್ತಿ
ಉರಿದೆದ್ದಿದೆ ಕ್ರಾಂತಿ ಗೀತೆ
ನಕ್ಕು ನಲಿದು ಸ್ನೇಹ ಗಣಿತದಲಿ
ಹೆಣೆದಿದ್ದ ನೂರಾರು ಸಾವಿರಾರು
ಹೂ ಬಣ್ಣಗಳು ಏನಾದವು?
ರೇಶಿಮೆಯ ಮೆದುತನದ
ಎದೆಯಲ್ಲಿ ಕುದಿ ಪಂಜು
ಭಾವ ಬಿಸುಪನು ನುಂಗಿ
ನೊಣೆವ ಸಾವಿನ ಭೂತದ ನೆರಳು

ಅಡ್ಡ ಗೋಡೆಗಳೆದ್ದು
ಆಪ್ತತೆಯ ಬೆಸುಗೆಗಳು ಬಿರಿದು
ಮನಸುಗಳು ಮುರಿಮುರಿದು
ಹೋಳು ಸಾವಿರವಾಗಿ
ಕನಸುಗೊಂಡು ಕಟ್ಟಿದ್ದ ರಾಮ
ರಾಜ್ಯದೊಳಗಿಂದ ಹೊಗರೆದ್ದಿದೆ
ಸಾವು ಸೂತಕ ಗಂಧ
ಹೊರಹೊಮ್ಮಿವೆ ಅಕರಾಳ
ವಿಕರಾಳ ಭಾವ ರಕ್ಕಸ ಪಡೆ

ನಗುವ ನಂದನಕಿಂದು
ಜ್ವಾಲೆ ಹೆಡೆಗಳಪ್ಪಳಿಸಿ
ಖಾಂಡವದ ಕತೆಗಳೇ ಮತ್ತೇ
ಮತ್ತೇ ಪುನಾರವರ್ತಿಸಿ
ವ್ಯಕ್ತಿ ವ್ಯಕ್ತಿಗಳನ್ನೂ ಶೂಲವಾಗಿಸಿ
ಚಪ್ಪಾಳೆ ವಿಕಟಾಟ್ಟಹಾಸಗಳ
ಮದ್ದಳೆಯ ಹಿನ್ನಲೆಯಲ್ಲಿ
ಹಿರಿಹಿರಿದು ಹಿಗ್ಗುತಿಹ
ಸ್ವಾರ್ಥ ರಾಕ್ಷಸ ನೆರಳು
ಯಾವ ಟೊಂಗೆಯ ಕೆಳಗೆ
ಹೇಳು ಕನಸೇ? ಉಲಿವ ಮನಸೇ?

ಕೋಟಿ ಕೋಟಿ ಎದೆಗೂಡುಗಳಲ್ಲಿ
ತಿಳಿ ಬೆಳಕು ತಂಬೆಳಕು
ಸುರಿವ ಕಿರುಹಣತೆಗಳೆ
ಅಲ್ಲಾಮುಲ್ಲಾ – ರಾಮ –ಶಾಮ
ಕೂಗಿನುದ್ರೇಕಕ್ಕೆ ಕೊಳ್ಳಿ
ದೆವ್ವಗಳಾಗಿ ಸುಡಲುಬಹುದೆ?

ಹೂವು ಮೊಗ್ಗು ಹಣ್ಣುಕಾಯಿ
ಗಿಡ ಮರ ಗಿಳಿ ಕಾಜಾಣ
ಕೋಗಿಲೆಗಳ ಕಬಳಿಸಿ ರುದ್ರ
ಭೂಮಿಯ ವೇದಿಕೆಯಲಿರಿಸಿ
ಶಿಸ್ತಿನ ಕವಾಯತಿಯಲ್ಲಿ
ಹೊಮ್ಮಿದೆಯೊಂದು ಶೋಕ ಗೀತೆ
ಸ್ವರಸಂಗತಿಯಲ್ಲಿ ಕೇಳಿ
ಬರುತಿದೆ ಅಪಸ್ವರದ ಅವಾಂತರ
ತಣ್ಣನೆ ಹರಿವ ಯಮುನೆಯ
ಅಂತರಾಳದಲ್ಲಿ ಕಾಲಕೂಟ ವಿಷ
ತುಳಸಿ ಕಟ್ಟೆಯ ತುಂಬೆಲ್ಲ
ಮುಳ್ಳು ಕಂಟಿಗಳೇ ರಾಶಿ ರಾಶಿ!

ಕೃಷ್ಣ ಕೊಳಲಿಂದ ಧುಮ್ಮಿಕ್ಕಿದೆ
ಸಮರ ಕಹಳೆಯ ಮೊಳಗು
ರಾಮ ಕುಂಡ ಹೋಮ ಕುಂಡಗಳು
ಸಿಡಿದಾಗಿವೆ ಅಗ್ನಿ ಬೆಟ್ಟಗಳು
ಅಮ್ಮನೆದೆಯಲಿ ನಾಟಿವೆ
ಕೋಟಿ ಕೋಟಿ ಚೂರಿ ಚಾಕುಗಳು
ಅಳಲ ರಕ್ತದ ಚಿಲುಮೆಯೊಡೆದು
ಬುವಿಬಾನು ಬನವೆಲ್ಲ
ಕೆಂಪು ಕಡಲು!

ಬೆಳ್ಳಿ ಬೆಳಗುಗಳು
ಮಿಂಚು ಥಳಕುಗಳು
ನಮ್ಮ ಪಾಲಿನ ಕನಸಿಗೂ ಸೊನ್ನೆ
ಯಾಗಿರಲು ಭಾವ ಬೆಸುಗೆಯ
ಕವಿತೆಯೊಡೆದು ಮತ್ತೊಮ್ಮೆ
ಅರಳುವುದೆ ಸೊಗದ ಹೂವು?
ವಸಂತ ವೈಭವದ ಉತ್ಸವದಿ
ಕೋಗಿಲೆಯ ಕೊರಳಿಂದ
ಕೂಜನದ ಸವಿಯೂಟ ಸೌಭಾಗ್ಯ
ನಮ್ಮದಾಗುವ ಕ್ಷಣ
ಕಾಯಬಹುದೇನು?

# ಮರೆತು ಹೋಯಿತೆ ನಾ ಹಾಡಿದ ನಾಂದಿ

ಕೈಲಾಸದಲ್ಲಿದ್ದರೂ ಕಾರಣಿಕ
ಬಸವನಿಗೆ ಮರ್ತ್ಯದ ಚಿಂತೆ
ಮನದ ಮೂಲೆಮೂಲೆಯಲ್ಲೂ
ಮುಳ್ಳೆದೆದ್ದಿದೆ ನೋವಿನ ಸಂತೆ
ಬಡಿಯುತ್ತಿದೆ ಮೂಗಿಗೆ ಹನಿ
ಹನಿಯುತ್ತಿಹ ಹಸಿ ರಕ್ತ ಗಂಧ
ಚಡಪಡಿಸಿತು ಮನ ಕ್ಷಣ
ಮರೆಯಿತು ನಂಬಿದ ಘನ

ಎದೆಯಿರಿದಿದೆ ಆರ್ತದ ಕರೆ
ತಲ್ಲಣ ತಳಮಳಕಿಳಿಯಿತು ಪೊರೆ
ನಿಲ್ಲಲಾಗದು ಇನ್ನಿಲ್ಲ ಮತ್ತೆ
ಮರ್ತ್ಯದೆಡೆಗೆ ತುಡಿದಿದೆ ಹೆಜ್ಜೆ
ನೋಡಬೇಕಿದೆ ನನಗೆ ನಾ ಕೊಟ್ಟ
ನೀತಿ ಪಾಠಗಳ ಪ್ರೀತಿ ರೀತಿಗಳ
ಅನಿಸುತ್ತಿದೆ ಎಳೆ ತಪ್ಪಿದೆ ಎಲ್ಲೊ
ದೌಡಾಯಿಸಿರಬೇಕು ಶಾಂತಿ ಮಂತ್ರಗಳೆಲ್ಲೊ

ಉಗ್ರಭೀತಿಗಳು ಸಮರ
ಸಂಚುಗಳು ಕೋಮು ಸ್ಫೋಟಗಳು
ನಿತ್ಯ ನಿರಂತರ ಬದುಕಿನ ರೀತಿ
ಭೈರವ ನರ್ತನ ಕರ್ಕಶ ದನಿಯಲಿ
ಕೇಳದಾಗಿದೆ ಜೀವ ಜೀವದ ಪ್ರೀತಿ
ಸ್ವಾರ್ಥಕೆ ಹಣದಾಹಕೆ ಇಲ್ಲ ವಿರಾಮ
ಸಿರಿವಂತರಿಗಿದೆ ನಿತ್ಯನಿರಂತರವಾರಾಮ

ಬೆನ್ನಿಗಂಟಿದ ಹೊಟ್ಟೆಯ ಮಂದಿ
ಉಸಿರ ಹಿಡಿದಿಹರು ಆಯುತ ಚಿಂದಿ
ಮರೆತು ಹೋಯಿತೆ ನಾ ಹಾಡಿದ ನಾಂದಿ
ಸಂಗಯ್ಯ ಸಂಗಯ್ಯ ಕೂಡಲ ಸಂಗಯ್ಯ
ಕಳಿಸಿಕೊಡು ಮತ್ತೊಮ್ಮೆ ಮರ್ತ್ಯಕ್ಕೆ ನನ್ನ
ಭಾವ ಬಂಜರಾದ ಬದುಕುಗಳಲ್ಲಿ
ಪ್ರೀತಿ ಸ್ನೇಹಗಳ ಕಾರುಣ್ಯ ಬೀಜಗಳ
ಬಿತ್ತಿ ಬರುವೆ
ನಗೆ ಚಿಮ್ಮಿಸಿ ಹಸಿರುಕ್ಕಿಸಿ
ಹನಿವ ಕಂಗಳಿನ ಕಂಬನಿಯೊರೆಸಿ
ಆಸೆ ಹಣತೆಗಳ ಹಚ್ಚಿ ಬರುವೆ
ಭೀತಮನಗಳಿಗೆ ಅಭಯವಿತ್ತು ಬರುವೆ

ಸವೆಯುತಿರೆ ನೋಯುತಿರೆ
ಹಸಿದು ಕಂಗಾಲಾಗಿ ಅಸುವ
ನೀಗುತಿರೆ ಉಸಿರುಗಟ್ಟುತ
ಬಾಳ ಪಯಣದ ಹಾದಿಗಳಲ್ಲಿ
ಸಾವ ಸಂಗದಿ ಸೆಣಸಿ ಸಾಗುತಿರೆ
ಜಾತಿ ಜಗಳಗಳು ಕೋಮು ಕಲಹಗಳು
ದುಶ್ಚಟದ ಕೂಟಗಳು ದೌರ್ಜ್ಯನದಾಟಗಳು
ಕಾವಿ ಮರೆಯಲ್ಲೂ ನಡೆವ ಕಾಮದಾಟಗಳು

ಮಠ ಮಂದಿರಗಳಲ್ಲೂ ಭೂಗತರ
ಕೂಟಗಳು ಅಗಣಿತ ಬೇಟಗಳು
ಚೀರುತಿದೆ ನನ್ನಾತ್ಮ ಸುಮ್ಮನೆಂತಿರಲಯ್ಯ?
ಕಳಿಸಿಕೊಡು ವೇಗದಲಿ ಮರ್ತ್ಯದೆಡೆಗೆ
ಸಾಂತ್ವನದ ಚಿಲುಮೆಗಳನುಕ್ಕಿಸುತಲಿ
ಕೊಳಕು ಕಸಕಡ್ಡಿ ನಾತಗಳ ರಾಶಿಯನು
ಗುಡಿಸಿ ಬರುವೆ ನಿನ್ನ ನಾಮವನಲ್ಲಿ
ಮತ್ತೊಮ್ಮೆ ಮರೆದಿರಲು ಬಿತ್ತಿ ಬರುವೆ

# ಶಬ್ದ ಸಾಗರನದೊಂದು ಶಬ್ದ ಚಿತ್ರ

ಅಹಹಾ! ಎಂಥ ಮೋಡಿಯ ನಗೆ
ಈ ತೊಂಬತ್ತೆಂಟರ ನವಯುವಕ
ಹೊರಟಿದ್ದಾನೆ ಚೈತನ್ಯ ತೇರಿನಲಿ ವೈಹಾಳಿ
ಕೋಟಿ ಅನುಭವಗಳ ಕೋದ
ಎದೆಹಾರ ಸಿಂಗಾರ ಸಾಗಿದೆ ಮೆರವಣಿಗೆ

ಮೂರೋ ನಾಲ್ಕೋ ಅಡಿಯ
ವಾಮನ ದೇಹದಲಿ ನಡೆದಿದೆ
ತ್ರಿವಿಕ್ರಮ ಸಾಹಸಗಳ ಸಾಕ್ಷ್ಯ
ಚಿತ್ರದ ಸರ್ಕರಾಮ ಆರಾಮ
ಎಣಿಸುವುದೇ ಸಾಹಸವಿವನ
ಸಾಧನೆಯ ಮೈಲಿಗಲ್ಲುಗಳ ರಾಮ! ರಾಮ!

ಹೂನಗೆಯ ನಡುವೆ ಫಳಕ್ಕನೆ
ಹೊಳೆವ ದಂತ ಕಿರಣದ ಸಾಲು
ಸುಕ್ಕುಗಳ ಮೆಟ್ಟಿ ಚಿಗಿದೆದ್ದ ತಾರುಣ್ಯ
ಕಾಂತಿಯೊಡಲಿನ ರೇಶಿಮೆಯ ನುಣುಪು
ಸವಾಲು ಸುರಗಿಗಳಿಗೆ ಎದೆಯೊಡ್ಡಿ ಪ್ರತಿ
ಸವಾಲಿಗೆ ನಿಲುವ ಪೈಲ್ವಾನನ ಭಂಗಿ

ಮಾತು ಮಲ್ಲಿಗೆ ಹಗುರ ಶುಭ್ರ
ಅಂತರ್ಯದರ್ಥ ಎಷ್ಟೊಂದು ಗಂಭೀರ
ಅಳುಕಿಲ್ಲದ ದಿಟ್ಟ ಹೆಜ್ಜೆಗಳ ಧೀರ
ಬಳಸು ಹಾದಿಗಳ ಬಿಟ್ಟು ನಡೆವ ನೇರ
ಪಕ್ವದನುಭವಗಳ ಫಲದ ಸಾರ

ನಿಘಂಟುಗಳ ಬಿಚ್ಚುತ್ತಲೇ
ಅರ್ಥಲೋಕದದ್ಭುತಗಳ ತೆರೆದಿಡುವ
ಮಂತ್ರದಂಡವಾಗಿ ಸಾಹಿತ್ಯ ಲೋಕದ
ಶಬ್ದಾರ್ಥಗಳ ಸಾವಿರ ಸರದಾರನಾದ
ಶಬ್ದಸಾಗರಯಾನದ ಕೊಲಂಬಸ್
ಅರ್ಥಪ್ರವಾಳ ದ್ವೀಪಗಳ ಶೋಧ ಕಿರೀಟಿ

ಎದೆಯೊಂದು ಪ್ರೀತಿ ಸ್ನೇಹಗಳ
ಅಕ್ಷಯ ಭಾವಕೋಶ
ಧಾರಾಳ ಧಾರೆಯೆರೆದರೂ ಬತ್ತದೆ
ಉಕ್ಕುಕ್ಕಿ ಹರಿವ ಜೀವನದಿಗಳ ಸಂಗಮ
ನಿಷ್ಠುರ ನುಡಿಗಳೂ ಶ್ರುತಿಬದ್ಧ ಸರಿಗಮ
ಮುಖವಾಡದೊಳಗೂ ಹೊರಗೂ
ಶಾಂತ ಸೌಮ್ಯ ಬುದ್ಧ ಚಹರೆಯ ನೆನಪು

ಅಲ್ಲಿ ಇಲ್ಲಿ ಎಲ್ಲೆಲ್ಲಿಯೂ
ಇವನದೇ ಛವಿಯ ಮುಗಿಲ ಕೊಡೆ
ಸಲಿಲತರಲತೆಯಲ್ಲಿ ಸಾಗುವ ನಡೆ
ಸೊರಗಿ ದಣಿಯದ ದೇಹ
ಸಂತೃಪ್ತಿ ಸಾರ್ಥಕ್ಯ ಸಾನಂದ ದೇಹ
ಯಾವ ಶಕ್ತಿ ದೇವತೆಯ ಹಸಾದವೋ
ಹರಯದುತ್ಸಾಹ ಚೈತನ್ಯ ಚಿಲುಮೆ
ಇವನ ಹೆಡೆಮುಡಿಗಿರಲಿ ನಮ್ಮ ಒಲುಮೆ

ಪ್ರಶಸ್ತಿ ಗರಿಗಳ ಮುಡಿದ ಮಹಾನುಭಾವ
ಮುಗಿಲ ತಬ್ಬಿದೆಯಿವನ ವಿಧ್ವತ್ಪ್ರಭಾವ
ಈ ಪುಟ್ಟ ಪಟ್ಟ ಮಹಾಶಬ್ದಸಾಮ್ರಾಟ
ನಡೆಸುತ್ತಲೇ ಸಾಗುತ್ತಾನೆ ಶಬ್ದಾರ್ಥಗಳ
ಜೊತೆಗೆ ಒಡನಾಟ ಜೂಜಾಟ
ನಿತ್ಯವಸಂತಗಳ ಸೊಗದ ಬಾಳಿನಲಿ
ಸಹಚರಿಯ ಪ್ರಣಯ ಗೀತೆಗಳಲ್ಲಿ

ನಿಘಂಟುಗಳ ಕಣ್ಣು ತಪ್ಪಿಸಿ
ಅಂತರಾರ್ಥಗಳು ಎಷ್ಟಿವೆಯೋ
ನಮನಿಮಗೆ ಸಿಗದ
ಲೆಕ್ಕಗಳು ಅವನಿಗೇ ಇರಲಿ!

# ಬಸವಾರಾಧ್ಯ - ೮೦

ಕಣ್ಣಲ್ಲಿ ಕನಸುಗಳು
ಎದೆತುಂಬ ಎಲ್ಲೆಯಿಲ್ಲದಾಸೆಗಳು
ನಗೆ ಮಿಂಚು ರೇಖೆಗಳು
ಸಂಜೆಗಣ್ಣಿನ ಪ್ರಾಯದಲೂ
ಹೊಳೆವ ಮಿಂಚು ಕಾಂತಿಯ ಕಿರಣ
ಬತ್ತದುತ್ಸಾಹದೇರು ಹೊನಲು

ಎಂಬತ್ತರ ಹರಯದ ವಯಸು
ಚಿಗುರೊಡೆಯುತ್ತಲೇ ಇದೆ ಇಪ್ಪತ್ತರ ಮನಸು
ತುಡಿಯುತ್ತಿದೆ ಒಳಗೆಲ್ಲಾ
ನಾಡುನುಡಿಗಳ ಚಿನ್ನದ ಕನಸು

ನೀಳ ಕೋಮಳ ಕಾಯ
ಕಸ್ತೂರಿ ಬಣ್ಣದ ಕೃಶದೇಹ
ಇರಬಹುದು ಒಂದೌನ್ಸುರಕ್ತ ಮಜ್ಜೆ
ಆದರೂ ಉಕ್ಕುತ್ತಿದೆ ಚೈತನ್ಯ ಹೊನಲು
ಅಚ್ಚ ಹಸಿರ ಸೊಂಪಿನಲಿ ಧಾರಾಳ
ಸಂಶೋಧನೆಯ ಕೊಯಿಲು

ಹತ್ತು ಕೈಗಳಿಗೂ ಸಾಧ್ಯವಾಗದ
ಸಾಧನೆಯ ಶಿಖರಾರೋಹಣ
ಮಾತು ಮೂಡದೆಯೂ ಮೌನದಲಿ
ನಿಲುವ ವಿನಯ ಸೌಜನ್ಯಗಳ
ಮೂರ್ತಿ ಮೇರು: ಪ್ರೀತಿಯ ತೇರು
ಬದುಕು ಬವಣೆಗಳ

ನೂರೆಂಟು ಶರವೇಧ ವೇದನೆಗಳು
ನಿರಾಶೆ ನಿಟ್ಟುಸಿರುಗಳ ನಡುವೆಯೂ
ಹೊಳೆಹೊಳೆವ ಸೂರ್ಯ ಪ್ರಕಾಶ
ವಿದ್ವದಾಲೋಕ ಲೋಕದಲಿ
ಗಟ್ಟಿಹೆಜ್ಜೆಗಳಿರಿಸಿ ದುರ್ಬೀನ
ದೃಷ್ಟಿಗಳ ನೆಟ್ಟು ಅಣಿಮುತ್ತುಗಳ
ಹುಡುಕ ಹೊರಟವನಿವನು
ಕನ್ನಡದ ಕೊಲಂಬಸ್

ಧ್ಯಾನ ಮನನ ಚಿಂತನ
ಅನುಸಂಧಾನ ಚತುರ್ಮುಖಿಗಳಲ್ಲಿ
ನಡೆನಡೆದು ಮೊಗೆ ಮೊಗೆದು
ಹುಡುಕಿ ತೆಗೆದದ್ದೋ ಕೈಲಾಸಗಿರಿಯಷ್ಟು
ಆದರೂ ಸೆಟೆಯಿಲ್ಲ ರವೆಯಷ್ಟು

ಪದಕೋಶಗಳ ಕಗ್ಗಾಡಿನಲಿ
ನುಗ್ಗಿ ಕಗ್ಗಂಟುಗಳ ಬಿಡಿಸಿ
ಅರ್ಥ ಪ್ರಕಾಶಗಳ ಹೊಳೆಸಿದವನು
ಹಾದಿ ಮುಳ್ಳುಗಳ ಮರೆತು
ಗುರಿಯ ಗುಡಿಯ ಕಲಶವನು
ಮುಟ್ಟಿ ಮಹಂತನಂತುಳಿದವನು

ಕಾಯಕವೇ ಕೈಲಾಸವೆನುತ
ದುಡಿಮೆ ನೇಗಿಲ ಹಿಡಿದು
ಜ್ಞಾನ ಫಸಲನು ತೆಗೆದ ಕರ್ಮಯೋಗಿ
ಸೊಗಸು ಸಂಪತ್ತುಗಳಿಗೆ
ಬೆನ್ನ ತಿರುಗಿಸಿ ಬದುಕುತಿಹ ವಿರಾಗಿ

# ಹಾಡು ಹಕ್ಕಿಗೊಂದು ಹಾಡು

[ಜಿ.ಎಸ್.ಎಸ್. ಕುರಿತು ರಾಷ್ಟ್ರ ಪ್ರಶಸ್ತಿ ಬಂದ ಸಂದರ್ಭಕ್ಕಾಗಿ]

ಎದೆತುಂಬಿ ಹಾಡುವೆನು
ಇಂದು ನಾನು ಮನವಿಟ್ಟು
ಕೇಳುಕವಿ ಇದನು ನೀನು
ನೀನೋ ಹಾಡಿ ಹಾಡಿ ದಣಿದವನು
ನಾನು? ಇಂದಷ್ಟೇ ಕಲಿತು ಹಾಡುತಿಹೆನು
ಹಾಡುವುದು ಅನಿವಾರ್ಯ
'ಕರ್ಮವೆನಗೆಂದು'
ಬಿರುದು ಸನ್ಮಾನಗಳ ಬೇಡವೆಂದೆ
ನಿನ್ನ ಹಾಡಿನ ಸವಿಯ
ಸವಿಸವಿದು ಉಂಡವರು
ನನ್ನ ಹಾಡಿನ ಸವಿಯ
ಉಣಿಸ ಬಂದಿಹೆನು.
ಕಾಡ ಹಕ್ಕಿಯಲ್ಲ ನೀನು
ನಾಡ ಹಕ್ಕಿ ನುಡಿವ ಹಕ್ಕಿ
ನಿನ್ನ ವಾಸಕ್ಕಿಲ್ಲ ನಿತ್ಯ
ಹರಿದ್ವರ್ಣದ ಕಾಡು
ಬೆಂಕಿ ಮಳೆ ಹನಿಗಳ ಕುಡಿದು
ಮೊಳೆತ ಸೂಜಿ ಮೊನೆಯ
ಮುಳ್ಳು ಕಂಟಿ ಕರಕಲು ನೆಲ
ನಡುವೆಯೂ ನಿಂತು ನೀ
ಹಾಡಿದ ಹಾಡಿಗೆಷ್ಟು ಬಣ್ಣಗಳು!
ಅರ್ಥಭಾವಗಳು
ಕಾಮನ ಬಿಲ್ಲು ಮೋಹಕರಾಗ
ರಾಗಿನಿಯರ ಸ್ವರ ಸಂಚಾರಗಳು

ರಾಗ-ವಿರಾಗ, ಅನುರಾಗ
ದೀಪಕ ರಾಗಗಳಷ್ಟೇ ಅಲ್ಲ
ಮೇಘ ಮಲ್ಹಾರವಹಾಡಿ
ಮೇಘಗಳ ಬರಿಸಿದೆ; ಸುರಿಸಿದೆ
ಭೈರವದಲಿ ಬಿರುಸಾಗಿ
ಬಂಡೆದ್ದು ಬೆಂಕಿ ಕಿಡಿಗಳ
ಸಿಡಿಸಿದೆಯಷ್ಟೆ! ಸುಡಲಿಲ್ಲ
ಆದರೂ ಶಾಖವಿಳಿದಿದೆ ಎದೆಯಲ್ಲಿ!

ವಸಂತದುಲ್ಲಾಸದಲಿ
ನುಡಿದ ನುಡಿಗಳೆಲ್ಲಾ
ನಮ್ಮೆದುರು ಬಿಡಿಸಿದವು
ನೂರೆಂಟು ಚಿತ್ತಾರ ಸಂಭ್ರಮಗಳ
ಲಲಿತ ರಾಗವ ಹಾಡಿ ಹಾಡಿ
ಕೋಗಿಲೆಯ ಕಲಕಂಠ
ನೆನಪು ಪಕಳೆಗಳ ಬಿಡಿಸಿದೀ

ಕೃಷ್ಣ ಕೊಳಲಿನ ಜೇನು
ದನಿಗಳ ಸವರಿ ಮೋಹನವ
ನುಡಿಸಿ ಗಾರುಡಿ ಮಾಡಿಹೆ
ಗೂಡುಕಟ್ಟಿ ಕೂತು ಹಾಡುವ
ಕವಿಯಲ್ಲವೋ ನೀನು
ಹೊರಳು ದಾರಿಗಳಲ್ಲಿ
ಉರುಳು ದಾರಿಗಳಲ್ಲಿ
ಕರುಳ ಮಿಡಿತಗಳಲ್ಲಿ
ಕೊರಳ ಬಿಕ್ಕುಗಳಲ್ಲಿ
ತುಟಿನಗೆಯ ಮಿಂಚಲ್ಲಿ
ಹಾಡು ಅಮೃತ ಧಾರೆಗಳ
ಹರಿಸುವ ಕವಿಯೇ
ನವಿಲಿನ ನಲಿವಿದೆ ಗೆಲುವಿದೆ
ನೂರು ಹೂಗಳ ಕಂಪಿದೆ
ಅಚ್ಚಹಸಿರಿನ ಸೊಂಪಿದೆ

ಚಾರು ಚಂದ್ರನ ತಂಪಿದೆ
ನಡು ನಡುವೆಯೊಮ್ಮೊಮ್ಮೆ
ನಿಟ್ಟುಸಿರ ನೋವಿದೆ
ಸುಡುವ ಕೆಂಡದ ಕಾವಿದೆ
ಕವಿದ ಕತ್ತಲೆಯೆದೆಯಾಳದಿಂದ
ಬೆಳಕು ಬೆಳ್ಳಿಯು ಮೂಡುವುದೆಂಬ
ಕನಸಿದೆ ಜಗವೆಲ್ಲ ನಗಲೆಂಬ
ಆರ್ದ್ರ ಬಯಕೆಯ ಮನಸಿದೆ

# ಶ್ರೀನಿವಾಸರಾಜು ನೆನಪಿನಲ್ಲಿ

ಕನ್ನಡ ಕನಸುಗಳ ಮೂಟೆ ಹೊತ್ತು
ಕನ್ನಡ ಮನಸಿನ ನಿಲ್ಲದ ಪಯಣಿಗ
ಹೆಜ್ಜೆಯಿಟ್ಟಲೆಲ್ಲ ಕನ್ನಡ ಕಂಪಿನ ಸಿಂಪಡಿಕೆ
ಕಾಸಿಲ್ಲದೆಯೆ ಕನ್ನಡ ಹಂಚುವ ಸೌದಾಗರ
'ಕನ್ನಡ ಎನೆ ಕಿವಿ ನಿಮಿರುವುದು–'
–ಮಂತ್ರದೀಕ್ಷೆಯ ಉಸಿರಾಡಿ
ರಾಶಿ ಕನ್ನಡ ಕೆಲಸ ಕೈಯ್ಯ ತುಂಬಿರಲು
ಕೊಡವಿಕೊಂಡೆದ್ದೇಕೆ ಹೊರಟೆ
ಸಾವಿನೂರಿಗೆ ಬಯಸಿ ವಲಸೆ?

ಮಾತು ಮುತ್ತು ಮೌನ ಬಂಗಾರ
ಅರ್ಥವರಿತು ನುಡಿದು ಮಿತವಾಗಿ
ಕನ್ನಡದ ಜನಮನದಿ ಪ್ರೀತಿ ಬಿತ್ತಿ
ಏನೆಲ್ಲ ಭಾವತರಂಗಗಳ ಹಚ್ಚಿಟ್ಟೆ
ಎದೆಯಲ್ಲಿ ಹುಲುಸಾದ ತತ್ವ ಬೆಳೆ
ಬೆಳೆಸಿದೆ ಬಂದವರ ಜೊತೆಗೆ ಕೆಳೆ
ಅಬ್ಬರದಿ ಕನ್ನಡ ಕಹಳೆ ಸದ್ದು ಮಾಡಲಿಲ್ಲ
ಮೌನದಲಿ ಕನ್ನಡದ ಗಂಧ ಗಾಳಿಯ
ತೆರದಿ ಬೀಸಿ, ಪುಲಕಗಳ ಮೊಳೆಸಿದೆ

ಕನ್ನಡದ ನೆಲದಲ್ಲಿ ನಿನ್ನ
ಹೆಜ್ಜೆ ಗುರುತುಗಳ ಬೇರಿಳಿಸಿ
ಕನ್ನಡ ಕನ್ನಡವೆನ್ನುತ ಹಾಡಿದ
ಕನ್ನಡ ಕವಿ ಕಾಜಾಣ ಕೋಗಿಲೆಗಳ
ಪರಂಪರೆಯ ವರ್ತಮಾನದಲಿ

ಉಳಿಸಿ ಬೆಳಸಿ ನೀರೆರೆಯುತ್ತಲೇ
ಸಾಗಿ ಇದ್ದಕ್ಕಿದ್ದಂತೆ ಎದ್ದು ಹೋದೆ!
ಕೀರ್ತಿ ಕನಸುಗಳಲ್ಲಿ ಕೊರಗಲಿಲ್ಲ
ಕನ್ನಡದ ಕೆಲಸದಲಿ ನಲುಗಲಿಲ್ಲ

ಹೆಗಲ ಕೊಕ್ಕೆಗೊಂದು ಚೀಲ
ಇಳಿಬಿಟ್ಟು ಕನ್ನಡ ಖಜಾನೆಯ
ಜಗ್ಗುವಷ್ಟೂ ತುಂಬಿಕೊಂಡು
ಕಂಡಕಂಡವರಿಗೆಲ್ಲ ಕನ್ನಡದ
ಉಡುಗೊರೆಯ ಪ್ರೀತಿಗೆಂದಿತ್ತೆ

ಮನೆ ಮಡದಿ ಮಕ್ಕಳ ಚಿಂತೆ
ಸರಪಳಿಯ ಭೀತಿಯಿಲ್ಲದೆ ಅಲೆದೆ
ಕೆಳೆಯರೊಡನಾಡಿ ಕೂಡಿ
ಕಳೆದ ಕ್ಷಣಗಳೆಷ್ಟು ಮಧುರವೆಂದೆ
'ರಾಜು ಮೇಷ್ಟ್ರು! ರಾಜು ಮೇಷ್ಟ್ರು'
–ಎನ್ನುವ ಪ್ರೀತಿಯ ಕರೆಯನು
ಆಲಿಸಿ ಧನ್ಯಭಾವದಲಿ ಹಿರಿಹಿರಿಹಿಗ್ಗಿದೆ!
–ಊಟವಿನ್ನೂ ಮುಗಿಯದಿರಲು
ಹಣತೆಯಿನ್ನೂ ಉರಿಯುತಿರಲು
ಯಾವ ವಿಧಿಯ ಕರೆಗೋಗೊಟ್ಟು
ಆತುರದಿ ಇದ್ದುದೆಲ್ಲವ ಇದ್ದಂತೆ
ಇರಿಸುತಲಿ ಎದ್ದೇಕೆ ಹೀಗೆ ಹೊರಟುಬಿಟ್ಟೆ?
ನಿನ್ನ ಪ್ರೀತಿಸುವ ನಮ್ಮೆಲ್ಲರದೆಗಳಲಿ
ಕಾಳ ರಾತ್ರಿಗಳ ಉಳಿಸಿ ಕರಗಿ ಬಿಟ್ಟೆ?

# ಗಾದಿಯ ಗಾಡಿಗಾರ

ಅಚ್ಚೋದದಚ್ಚರಿಯ
ಉಬ್ಬರದಿ ಮುಳುಮುಳುಗಿ
ಏಳಲಾರದೆ ಏಳುತಿಹೆನಯ್ಯ

ಇರುವನಯ್ಯಾ ಇಲ್ಲೊಬ್ಬ
ಗಾದಿಯ ಮಹಾಗಾರುಡಿಗ
ಯಾರೇ ಬರಲಿ ಹೇಗೆ ಇರಲಿ
ಯಾವುದೇ ಸರಕಾರ
ಗಾದಿಗೆ ಇವನೆ ವಾರಸುದಾರ
ಏನೆಂಬೆನಯ್ಯ! ಅಯ್ಯ!

ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ
ಗಾದಿಯ ಹೊತ್ತೇ ಸಾಗುವನು
ಏನಾದರೂ ಸರಿ ಗಾದಿಯ
ನೊಮ್ಮೆಯು ಬಿಡುವುದನರಿಯ
ಕೇಳಯ್ಯ! ಕೇಳಯ್ಯ ಗುರುವೆ!

ರಾಜ್ಯಗಳಳಿಯಲಿ ರಾಜ್ಯಗಳು
ಉದಿಸಲಿ ತನ್ನೀಕಾರ್ಯವ
ಬಿಡನೆಂದು ದುಡಿವನಲ್ಲಿ ರೈತ
ಯಾರು ಬಂದರೂ ಹಿಡಿದ
ಗಾದಿಯನು ಬಿಡೆನೆಂದನು ಈತ
ಇದಕೇನ ಹೇಳಲಯ್ಯ! ಅಯ್ಯ!
ಗಾದಿಯಿಲ್ಲದೆ ಬದುಕಲಾರೆನು
ಗಾದಿಯೆನ್ನುವುದು ನಾ ಒಲಿದು

ವರಿಸಿಹ ಜೊತೆಗಾತಿ, ಸಂಗಾತಿ!!
ಧರ್ಮೇಚ ಅರ್ಥೇಚ ಕಾಮೇಚ!
–ಸಪ್ತಪದಿ ತುಳಿದು ವರಿಸಿದ್ದೇನೆ
ಕೂಡಿ ಬಾಳುವೆ ಕೊನೆತನಕ
ಬಿಡಲುಂಟೆ ಇದನು?–
ಎನ್ನುವ ಪ್ರಶ್ನೆಗೆ ಉತ್ತರವೆಲ್ಲಿ?
–ಹೇಳಯ್ಯಾ! ಹೇಳಯ್ಯ ಸಿದ್ದೇಶ್ವರ!

'ನಾನಿಲ್ಲದೆ ಬಿಕ್ಕುತಲಿವೆ
ಗಾದಿಗಳೆಲ್ಲ ಕಣ್ಣನ್ನೆಯಲಿ
ಕರೆಯುತಿವೆ; ವರಿಸುತಿವೆ
ಕಿಲಕಿಲನಕ್ಕು ನಲಿಯುತಿವೆ'
–ಎಂದೆನ್ನುತ ಮೀಸೆಯ
ತಿರುವುತಲಿರಲು, ಮೌನದಿ
ಮುಗಿದು ಕಾಲದ ಕಲಿತನಕೆ
ಬೆರಗಾಗುತಿಹೆ ನಯ್ಯ ಪ್ರಭುವೆ?

ಯಾವ ಮೋಡಿಯೋ
ಏನುಗಾಡಿಯೋ ಗಾದಿಗು
ಇವಗೂ ಬಿಡಲಾರದ ನಂಟು
ಕಾಣುವ ಕಣ್ಣಿಗೆ ಕಗ್ಗಂಟು
ಮಾತುಗಳ ಬಿರುಸಿಲ್ಲ
ಕತ್ತಿಗಳ ಕಿಡಿ ಕೆದರುವುದಿಲ್ಲ
ಮೌನ ನೀತಿಯ ಹಿಡಿದು
ಗೆಲ್ಲುವನು ಆ ರಾಜ್ಯ ಈರಾಜ್ಯ
ಬೇಧವಿಲ್ಲದೆ ಸಾಮ್ರಾಜ್ಯ
ಸರಣಿಯಲಿ ಹಿಡಿದು ಆಳುವನಯ್ಯ
ಮಾಡಲೇನಯ್ಯ! ಹೇಳಯ್ಯ!
ಯಾವ ಮೋಹನ ಮುರಳಿ
ಮೋಡಿಯೋ ಗಾದಿಯೇರುವ
ಇವನ ಸಂಭ್ರಮಕೆ ಲೋಕವೇ
ಹೆಡೆತೂಗಿ ನಲಿವುದಯ್ಯ

ಅಯ್ಯಾ! ಅಯ್ಯಾ! ಎನ್ನ
ಹುಯ್ಯಲ ಕೇಳಿ ಕೃಪೆ ದೋರಯ್ಯ
ಒಮ್ಮೆಯಾದರೂ ಗಾದಿಯ
ಸ್ಪರ್ಷ ಗಾಡಿಗಾರನ ಗುಟ್ಟು
ಅದೇನೆಂದು ಉಸಿರಯ್ಯ
ಎನ್ನಯ್ಯ! ಎನ್ನಯ್ಯ! ವಿಜಯೇಶನೇ!'

# ವೈ.ಎನ್. ಕೆ ಗೊಂದು ಪದ್ಯಪ್ರಬಂಧ

why ಎನ್ಕೆ why ಎನ್ಕೆ
Bore ಆಯಿತೆಂದು ಯಮಲೋಕಕ್ಕೆ
ಲಗ್ಗೆ ಇಡಲು ಹೋದಿರೇಕೆ?
ನಿಮ್ಮ 'ಗುಂಡು' ರಾಜ್ಯ Wonder ಲೋಕ
ನೀವಿಲ್ಲದೆ ಬರ-ಡು'ಗಳಲ್ಲಿ
ಅಳುತ್ತಿದ್ದರೂ ಹರಿಯದಿದೆ
ಕಣ್ಣೀರ ತೊರೆ
ಪತ್ರಿಕಾ ಲೋಕದಲಿ Wonder
ಸೃಷ್ಟಿಸಿ Wonder ಕಣ್ಣಿಂದ
ವಿಶ್ವವನ್ನು ನೋಡುವ ನಿಮ್ಮ ಚಾಳಿಗೆ
ವಾರಸುದಾರರೇ ಇಲ್ಲದಂತಾಯಿತಲ್ಲ!
ನಿಮ್ಮ Wonder ಕಣ್ಣಿನ ಚುಂಬಕತೆಗೆ
ಆಡೆನ್, ಲಾಡೆನ್, ನೆಪೋಲಿಯನ್
ಹಿಟ್ಲರ್, ಬಟ್ಲರ್ ಬುಷ್ಷೂಖುಷ್ಟೂ
ಕಾಳಿದಾಸ, ಕೋಳಿದಾಸ, ಗಾಂಧಿ, ಬ್ರಾಂದಿ
ರಾಕೆಟ್, ಜಾಕೆಟ್, ಭಗವಂತ, ಬಲವಂತ
ಹೀಗೆಲ್ಲ ಯಾರು ಯಾರೋ ಏನೇನೋ
ಎದುರಾದದ್ದೆಲ್ಲ ನಿಮ್ಮ ಅಂಕಣ
ಸಂಕೋಲೆಯಲಿ ಬಂದಿ ವಂದಿಗರು
'ನನ್ನ ಬದುಕು ನನ್ನದು' ಎಂದು
ಶಿಷ್ಟಾಚಾರಗಳ ಗೋಣು ಮುರಿದು
ಗೊಡ್ಡು ಆಚಾರಗಳ ಸಂಪ್ರದಾಯಗಳ
ಕುಟ್ಟಿಕುಟ್ಟಿ ಕೀಳಿಸಿ ಸೀಳಿಸಿ
ನಿಮ್ಮದೇ ಒಂದು ನಂಬಿಕೆಯ
ಹಿತ್ತಲಿನಲ್ಲಿ ಬಿತ್ತಿಕೊಂಡು

ಖಾಸಗೀ ಲೋಕವನೊಂದು ಕಟ್ಟಿಕೊಂಡು
ಸ್ನೇಹ ಪ್ರೀತಿಗಳಿಗೊಂದೊಂದು
ಹೊಚ್ಚ ಹೊಸ ವ್ಯಾಖ್ಯಾನಗಳ
ಬರೆದು ನಿಮಗೆ ನೀವೇ ಸಾಟಿಯಾದಿರಿ
ನಿಮ್ಮ ಪುಟ್ಟ ತಲೆಯ ಗಣಕ ಯಂತ್ರದಲ್ಲಿ
ವಿಚಾರ ವಿಶ್ವ ಶಬ್ದ ಭಂಡಾರಗಳ
Save ಮಾಡಿಕೊಂಡು

ಬಯಸಿ ಬೇಕೆಂದಾಗ ಕೈ ತಟ್ಟಿ
ಕರೆಯಲು ಅಲ್ಲಾವುದ್ದೀನನ
ಜಿನ್ ನಂತೆ ಬಂದು ನಿಲ್ಲುವ
ಅವುಗಳೊನಾಡುವ ಒಡನಾಟ
ಚೆಲ್ಲಾಟಗಳಿಗೊಂದು ಎಲ್ಲೆಯುಂಟೆ?
ಮಾತುಮಾತಿನಲಿ ಅರ್ಥ ಅರ್ಥಾಂತರಗಳು
ಅಣಕ ವ್ಯಂಗಗಳ ಮಹಾಪೂರ
ಪ್ರಾಸಾನುಪ್ರಾಸ ಚಮತ್ಕಾರಗಳ
ಸಾಕ್ಷಾತ್ಕರಿಸುವ ಮಾಟಗಾರ
ಮೈದಾಸ ಮುಟ್ಟಿದ್ದೆಲ್ಲ ಚಿನ್ನವಾದರೆ
ನೀವು ಕಟ್ಟಿ ಕೊಟ್ಟದ್ದೆಲ್ಲ
ಕವಿತೆ–ಕಾಡುಹರಟೆ–ಕಚಗುಳಿ–
ಗುಳಿಗೆ–ಶಬ್ದದೊಡನಾಟ–ಕೂಟ
ಮಾಟಗಳೆಲ್ಲ ಬದುಕಿನೊಳನೋಟ!
ಪದ್ಯ ಇಷ್ಟು ಲೈಟಾದರೆ ಹೇಗೆಂದು
ಕೇಳುತ್ತಲೇ ಲೇಟಾಗಿ ಲೈಟಾಗಿ
ಬರೆಬರೆಯುತ್ತಲೇ ಭಾರವಿಳಿಸಿ
ತಣ್ಣಗೆ ನಗಿಸಿ ಹಗುರಾಗಿಸುವ
ನಿಮ್ಮ ಮೋಡಿಯ ಬರಹಕ್ಕೆ
ಸಾಟಿ ಯಾರೆಂದು ಹೇಳಲುಂಟೇನು?

ಬದುಕು ರಾಮಾಯಣದ ಗತಿ
ಸಂಗತಿಗಳ ಭಟ್ಟಿ ಇಳಿಸಿ ಬರೆದ
Wonder ವಾಲ್ಮೀಕಿಯೇ ನೀವಾದಿರಿ

ಲೈಟೆಂದು ಕಣ್ಣು ಮುಚ್ಚುವವರ
ಕಣ್ಣು ತೆರೆಸಿದಿರಿ ಹೊಗಿಸಿದಿರಿ
ನಗಿಸಿದಿರಿ ನಿಬ್ಬೆರಗಾಗಿಸಿದಿರಿ
ನೀವು ಸೃಷ್ಟಿಸುವ ಶಬ್ದ ಚಿತ್ರಗಳಿಗಿಲ್ಲ
ಅರ್ಥದ ಗಡಿಗಳು ಅಪಾರ್ಥದ ಆಘಾತಗಳು
ನಿಮ್ಮ ಶಬ್ದವೇಧಿಗೆ ಸಿಗುವ ದೇವ –
ಮಾನವರು ಮುಲಾಜಿಲ್ಲದೆ
ಒಳಗಾದರೂ ನೋವಿಲ್ಲ – ನಲಿವುಂಟು

ಗೋಲಾಕಾರದಲ್ಲಿ ಗಿರಿ
ಗಿಟ್ಟಲೆಯಾಡುವ ನಿಮ್ಮದೆ
ಕೋಶದ ಪದಪದಾರ್ಥಗಳ
ಹಳಸು ಹೊದಿಕೆಗಳ ಕಳಚಿ
ಹೊಸ ವೇಷ ವರ್ಣಿಕೆಗಳಲ್ಲಿ
ಅರ್ಥದಂತರಂಗವ ತೆರೆದು
ತೋರುವ ಮೋಜಿಗೆ ನನ್ನ
ಮೌನದಚ್ಚರಿಯೊಂದೇ ಕಾಣಿಕೆ!
ದೂರ್ವಾಸನೆ–ದುರ್ವಾಸನೆ
ದೇಸಾಯಿ–ಶೀಷಾಯಿ–ಬೀರಬಲ್ಲ
ಬೋರಬಲ್ಲ–ಪ್ರಿಯಂಬದೆ
ಭರತ–ಬರತ್–ಹೀಗೆಷ್ಟೊಂದು
ಮೋಡಿಪದ–ಜೋಡಿಪದ
ಜಾತ್ರೆಯೋ ಜಾತ್ರೆ!
ಜೋಕುಗಳ ಜಲಪಾತ (ತಿ)
'ಪನ್ನು'ಗಳ pun 'ಡಿತರೇ
'ಗುಂಡು' ರಾಯರೇ 'ನಿಮ್ಮ 'ಗುಂಡು'
ಪುರಾಣವೇ ನಮಗೊಂದು ಇತಿಹಾಸ
'ನಾನುಗುಂಡರ್! ಅದೇಕೆ ನನ್ನ
ಲೈಫು ಹೀಗೊಂದು ವಂಡರ್!
ಕುಡೀತೀನಿ ಮದ್ಯಾನಾ
ಬೆಳಿಗ್ಗೆ ಸಂಜೆ ಮಧ್ಯಾಹ್ನ!
ಯಾಕೆಂದರಿದೆ ಇದಕೆ ಎಲ್ಲವನ್ನೂ

ಎದುರಿಸುವ! ಗುಂಡಿಗೆ
ನೀಡುವ ಶಕ್ತಿ; ಮಸ್ತಕಕ್ಕೆ ಯುಕ್ತಿ!
–ಎಂದು ಗುಂಡಿಗೆ ನಂಬಿದ
ಗುಂಡನಿಗೆ ತಂದೆಯಾದಿರಿ
ಜೊತೆಗೊಬ್ಬ 'ಫಾ'ನನ್ನೂ ಹುಟ್ಟಿಸಿದಿರಿ
ನಿಮ್ಮ ಮೂಸೆಯಿಂದಲೇ! ಶ್ವಾಸದಿಂದಲೇ!
ಸ್ಥಾವರ, ಜಂಗಮ, ನವೋದಯ
ಸದ್ಯದ ಬಂಡಾಯಗಳೂ
ನಿಮ್ಮೊಂದು ಪೆಗ್ಗಿನ ಪವಾಡಗಳೇ!

ಕಂಠಮಟ್ಟವಿದ್ದರೂ ಗುಂಡು
ಗುಂಡನಂತರಂಗದ ಮಿಡಿತಕ್ಕೆ
ನಿಲುಗಡೆಯಿಲ್ಲ ಸೋಗು ಸಂಕೋಲೆಯಿಲ್ಲ
ಮುಖವಾಡಗಳಲ್ಲಿ ಮರೆಮಾಚಿದ
ಎದೆಯ ಪಿಸುಮಾತುಗಳಿಗೆ
ಒಡಲಾಸೆಗಳಿಗೆ ತೆತ್ತುಕೊಂಡವರಲ್ಲ
ಶಿಷ್ಟಾಚಾರ ಸದಾಚಾರಗಳ
ಸೋಗಲಾಡಿತನಗಳ ಬದಿಗಿರಿಸಿ
ಮುಕ್ತದಲಿ ವ್ಯಕ್ತ ಕಾಡುಸಿದ್ದರು ನೀವು
'ಪನ್'ಗಳ 'ಪನ್'ಡಿತರಾಗಿ ಮಾತು
ಮಾತನು ಕುಕ್ಕಿ ಹೊಸ ಅರ್ಥ
ಬೆಳಕನ್ನು ಫಕ್ಕನುರಿಸುತ್ತ
ಅಚ್ಚರಿಗಳ ಬೆಚ್ಚುಗಳ ಬಿತ್ತಿದವರು
ವಿಕಟಕವಿಯಾಗಿ ವಿನೋದಗಳ
ಸಿಂಪಡಿಸಿ ನಕ್ಕು ನಗಿಸಿ ಹೂವಾಗಿಸಿ
ನೀವು ಮಾತ್ರ ನಿಮ್ಮ ಜೋಕುಗಳಿಗೆ
ನಗದೆ 'ಗುಮ್ಮೆಂದು' ನಿಲುವ ನಿಮ್ಮ
ತಲೆಯ ಜಾಡಿಯಲಿ ನೆನಪಿನುಪ್ಪಿನಕಾಯಿ
ನಂಜಿಕೊಂಡು ಚಪ್ಪರಿಸುವವರಿಗೆ
ದಾಸೋಹ ನೀಡಲು ಸದಾ 'ಸಿದ್ಧರೇ!
ಜಾದೂಗಾರನ ತೆರದಿ ಮಾತು
ಮಲ್ಲಿಗೆಯೆಲ್ಲ ನಿಮಿಷಾರ್ಧದಲ್ಲಿ

ಕೊಡಲಿಯಿಟ್ಟು ಕತ್ತರಿಸುತ್ತ
ಗುಡುಗುವೆಡೆಗಳ ಗಡಗಡಿಸುವ

ಗುಂಡು ವೀರ ಸರದಾರ
ಮಹಾ ಮಾಟಗಾರ ಮೊನಚುಗಾರ
ಎಷ್ಟೆಲ್ಲ ಬಲ್ಲವರು ಎಲ್ಲೆಲ್ಲು ಸಲ್ಲುವರು
ಸಂಸಾರ ಸಂತೆಯಲಿ 'ಸಂತ' ರಂತೆ
ನೀವಿದ್ದರೂ ನಿಮ್ಮ 'ಸಂತ' ತನದಲಿ
ಸುಡದ ಸಿಡುಕಿದೆ ಕಾಡದ ಕೀಟಲೆಯಿದೆ

ವಾಮನ ರೂಪ ತ್ರಿವಿಕ್ರಮ
ಭೂಪರಾದ ನಿಮಗೆ ಸಾವಿನ
ಬರವ 'ಬರ'ವಾಗಿಸುವ ತಂತ್ರ ಹೊಳೆದಿಲ್ಲವೆ?
ಪಾಪಿಗಳ ಪುಕಾರು ಕೇಳಿಕೇಳಿ
ಬೋರಾಗಿದ್ದ ಆ ಯಮಧರ್ಮನಿಗೆ
'ಗುಂಡು' ಗುಡಾಣ ಜೋಕುಗಳ
ಜಾಕಿಗಳನ್ನೂ ಕಳಿಸಿಕೊಡಬಾರದಿತ್ತೇ?
'ವಂಡರ್' ಲೋಕ 'ವಂಡರ್' ಘುಲ್ಲು
'ವಂಡರ್' ಕಣ್ಣು–ಗಳ ಬೀಳುಬಿಟ್ಟು
ಅಲ್ಲೇನು ಮಾಡುತ್ತೀರಿ ವೈ.ಎನ್.ಕೆ?
ನಿಮ್ಮ ಗುಂಡು 'ಫಾ' ಮತ್ತು
'ಗುಂಡು'ರಾಯರನ್ನು ಅಲ್ಲಿಯೇ
ಇರಿಸಿಕೊಳ್ಳುವ ಹುನ್ನಾರವೇ ನಿಮದು?
ಜೋಕ್ಸ್ ಕಾಪಿಯಂತೆ ಅದೇ ಅದೇ
ಬದುಕೆಂದು ಮರಗಟ್ಟಿ ಬದುಕುವುದು
ಬೇಡವೆನಿಸಿ ಬದಲಾಗ ಬಯಸಿ
ಆ ಲೋಕದಾವಾಸಕ್ಕೆಳಿಸಿದಿರಾ ಹೇಗೆ?
ವೈ.ಎನ್.ಕೆ. ನಿಮ್ಮ ನೆನಪು
ಕೋಟಿ ಕೋಟಿ ಎದೆಗಳಲ್ಲಿ
ಗಟ್ಟಿಗೊಂಡಿರುವುದು ಸುಳ್ಳಲ್ಲ
ನನ್ನ ಮಾತಿನ ಪ್ರಾಮಾಣ್ಯಕ್ಕಿದೋ
ಪ್ರಾಂಜಲ ಮನದ ನನ್ನೀಕವಿತೆ

# ಅನಂತ ಚೇತನ ಮಹಾಘನ

**(ಡಾ. ರಾಜ್‌ಕುಮಾರ್ ನೆನಪಿಗೆ)**

ಓ ಅನಂತ ಚೇತನ ಮಹಾಘನ
ಜಗದ ರಂಗದ ಮೇಲೆ
ಮುಗಿಯಿತೇ ನಿನ್ನ ಬದುಕಿನ
ಬಣ್ಣವೇಷಗಳ ಭರ್ಜರಿಯುಗ

ಎಪ್ಪತ್ತಕ್ಕೂ ಮೀರಿದ ವಸಂತಗಳಲ್ಲಿ
ಬೇರಿಳಿಸಿದೆ ಮೈಲಿಗಲ್ಲುಗಳ
ಲೆಕ್ಕ ನನಗಿಲ್ಲವಾದರೂ ನಿನಗೆ
ನಾನೊಂದು ಹಾಡನ್ನು ಹಾಡಬಲ್ಲೆ

ನೀಕಟ್ಟಿಕೊಂಡಾಳಿದ ಸಾಮ್ರಾಜ್ಯದ
ಚರಿತ್ರೆಯ ಶಾಸನಗಳ ಓದಬಲ್ಲೆ
ನಿನಗೆ ಸಿಕ್ಕ ಪ್ರಶಸ್ತಿ ಪರಾಕುಗಳ
ಪಳಿಯುಳಿಕೆಗಳನ್ನೂ ಗುರುತಿಸಬಲ್ಲೆ

ಬಿಡುವಿಲ್ಲದೆ ಚಹರೆಗಳ
ಬದಲಾಯಿಸುವಾಟದಲ್ಲೂ ನಿನ್ನ
ಹೂನಗೆಯ ಮೊಗ ಕರುಣೆ ಕಲ್ಲುಸಕ್ಕರೆ
ಕರಗಿ ಹೊನಲಾದ ಅಂತರಾಳ ಬಗೆಯ ಬಲ್ಲೆ

ಮೈ ಮಾಟ ಮೋಹಕ ಮಾತು
ಸ್ನೇಹಗಳ ಸೂರೆಗೊಳ್ಳುವ ಪರಿಯ
ತವಕದಲಿ ಕಾಣುತ್ತ ನಿನ್ನಲ್ಲಿ ಬಂದಿರುವೆ

ಲೆಕ್ಕವಿಲ್ಲದ ನಂಟು ಗಂಟನ್ನು ಬಿಟ್ಟಿರುವೆಯೆಲ್ಲಿ?
ರಜತಬಾನಿನ ಹರಹಿನಲಿ
ಹಬ್ಬಿಹಸಲಿಟ್ಟ ಚುಕ್ಕಿಗಳ
ಚಪ್ಪರದಲ್ಲಿ ನೀನೊಂದು ರಜತ ಕುಸುಮ
ಕಲೆಯ ಸಾಕಾರಕ್ಕೆಂದೇ ಮೀಸಲು ಜನುಮ

ನೆಲದಲೂರಿದರೂ ಪಾದ
ಮುಗಿಲ ಚಪ್ಪರ ಮುಟ್ಟಿದ
ಕೀರ್ತಿ ಕಿರೀಟಿಯೊಲು ಮೆರೆದೆ
ಅಭಿನಯದಲಿ ಅನಂತ ಪ್ರೀತಿಯೆರೆದೆ
ಚಮತ್ಕಾರದಲಿ ಒಮ್ಮೆಯೇ
ತ್ರಿವಿಕ್ರಮನಾದವನಲ್ಲ ನೀನು
ವಾಮನ ಪುಟ್ಟ ಪಾದಗಳಿರಿಸುತ್ತ
ಕಲ್ಲುಮುಳ್ಳನು ಮೆಟ್ಟಿ ಮೇಲೇರಿದವನು

ಹೆಜ್ಜೆ ಹೆಜ್ಜೆಯನೊಂದೊಂದನೂ
ಎಚ್ಚೆಚ್ಚರದಲ್ಲಿ ಅಳೆಯುತ್ತನಡೆದೆ
ನಡೆದೊಮ್ಮೆಯಾದರೂ ಎಡವಲಿಲ್ಲ
ಮುಂದೆ ಸಾಗಿದರೂ ಹಿಂದನು ಮರೆಯಲಿಲ್ಲ.

ಬಾಲ್ಯದ ತುಂಟತನಗಳ ಮೀರಿ
ನೋವು ಹಸಿವುಗಳ ಬೆನ್ನಲ್ಲೇ
ಬಂಗಾರ ಬದುಕು ಭವಿಷ್ಯಗಳ
ಅರಸುತ್ತ ಅರಸುತ್ತ ಮುಂದೆನಡೆದೆ

ಕಂಬನಿಕಡಲ ಅಬ್ಬರ ಉಬ್ಬರ
ಗಳ ನಡುವೆಯೇ ಚುಕ್ಕಾಣಿ
ಹಿಡಿದು ಜಾಣನಾವಿಕನಂತೆ
ನೆಲೆನಿಲುವ ದ್ವೀಪಗಳ ಅರಸ ಹೊರಟೆ
ಅಂತೂ ಇಂತೂ ಕೊಲಂಬಸ್

ಸಾಹಸದಲ್ಲಿ ನಿನ್ನ ಪರದಾಟಕ್ಕೆ
ವಿಜಿಗೀಷು ಪ್ರವೃತ್ತಿಗೆ ರಜತ
ಪರದೆಯ ಸೀಮೆಯೇ ತಂಗುದಾಣ
ಚಿತ್ರ ಸಾಮ್ರಾಜ್ಯವೇ ಸಾಮ್ರಾಟ
ಶಾಹಿಯೇ ಉತ್ತರಾಯಣವಾಯ್ತು
ಕಲೆಯ ಕಚಗುಳಿಯ ಪುಲಕ
ಅವಕಾಶಗಳ ಹುಲ್ಲುಗಾವಲಿಗೊಡೆಯ

ಪ್ರೀತಿ ಪ್ರೋತ್ಸಾಹ ಕಾರಂಜಿಗಳು
ಮೊದಲ ಚುಂಬನದಲ್ಲೇ
ಪರಿಣಿತಿಯ ಪರಾಕಾಷ್ಠೆ
ಕಲೆಯ ಕೆನ್ನೆಯ ಕೊರಳ ಶೃಂಗಾರವಾದೆ

ಕನ್ನಡಕೆ ನಿನ್ನ ಪಾತಿವ್ರತ್ಯ
ನಿಷ್ಠೆಗೆ ನಿನಗೆ ನೀನೇ ಸರಿಸಾಟಿ
ಲೆಕ್ಕವಿಲ್ಲದ ವೇಷಗಳ ಮುಖವಾಡಗಳ
ಧರಿಸಿಯೂ ಉಳಿಸಿದೆ ನಿನ್ನತನವ

ರಾಶಿ ರಾಶಿ ಸುರಿದ ಕನಕ ಕೀರ್ತಿಯ
ಅಮಲಿನಲಿ ತೂಕತಪ್ಪದೆ ಹೆಜ್ಜೆಯೂರಿ
ನಿಂತೊಮ್ಮೆ ನೀನಡೆದ ಹಾದಿ ಮುಳ್ಳು
ಗಳನ್ನೂ ಪ್ರೀತಿಧಾರೆಯ ಹನಿಸಿ ನೇವರಿಸಿದೆ

ನಾಡುನುಡಿ ಸಂಸ್ಕೃತಿಯ ನರ
ನಾಡಿಗಳಲ್ಲಿ ಭ್ರಮೆಯಿಳಿಸಿಕೊಂಡು
ಚಣ ಚಣದ ಉಸಿರಿನಲ್ಲಿ ತುಂಬಿಕೊಂಡು
ಕನ್ನಡದ ಹರಿಕಾರ ನಿಜದಿ ನೀನಾದೆ

ಸದು ವಿನಯ ಶರಣ ದಿಟ್ಟ ಚರಣ
ಮಹಾನವಮಿಯಾಯಿತು ನಿನ್ನ ಮರಣ

ಬತ್ತಲಾಗದ ಸೆಲೆಯಂತೆ ನಿನ್ನ ಕರುಣ
ಸಾವೆಂಬುದೇ ಸುಳ್ಳು ಬದುಕಿರುವೆ ಅಣು ಕ್ಷಣ

ಕಾವಿಯುಡದ ಸಂತ ನೀನು
ಹಿಡಿಯಲಾಗದ ಪಂಥ ನೀನು
ಏರದದನಿ ತೀರದ ತನಿ ಸುಗುಣಗಳ
ಗಣಿ ನೀನು ಕನ್ನಡದ ಗಂಡು ಗರ್ವ
ಸನ್ನಿಧಿಯ ಸೊಂಪು ಕೊರಳಿನಿಂಪು
ಮಧುರ ಮಾತಿನ ತಂಪು ಕಂಪು
ತತ್ವ ಸತ್ವ ಸಾರಗಳ ಸೋಸಿ ಹೀರಿ
ಸೆರೆಗೊಂಡೆ ನಮ್ಮನ್ನು ನಿನ್ನ ಛವಿ ಬೀರಿ

ಚೇತನವ ಅನಿಕೇತನವಾಗಿ
ಸುವ ಹುನ್ನಾರ ನಿನ್ನದಾದರೂ
ಈ ನೆಲದ ಅಣು ಅಣುವಿನಲು
ಅಡಗಿದೆ ನಿನ್ನ ಮಹಾಚೇತನ

ಮೇರುವಿನೆತ್ತರಕ್ಕೂ ಸೆಡ್ಡು
ಹೊಡೆದು ನಿಂತ ಅನನ್ಯ ಕಲಾವಿದ
ರೋಮಾಂಚನಗಳರಳಿಸುವದ್ರುಪದ
ಕೋಟಿ ಕನ್ನಡಿಗರ ಪ್ರೀತಿ ರಕ್ಷೆ ನಿನಗಿರಲಿ

ರಸತೃಷೆಯ ತಣಿಸಿದ
ಅಕ್ಷಯ ಕಾರಂಜಿಯೇ ನೀನಾದೆ
ಕಣ್ಣತುಂಬಿ ಕೊಂಡ ನಿರೀಕ್ಷೆಗಳ
ಸಾಕ್ಷಾತ್ಕರಿಸಿ ನಮಗಿತ್ತು ಧನ್ಯನಾದೆ
ನೀನೊಬ್ಬ ಕಲಾ ಪ್ರವಾದಿ
ಆದರೂ ಮುಗಿಸಿಬಿಟ್ಟೆಯಾ
ನಾಟಕ? ತೆರೆಯಿಳಿಸಿ ಬಿಟ್ಟೆಯಾ?
ಅಭಿಮಾನಿಗಳ ಅನಾಥನಾಗಿಸಿದೆಯಾ?

ಕೋಗಿಲೆ ಕೊರಳ ಹುಡುಕುತಿದೆ
ನಿನ್ನ ಯಶೋಗೀತೆಯ ಹಾಡಲು
ನಾನು ಹುಡುಕುತ್ತಿದ್ದೇನೆ ಸಿಗುವು
ದೇನೋ ಶಬ್ದಗಳ ಕವಿತೆ ಕಟ್ಟಲು

ಕೋಗಿಲೆಗೆ ಕೊರಳಿಲ್ಲ ಹಾಡಲು
ಪದಸಂಪದವಿಲ್ಲ ಕವಿತೆ ಕಟ್ಟಲು
ಆದರಿದೆ ಎದೆ ತುಂಬ ಕಂಬನಿಯ ಮುತ್ತು
ಅದನಿತ್ತೆ ಹೇಳುವೆನು ನಿನಗೆ ವಿದಾಯ

# ಜೋಡಿ ದೀವಿಗೆ

(ಹಂಪನಾ ದಂಪತಿ ಕುರಿತು)

ತಣ್ಣನೆಯ ಬೆಳಕು ಚೆಲ್ಲುತ
ಕಾಯಕ ದೇವರ ಮುಂದೆ
ಉರಿವ ಜೋಡಿ ದೀವಿಗೆ
ಮೋಡಿಯಲಿ ಹೆಡೆಯಾಡುವುದು
ಇವರ ಈ ಬಾಡದ ಹೂನಗೆ

ಗಂಡ ಬೇರುಂಡಕು ಮಿಗಿಲು
ಬಿರುಕಿಲ್ಲದ ಬೆಸುಗೆ ದಾಂಪತ್ಯ
ದೇಹವೊಂದು ತಲೆಯೆರಡು ಅದಕೆ
ದೇಹವೆರಡು ಮನಸೊಂದು ಇವರಿಗೆ
ಮನದ ಮಾತುಗಳೂ ಒಂದೇ!

ಕಣ್ಣೆರಡಾದರೂ ನೋಟವೊಂದೆ
ಕಿವಿಯೆರಡಾದರೂ ಕೇಳಿಸುವುದೊಂದೆ
ಜೀವವೆರಡಾದರೂ ಉಸಿರೊಂದೆ
ತುಟಿಯೆರಡಾದರೂ ತುಟಿಯ
ದಂಡೆಗಳಲ್ಲಿ ಮಂದಹಾಸವೊಂದೆ

ಕನಸುಗಳ ಗರಿ ಮುಡಿದು
ಜ್ಞಾನದಾಗಸದಲ್ಲಿ ಅಲೆವಹಕ್ಕಿಗಳು
ಸಾಹಿತ್ಯ ಸರಸಿಯಲಿ ನಿತ್ಯ ನಿರಂತರ
ನಿನದಿಸುತವಿನದಿಸುತ ತೇಲುವಂಚೆಗಳು
ಬದುಕು ಬಾನಿನ ಜೋಡಿ ಚುಕ್ಕಿಗಳು
ಭಿನ್ನತೆಯಲಿ ಅಭಿನ್ನ ಅನ್ಯದಲಿ ಅನನ್ಯ

ಭೇದದಲಿ ಅಭೇದ ಭಿನ್ನದಲಿ ಅವಿಚ್ಛಿನ್ನ
ಬನ್ನಗಳ ಭೇದಿಸುತ ಶೋಧಿಸುತ
ಅದಿರು ಮಣ್ಣಲ್ಲಿ ಹೆಕ್ಕುವರು ರನ್ನ
ಕುದಿಸಿ ತೆಗೆವರು ಅನುಭವದ ಚಿನ್ನ

ಚಂದ್ರಚಕೋರಿಗಳಿಗಿಹುದು ವಿರಹ
ಚಂದ್ರರೋಹಿಣಿಯರಿಗೆಲ್ಲಿ ನೋವು ಈ ತರಹ
ನಿಂತಲ್ಲಿ ನಿಲ್ಲದೆ ಸಂಚರಿಸುವ ಜಂಗಮ ಜೋಡಿ
ಮಾತಲ್ಲು ಮಾಡುವರು ಕೂಡಿ ಮೋಡಿ
ನಿತ್ಯವೂ ನವನವೀನ ಎಂಥ ದಾಂಪತ್ಯ ನೋಡಿ?

ಸಂಧಾನ ಅನುಸಂಧಾನ ಸಂಶೋಧನೆ
ಕಗ್ಗಾಡುಗಳಲ್ಲಿ ಒಡನೊಡನೆ ವೈಹಾಳಿ
ನಿಕ್ಷಿಪ್ತ ನಿಧಿ ಸಾಹಿತ್ಯ ರತ್ನ ತೆಗೆವ ಪಾಳಿ
ನಿದ್ದೆ ಕನಸುಗಳಲ್ಲು ಮಂಥನ ಚಿಂತನ
ವಿಚಾರ ಲಹರಿಗಳವಿನೂತನ ಅನುರಣನ

ಇಲ್ಲಿ ನಕ್ಕರೆ ಅಲ್ಲಿ ಕಚಗುಳಿ ಸಿರಿ
ಇಲ್ಲಿ ಇರಿದರೆ ಅಲ್ಲಿ ನೋವಿನುಲಿ
ಉಚ್ಛ್ವಾಸದಡವಿಲ್ಲಿ ನಿಃಶ್ವಾಸದಡವಲ್ಲಿ
ಕಣ್ಣು ಹನಿದರೆ ಇಲ್ಲಿ ಧುಮ್ಮಿಕ್ಕುವುದಲ್ಲಿ
ಇಂಥ ಅನುಪಮ ಜೋಡಿ ಕಾಣಬಹುದೆಲ್ಲಿ?

ಕಮಲಾ ಕಮಲಾಪ್ರಿಯರ ದಾಂಪತ್ಯ
ಇಲ್ಲ ನಿಲುಗಡೆ ಅಡೆತಡೆ ಸಾಗುವುದು ನಿತ್ಯ
ಪ್ರೀತಿ ವಿಶ್ವಾಸಗಳ ಭದ್ರಕೋಟೆಯಲಿ
ಭದ್ರ ಬದುಕು ಭೇದಿಸದು ಶತ್ರುಕರ
ಜಗವ ತಬ್ಬುವ ಸ್ನೇಹ ಬಾಹುಗಳೇ ಇವರ ವರ!

# ಕಲಾಮರಿಗೊಂದು ಸಲಾಮ್

ಕಲಾಮರೇ ನಿಮಗೆ ಸಾವಿರ ಸಾವಿರ ಸಲಾಮ್
ಯಾವ ಮಣ್ಣಿಂದ ಆದಿರೋ ನೀವು
ಚರಂಡಿಗಳ ಮಧ್ಯೆ ಗಂಧ ಕಸ್ತೂರಿ ಯಾಗುಳಿದಿರಿ
ಹಣ, ಅಧಿಕಾರ ಆಮಿಷಗಳ ಮೇಲಾಟ
ನಡೆದಿರಲು ತಣ್ಣಗೆ ಕುಳಿತಿದ್ದು ನಗುತ್ತಿದ್ದಿರಿ
ನಸುಗುನ್ನಿಗಳು ಡೊಂಕು ಬಾಲಕರು
ಡೊಗ್ಗು ಸಲಾಮುಗಳು ಹರಾಮಿಗಳು
ಆತ್ಮಗಳು ಅಡವಿಟ್ಟು ದಾಸ್ಯಕ್ಕೆ ಮುಡಿಪಿಟ್ಟು
ಜೊಲ್ಲು ಸುರಿಸುತ ನಾಯಕ ನಾಯಕರ
ನೆಕ್ಕುವ ಮಂದಿಯ ಮುಂದೆ ನಿಂತೂ
ನೆರಳಿಗೆ ಬೀಳದೆ ಸೋಂಕಿಗೆ ತಾಗದೆ
ಅಂತರಂಗ ಬಹಿರಂಗ ಶುದ್ಧಿಯ ಕವಚವ
ತೊಟ್ಟಿರಿ ಸೋಗುಗಳ ಮೆಟ್ಟಿ ನಿಂತಿರಿ ಹೇಗೆ?
ಬದುಕಲಾಗದೆ ಸಾಯಲಾಗದೆ ನರಳುವ
ಅಸಹಾಯ ಮಂದಿಯ ಕನಸುಗಳನ್ನೂ ಕಸಿದು
ಏರುಮೆಟ್ಟಿಲಾಗಿಸಿ ಕೊಳ್ಳುತ್ತಿದ್ದವರ
ಜೊತೆ ಜೊತೆಯಲೇ ನಡೆಯುವ ನೀವು
ಕನಸುಗಳ ಕಾಣುತ್ತ ಕಾಣಿಸುವ ಕನಸುಗಾರ
ಕಗ್ಗಲ್ಲ ಕಾಡುಗಳಲ್ಲಿ ಕಾಲು ಸೋಲದೆ ನಡೆದ ಧೀರ
ಭವ್ಯ ಭಾರತದ ನಿತ್ಯ ಮಂತ್ರ ಪಠನವೇ ನಿಮ್ಮುಸಿರು
ಇರಬೇಕೆನ್ನುತ್ತೀರಿ ಪರಂಪರೆ ಎಂದೆಂದಿಗೂ ಹಸಿರು
ಮಾತು ಮಾತಿನಲಿ ಪ್ರೀತಿ ಸ್ನೇಹಗಳ ಸಿಂಚನ
ಕಾದು ಕಲ್ಮಷ ಕಳೆದುಕೊಂಡ ನಿಮ್ಮ ಬದುಕು
ಕಾಂಚನ ಮನುಕುಲಕ್ಕೆ ನೀವೊಂದು ಲಾಂಛನ
ಬುದ್ಧಿ ಭಾವಧಾರೆಗಳ ಸಮರಸ ಸಂಗಮ

ಮನೋ ನಯನಗಳ ತೆರೆದಿರಿಸಿ ನೋಡುವ ವಿಹಂಗಮ
ಜಾತಿ ವರ್ಗ ಧರ್ಮಗಳ ಮರೆತು
ಪ್ರೀತಿ ಮರ್ಮವನರಿತು ನಡೆವ ನೀತಿ
ಸರಳ ಸಜ್ಜನಿಕೆ ಸದಾಚಾರದ ಬದುಕಿನ ರೀತಿ
ಅಧಿಕಾರದಾಹಕ್ಕೆರವಾಗದೆ ಕೆರವಾಗದೆ
ಜೀವ ರಾಶಿಗಳನ್ನೆಲ್ಲ ದೇವರೆಂದೇ ಬಗೆದು
ಬಡವ ಬಲ್ಲಿದನೆಂದೆ ಬಂದವರ ಕರೆದು
ಅಪ್ಪಿ ತಬ್ಬಿ ತಂಪೆರೆವ ಮಹಾನುಭಾವ
ಇವ ನಮ್ಮವ ಇವ ನಮ್ಮವನೆಂದ
ನಮ್ಮ ಬಸವನ ಬಿಂಬವೇ ನೀವು
ಮೇಜವಾನಿಗಳ ಮಜಾ ಉಡಾಯಿಸುವ
ಮಂದಿಯ ಮಧ್ಯೆ ಆರಿಸಿಕೊಳ್ಳುತ್ತೀರಿ
ಸಪ್ಪೆ ಸಾರು ಖೀರು ಹೆಚ್ಚೆಂದರೆ ನೀರು ಮಜ್ಜಿಗೆ
ಸುಪ್ಪತ್ತಿಗೆ ಸುಖಾಸನಗಳ ಕರೆಗೆ ಕಿವುಡಾಗಿ
ದಿವ್ಯ ನಿರ್ಲಕ್ಷ್ಯದಲಿ ಸಾಗುತ್ತೀರಿ ಚಾಪೆಗೆ ದಿಂಬಿಗೆ

ಕ್ಷಿಪಣಿಗಳ ಸರದಾರ ಮಹಾಶೂರ
ಹರಿಸುತ್ತೀರಿ ಭಾವ ಕವಿತೆಗಳ ಮಹಾಪೂರ
ನಿಮ್ಮ ಸಮ್ಮುಖದಲ್ಲಿ ಮೌನ ವಿಷಾದಗಳು
ನಗೆಯ ಮುಗುಳಾಗಿ ಅರಳುತ್ತವೆ
ನಿಮ್ಮ ನೇಹದ ನೇವರಿಕೆಗೆ ಮುಗ್ಧ
ಜೀವಗಳು ಕಂದಮ್ಮಗಳು ಹಾತೊರೆಯುತ್ತವೆ
ರಾಗ ಭೋಗ ರೂಹಿನಲಿ ಸಂಚರಿಸುವ
ನ ಭೂ ತೋ ನ ಭವಿಷ್ಯತ್ತೆಂಬಂತಿರುವಯೋಗಿ
ಭವ ನಿಮ್ಮಜ್ಜನರಾಗಿಯೂ ಲಘಿಮಾ ಕುಶಲಿಗಳು
ಧರ್ಮದಲಿದ್ದೂ ಧರ್ಮವ ಮೀರಿದವರು
ಜಾತಿಯಲ್ಲಿದ್ದೂ ಜಾತಿಗಡಿಗಳ ದಾಟಿದವರು
ಪ್ರೀತಿ ಸ್ನೇಹ ದುಡಿಮೆಯೇ ದೇವರೆಂದವರು
ಕುರ್ಚಿಯಲಿದ್ದೂ ಕುರ್ಚಿಯಾಚೆಗೆ ಸಿಡಿದು
ಅಸ್ಪೃಶ್ಯವಾಗಿ ಕಂಡು ನಡೆದವರು
ನಾನು ನನ್ನದು ನನ್ನವರದೆಂದು ಬಯಸದೆ

ಭವಿಷ್ಯಕ್ಕಿರಲೆಂದು ಹಪಹಪಿಸಿ ಕೊರಗದೆ
ಸರ್ವರಿಗು ಸಮಬಾಳು ಸಮಪಾಲು
ಎನುವ ಮಂತ್ರವ ಸಮಚಿತ್ತದಲಿ
ಪಠಿಸುತ್ತಲೇ ಬದುಕುವ ಸಂತರು ನೀವು

ಬಲಾಢ್ಯ ಭವ್ಯ ಭಾರತ ಶಿಲ್ಪಿಗಳ ಶೋಧದಲಿ
ಸಾಗಿದೆ ನಿಮ್ಮ ಕನಸಿನ ನಿಲ್ಲದ ಪಯಣ
ಗುನುಗುನಿಸುತ್ತೀರಿ ಕವಿತೆಗಳ ಕಟ್ಟುತ್ತೀರಿ
ಆಸೆಗಳ ಎದೆ ತುಂಬಿ ಕೊಳ್ಳಲು ಆದೇಶಿಸುತ್ತೀರಿ
ಉತ್ತುಂಗ ಶಿಖರ ಕನಸಿಗರ ಬೆನ್ನು ತಟ್ಟುತ್ತೀರಿ
ನಡುವೆ ಸೋತರೆ ನೀವೇ ಹುಟ್ಟುಹಾಕಿ ದಡ ಕಾಣಿಸುತ್ತೀರಿ
ಚಂಡ ಮಾರುತಗಳ ಪ್ರಚಂಡ ತಾಡನಗಳಿಗೆ
ಎದೆಯೊಡ್ಡಿ ನಿಲ್ಲಲು ಆಹ್ವಾನಿಸುತ್ತೀರಿ
ನೀವು ನೀವಾಗಿದ್ದೇ ನೀತಿಗಳ ರೂಪಿಸುತ್ತೀರಿ
ಘರ್ಷ ಸಂಘರ್ಷಗಳಿಲ್ಲದೆಯೇ
ಜೀ ಹುಜೂರ್ ಎನುತ ಡೊಗ್ಗು ಸಲಾಮಿಲ್ಲದೆ
ಸಂತೈಸಿ ನಗ್ನ ಸತ್ಯಗಳ ನಿರಾವರಣಗೊಳಿಸುತ್ತೀರಿ
ಬಾಗದೆ ಬಳುಕದೆ ನೇರ ನಿಲ್ಲುವ
ಗೊಮ್ಮಟ ಸದೃಶ ನಿಮ್ಮ ನಿಲುವಿಗೆ
ಶಿರಬಾಗುತ್ತದೆ ಸಂತಸದ ಹನಿ ಉದುರುತ್ತದೆ
ರಾಷ್ಟ್ರಪತಿಯಾದರೇನು ಎಂದೂ
ನಿಮ್ಮೊಳಗಿನ ಮೇಷ್ಟ್ರ ತನಕ್ಕೆ ಬರಲಿಲ್ಲ ಸಂಚಕಾರ
ಕಲಾಮರೇ ನೀವೊಂದು ಜ್ಞಾನ-ವಿಜ್ಞಾನದಪರಂಪಾರ!
ಸಭೆ ಸಮಾರಂಭ ಜಾತ್ರೆ ಉತ್ಸವಗಳು
ಏನಾದರೇನು ನೀವಿದ್ದಲ್ಲಿ ಸುರಿವುದು
ಸ್ನೇಹ ಸೌರಭವ ಮಳೆ ಹರಿವುದು ಸಂತಸದ ಹೊಳೆ

ಅದೋ ಅಲ್ಲಿ ಆ ರಾಷ್ಟ್ರಪತಿ ಭವನದಲಿ
ಕೇಳಿಸಿಕೊಳ್ಳಿ ಕ್ಷಣ ಹೊತ್ತು ಕಲಾಮರೇ
ಬಿಕ್ಕುಗಳು ಅನುರಣಿಸುತ್ತಿವೆ ಅಸಂಖ್ಯ
ನಿಮ್ಮ ನೇವರಿಕೆಯಿಂದ ವಂಚಿತ

ಅಣು ಅಣುವೂ ಕಣಕಣವೂ ನಿಮ್ಮ
ನೆನಪುಗಳಲ್ಲಿ ಉಸಿರಾಡುತ್ತಿವೆ
ಪಡೆದ ಪಾವಿತ್ರ್ಯತೆಯ ಕಳೆವ
ಭೀತಿಯಲಿ ತತ್ತರಿಸಿ ಕಂಪಿಸುತ್ತಿವೆ
ಭವಿಷ್ಯದ ಭೀತಿಯ ನಡುವೆಯೂ
ಒಮ್ಮೊಮ್ಮೆ ನಿಮ್ಮೊಡನಾಟದಲಿ ಕಳೆದ
ಸಂಭ್ರಮದ ಆ ಕ್ಷಣಗಳನ್ನು
ಪಿಸು ಮಾತುಗಳಲಿ ಹಂಚಿಕೊಳ್ಳುತ್ತ
ಧನ್ಯತೆಯ ಭಾವದಲಿ ಉಸಿರಾಡುತ್ತಿವೆ
ರಾಷ್ಟ್ರಪತಿ ಭವನದ ಹೊಸ್ತಿಲ ದಾಟಬಾರದಿತ್ತು
ನಿಮಗೆ ಅಲ್ವಿದಾ ಹೇಳುವ ಪಾಡು ಬರಬಾರದಿತ್ತು

# ಕನ್ನಡ ನಾಡಿನ ಕವಿಗೆ

ಕನ್ನಡ ನಾಡಿನ ಕವಿಯಿದ್ದನೊಬ್ಬ
ಹೊಸೆ ಹೊಸೆದು ಎಸೆದ ರಾಶಿ ಕಬ್ಬ
ತನ್ನ ಕವಿತೆಯೆ ತನಗೊಂದು ಹಬ್ಬ
ತನಗಾರು ಸರಿಯೆಂದು ಬೀಗಿದನು ಅಬ್ಬ!

ಊರಲ್ಲಿ ಉಂಟೇನೇನು ಬಹುಮಾನ
ಅವನಿಗಲ್ಲದೆ ಬೇರಾರಿಗೀ ಮಾನ ಸನ್ಮಾನ
ಗಂಡರಲಿ ಗಂಡು ಕವಿ ತಾನೆಂದು
ಮೀಸೆಯನು ತಿರುವುತ್ತ ಬೀಗುತಿದ್ದ

ದೊಡ್ಡವನು ಕವಿಯವನು ಎಲ್ಲರಲಿ
ಎಂದೆನೆಸಿ ಕೊಟ್ಟೆಲ್ಲ ಕವಿತೆಗಳ ನನ್ನ
ಬರೆಯ ಬೇಡಿದೆ ಮುನ್ನುಡಿಯೊಂದ ಚೆನ್ನ
ಹೌಹಾರಿ ಭಾವಿಸಿದ ಇದ ಬರೆವುದೇ ಬನ್ನ!

ಹೆಂಗಸರಿವರು ಪದ್ಯವ ಬರೆವುದೆ
ನಮ್ಮೊಡನಿವರು ಸ್ಪರ್ಧೆಗೆ ನಿಲುವುದೆ?
ಬರೆದಿವರಿಗೆ ಕೊಟ್ಟರೆ ಮುನ್ನುಡಿಯ
ಒಡೆದಂತಾಗದೆ ಘನತೆಗೌರವದ ಕನ್ನಡಿಯ?

ಬರೆದಾರೇನು ಬರಿ ಹುಳಿ ಸಾರು
ಭಾಷಣವೇನು! ಬೊಗಳೆಯ ತೇರು
ಪಾಕಶಾಸ್ತ್ರದಲಿ ಇರಬಹುದಿವರು ಪಂಡಿತರು
ಭಕ್ಷ್ಯಭೋಜ್ಯಗಳ ರಚಿಸಿ ತಣಿಸಲಿ ಬಸಿರು
ಕಾಫಿ ಬೆರಸಿದೊಲು ಸುಲಭವೆ ಕವಿತೆ?

ಸ್ಪರ್ಧೆಗೆ ನಿಲಲು ಅಡಿಗೆಯಾಟವೆ?
ಕಾವ್ಯ ಕತೆಗಳ ಒಡನಾಟ ರಸದೂಟ
ತಿಳಿದರೇನು ಬರಿ ಭೋಜನಕೂಟ!

ಬರೆ ಬರೆದು ಕವಿತೆಗಳ ಕಾಡುವರೇಕೆ
ಓದಲಾರದ ಕವಿತೆಗೆ ಮುನ್ನುಡಿ ಬೇಕೆ?
ಪಂಪನುನ್ನತಿಗೂ ಮೀರಿ ನಿಂತವನು
ಬರೆದಿವರಿಗೆ ಘನತೆ ನನ್ನ ಕಳೆಯಲೇನು?

ಬರೆದುಕೊಟ್ಟುದನು ನುಂಗಿಬಿಡಲೇ?
ಮಡದಿ ಕೈಯೊಳಗೆ ಇರಿಸಿಬಿಡಲೇ?
ಇಲ್ಲ ನೀರೊಲೆ ಬೆಂಕಿಯಲಿ ಸುಟ್ಟುಬಿಡಲೇ?
ಇಲ್ಲವಾದರೆ ಹರಿದು ತೇದು ಹಣೆಗೆ ಹಚ್ಚಿಕೊಳ್ಳಲೇ?

ಇವರೇಕೆ ನಮ್ಮ ಕಾಡುತ್ತಾರೆ
ನಮಗೆ ಸೇರದ್ದನ್ನು ಮೀರಿದ್ದನ್ನು ಬೇಡುತ್ತಾರೆ
ರಾಮ! ರಾಮ! ರಾಶಿ ಕವಿತೆಗಳ ಓದಲೆಂತು?
ಕುಟ್ಟುವ ಕೈಗಳಿಗೆ ಕವಿತೆ ಬರೆವ ಛಾತಿಯೆಂತು?

## ಬಸವನ ಬಡಬಡಿಕೆ

ಮೆತ್ತನೆಯ ಮಡಿಲ ತಂಪಿನಲಿ
ತಲೆಯೂರಿದರೂ ಉರಿವ
ಕೆಂಡದ ಕಾವು ಬೂದಿ ಮನಸು
ಗವ್ವೆನುವ ಕತ್ತಲ ಪೆಡಂಭೂತ
ನೆರಳು ನರ್ತನ ನೂರು
ಕಂಪನ ಒಡಲೊಳಗೆ

ಕೆದರು ಕೂದಲು
ಕಂಕಾಲ ಕೈಕಾಲುಗಳು
ತಕ ತಕನೆ ಕುಣಿವ ಹೆಜ್ಜೆ
ತಳವೆಲ್ಲ ರಕ್ತ ರಂಗೋಲಿ
ಒಂದಲ್ಲ ಎರಡಲ್ಲ
ಚೀರುವ ಚೂರಿ ದನಿಗಳು
ಕೋಟಿ ಕೋಟಿ
ತೂಗು ಕುಣಿಕೆಯ ಸಾಲು
ನೆಲದೊಡಲ ತುಂಬೆಲ್ಲ
ರುಂಡ ಮುಂಡಗಳು!

ಕನವರಿಕೆ ಬಡಬಡಿಕೆ
ಗಂಗಾ ಕರೆಯುತಿದೆ ಕಲ್ಯಾಣ
ಹೋಗ ಬೇಕಿದೆ ನನಗೆ
ನಾನೆಟ್ಟು ಬೆಳೆಸಿದ ನಂದನದಿ
ದವನ ಮರುಗದ ಕಂಪು
ಮೊಲ್ಲೆ ಜಾಜಿಯ ಸೊಂಪು
ಮರುಗದೆಯೆ ನಗುತಿರುವ

ನೂರು ಸಾವಿರ ಬಣ್ಣಹೂವು
ಕೂಡಿಸಿ ಕಟ್ಟಿದ ಮಾಲೆ ತೋಮಾಲೆ
ಸಂಗನಿಗೆಂದೇ ಇರಿಸಿ ಬಂದಿದ್ದೆ
ಬಂದರೂ ಬಿಡದೆ ಕಾಡಿದೆ ನನ್ನ
ಭಕ್ತಿಸಿರಿ ಸಂಪದದ ಕಲ್ಯಾಣ ಮಾಯೆ
ಮಹಮನೆಯ ಮಂದಿ
ಮಕ್ಕಳ ನೆರಳ ಹೆರಳು
ಹಾವಾಗಿ ಬುಸುಗುಡುತಿದೆ
ಬಿಜ್ಜಳನ ನೆಲ ಮಾಳಿಗೆಯಲ್ಲಿ
ಮಡುಗಟ್ಟಿದೆ ಬೆಂಕಿ
ಉಕ್ಕುಕ್ಕಿ ಹರಿದಿದೆ ವೈತರಣಿಯಾಗಿ
ಶರಣರೂರಿದ ಬೀದಿ ಬೀದಿಯಲ್ಲಿ
ವಿಕಟಾಟ್ಟಹಾಸದ ರಾಕ್ಷಸ
ನಗೆಯ ಡಮರುಗಳು
ಮೊಳಗುತಿದೆ ಎಲ್ಲೆಲ್ಲು
ಸಂಗನೆದೆಯಲ್ಲೂ!

ಒಡೆದೆದ್ದಿವೆ ಭೀಕರ ಭೂಸ್ಫೋಟಗಳು
ಕನಸು ಬಣ್ಣ ಬಣ್ಣದ ಗೋಲಗಳು
ಅಕ್ಷಿಪಟಲದ ಮುಂದೆ ಬರಿ ಹೋಳುಗಳು
ಆಗಸದ ತುಂಬೆಲ್ಲ ಹದ್ದುಗಳ ಸಂತೆ
ಹೆಣವೆಲ್ಲ ಚೆಲ್ಲಿ ಬಿದ್ದಿವೆ ಕಂತೆ ಕಂತೆ
ಬೇಡುತಿವೆ ಭೂತ ಬೇತಾಳ
"ಬಸವಣ್ಣ ಅನ್ನ ಕೊಡು
ಬಸವಣ್ಣ ಜೀವ ಕೊಡು
ಬಸವಣ್ಣ ಮನೆಯ ಕೊಡು
ಬಸವಣ್ಣ ಮರಳಿ ಕೊಡು
ನಮ್ಮ ಕಳೆದ ಬದುಕಿನ ಸುಖವ"
ಚೀರಿ ಕೇಳುವ ಮಂದಿ
ಕಣ್ಣಲುಕ್ಕಿದೆ ಭೋರೆನುತ ಕಡಲು
ಕೇಳುವುದನೆಲ್ಲವರ

ಹೇಗೆ ಕೊಡಲಿ?
ಉರಿವ ಒಡಲಿನ ಬೇನೆಯನು
ತಣಿಸಲೆಲ್ಲಿದೆ ದಾರಿ
ಕಾಣಲೆಂತು?
ದಣಿದು ಸೋತಿದೆ ದೇಹ
ಮುಳ್ಳು ಹಾದಿಯ ಹೆಜ್ಜೆ
ನಡೆದಲ್ಲಿ ಹೂಸತ್ತು
ರಕ್ತ ಬೀಜಗಳೆಲ್ಲ ಮೊಳೆವ ಹೊತ್ತು!
ಕರೆ ನನ್ನ ಸಂಗನ
ಸಂಗನಿಚ್ಚೆಯಲಿ ನಡೆದವಗೆ
ನೂರೆಂಟು ನೋವುಗಳ
ಶೂಲ ಸನ್ಮಾನವೇ?

ಏಕೆ ಕೆಡಿಸಿದನೆನ್ನ ನೆಮ್ಮದಿಯ
ಬಿಡದೆ ಕೇಳುವೆನವನ
ಪ್ರಶ್ನೆಗಳಿಗುತ್ತರಿಸಲಿ ಒಡೆದು ಮೌನ
ಲೆಕ್ಕವಿಲ್ಲದ ಕೊಲೆಯ
ಪದಕಗಳ ಎದೆ ತುಂಬ ಮೆರೆಸಲೇಕೆ?

ಸಂಗನಾ ಸಂಗದಲಿ ನಿಸ್ಸಂಗಿಯಾಗಿ
ಹೋಗಿ ಬಿಡುವೆನು ಗಂಗಾ
ಹೋಗಿ ಬಿಡುವೆ"

ಸಾಗಿದೆ ನಿಲ್ಲದೆ ಬಿಡಬಡಿಕೆ
ಅವ್ಯಕ್ತ ನೋವಿನ ಇರಿತ
ಅಂತರಂಗದಲಿ – ಪರಿತಾಪ!
"ನನ್ನ ನಂಬಿದ ಗಂಗಾ ನೀಲಾರ
ಆಸೆಗಳ ಕಮರಿಸಿದೆ
ಆದರ್ಶಗಳ ಸಾಗುವಳಿಗಾಗಿ
ಹೂಡಿ ದೂಡಿದೆ ನೊಗಕೆ
ಒಡಲ ಬಳ್ಳಿಯ ಕುಡಿಯ

ಕೊಲೆಗಡಿದೆ ನಿರ್ದಯದಿ
ಲೋಕೋದ್ಧಾರದ ಮೃಗಜಲದ
ಬೆನ್ನೇರಿ ಹೊರಟವನು ನಾನಾದೆ
ಕಾಣುತಿದೆ ದೂರದಲಿ
ಬಯಲು ! ಬಯಲು ! ಬಯಲು !
ನೆಲನುಂಗಿ ಹಿಂಗಿಸಿದೆ ನನ್ನ
ಕನಸು ಬೀಜಗಳನ್ನು
ಹಿಮಪಾತದಡಿಯಲ್ಲಿ
ಮುರುಟಿ ಮಲಗಿವೆಯೊಳಗೆ
ಗೋರಿಗಳಲ್ಲಿ ಚಿಗುರುವಾಸೆಕನಸುಗಳು

ಕಾಣಲಾಗದು ಗಂಗಾ
ನಾ ಕೊಟ್ಟದನಿ ಉಡುಗುವುದನ್ನು
ನಾ ತೆರೆದ ಬಾಗಿಲು ಬಂದಾಗುವುದನ್ನು
ನಾ ನಿಟ್ಟ ಹೆಜ್ಜೆಗಳು
ಕರಗಿ ಹೋಗುವುದನ್ನು
ಇಷ್ಟಲಿಂಗಗಳೆಲ್ಲ ನಷ್ಟವಾಗುವುದನ್ನು
ನೋಡನೋಡುತ ತಾಳಿ
ಬದುಕಲಾರೆ! ಆರೆ!!
ನನ್ನ ತತ್ವಗಳೆಲ್ಲ ನನ್ನನೇ
ಕೆಕ್ಕರಿಸಿ ನೋಡಿ ನಗುತಿರಲು
ಮರಣದೂರದಲಿರಿಸಿ
ಹರಣವನು ಉಳಿಸಿಕೊಳ್ಳಲೆಂತು?

# ಕೆಟ್ಟು ಕುಳಿತ ಟೆಲಿಫೋನ್

ಆಗಾಗ ಮೊಳಗುವ
ದೂರವಾಣಿಯ ಕರೆಯ ಮೌನಕ್ಕೆ
ಚಡಪಡಿಕೆ
ಒಳಗೊಳಗೇ ಏನೇನೋ
ಕಳೆದುಕೊಂಡ ಭಾವ
ಮೌನ ಗೌರಿಯಾಗಿ
ಇದ್ದಕ್ಕಿದ್ದಂತೆ ಮುಷ್ಕರ
ಪ್ರಶ್ನೆಗಳು ಅನಂತ
ಹೊಳೆಯದ ಕಾರಣಕ್ಕೆ
ಮತ್ತೂ ಮತ್ತೂ ಅಸ್ವಸ್ಥ
ನುಡಿಸಬೇಕಿವಳ
ಕರುಳ ಬಳ್ಳಿಯ ಬಂಧ
ಸಡಿಲವಾಗಿ
ಅಮ್ಮನೆದೆಯ ಪ್ರೀತಿಯ
ಬಿಸುಪು ಹರಿಯಲಿಲ್ಲವೇನೋ?
ಸಂವೇದನೆಗಳೇ ಸತ್ತಂತೆ
ಮರಗಟ್ಟಿ ಕುಂತವಳಿಗೆ
ಚಿಕಿತ್ಸೆ ಅನಿವಾರ್ಯ
ಮೊರೆಹೊಕ್ಕ ವೈದ್ಯನಿಗೆ
ವ್ಯವಧಾನವೇ ಇಲ್ಲ
ಇವಳಂಥ ರೋಗಿಗಳೇ ಸಾಲು! ಸಾಲು!

ನನ್ನ ಮುದ್ದಿನ ದೂರವಾಣಿಯ
ರೋಗನಿಧಾನವೂ ನಿಧಾನವೇ!
ಕೊರಳು ಕೊಡಲಾಗದೆ

ಕರಗಿ ಕಳೆದುಹೋದ
ಸಂದೇಶಗಳೆಷ್ಟೋ! ಲೆಕ್ಕವಿಲ್ಲ
ಎಂಥ ಹಿಂಸೆ! ಕಡಿದ ಬಂಧ
ಒಂಟಿತನದ ಭೂತದ ಭೀತಿ?
ಒಮ್ಮೆಲೇ ಸ್ಥಗಿತಗೊಂಡ ಹೆಜ್ಜೆ
ಲೋಕವೇ ಮುಗಿದು ಹೋದಭಾವ!
ತಲುಪುವುದಿಲ್ಲ ಸುದ್ದಿ ಸಮಾಚಾರ
ಮದುವೆಯೋ ಮಸಣವೋ
ಪ್ರೇಮ ಸ್ನೇಹಗಳ ಸಲ್ಲಾಪವೋ
ತುರ್ತಿನ ತುತ್ತುಗಳೋ? ಮುತ್ತುಗಳೋ!?
ಸುದ್ದಿಗಳು ಸಮಾಧಿಯಾಗುತ್ತಿವೆ!!!

ಇವಳ ಕೊರಳ ಕೂಜನಕಾಗಿ
ಕಾದಿದ್ದೇನೆ ಮೈಯೆಲ್ಲ ಕಿವಿಯಾಗಿಸಿ
ಗಳಿಗೆಗಳ ಎಣಿಸೆಣಿಸಿ
ಕನವರಿಸುತ್ತಿದ್ದೇನೆ ರಾತ್ರಿ! ಹಗಲು!
ನುಡಿಯದ ಮೌನಕ್ಕೆ
ಕನಲಿ ಶಪಿಸುತ್ತಿದ್ದರೂ
ಎಲ್ಲೋ ಮನದ ಮೂಲೆಯಲಿ

ಮರುಕದ ಹೊನಲು
ಮೆಲ ಮೆಲ್ಲನೆ ಹರಿಯುತ್ತದೆ
ಅವಳ ಅಂತರಂಗದ
ಅಳಲನೂ ಆಲೋಚಿಸುತ್ತಲೇ
ಮೃದುವಾಗಿ ಮೆದುವಾಗಿ
ಬೆರಳ ಮಲ್ಲಿಗೆ ಸ್ಪರ್ಶದಲಿ
ಮೈದಡವಿ ನೇವರಿಸಿ
ಯಾಚನೆಯ ದನಿಯಲ್ಲಿ
ಮಮತೆ ಮೋಹದಿಂಚರದಲ್ಲಿ
ಕೇಳಿಕೊಳ್ಳುತ್ತೇನೆ
ಕೂಗು ಮರಿ ಕೂಗು

ಕೊರಳೆತ್ತಿ ಒಮ್ಮೆಯಾದರೂ
ನಿನ್ನದನಿಯ ಮೊಗ್ಗರಳಿಸಿ
ಸೊಂಪು ಸುದ್ದಿಯ
ಕಂಪ ಸಿಂಪಡಿಸು!
ಸಾಕು ಕುಣಿಯುವೆನೊಮ್ಮೆ
ನೂರು ಸ್ವರ್ಗದ ಸವಿಯ
ಸವಿದಂತೆ ಗೆಲುವಿನಾ
ಗರಿಬಿಚ್ಚಿ ಹಾರುವೆನು ಹಕ್ಕಿಯಂತೆ!!

## ಬಾಗಿಲು ತಟ್ಟಿದವನು

ಯಾರಿವನು ಬಾಗಿಲನು
ತಟ್ಟುವವನು
ಕಾದು ಕಾದು ಕಾಯಾಗಿ
ಕುಳಿತಿರುವೆ ಯುಗಯುಗಾಂತರದಿ

ಕದವಿಕ್ಕಿ ಬೀಗ ಜಡಿದು
ಬೆಳಕು ಕಿರಣವ ತಡೆದು
ಕತ್ತಲ ಕೋಶವನು ಕಟ್ಟಿ
ಇರಿಸಿದೆ ಉಸಿರು ಗಟ್ಟಿ

ಕತ್ತಲಲಿ ಕಾಲೂರಿ
ನಡೆವುದನು ಕಲಿತೆ
ನಾಳೆ ಬೆಳಕಿನ ಭರವಸೆ
ಯಲ್ಲಿಯೇ ಹಿಗ್ಗಿ ಬಲಿತೆ

ಮೊದಲ ಪುಲಕಗಳ
ಕತ್ತಲಲ್ಲಿಯೂ ಬಿತ್ತಿದ
ಹುಡುಗ ಯಾರೆಂದು
ಕಣ್ಣ ಬೆಳಕಲ್ಲೇ ಹುಡುಕಾಡಿದೆ

ಅಲೆದಲೆದು ದಣಿದುಳಿದೆ
ಮದವಿಳಿದು ಮುದ ಸೋರಿ
ನಿಟ್ಟುಸಿರ ಕೌದಿಗಳಲ್ಲಿ
ಬೆಚ್ಚಗುಳಿದೆ
ಕುಡಿಯೊಡೆಯುತಿಹ ಬಯಕೆ

ಮೊಗದ ಜಾಡನು ಅರಿಯದಾದೆ
ಪ್ರಥಮ ಚುಂಬನ ರೋಮಾಂಚನ
ಭದ್ರವಾಯಿತು ಎದೆಯ ಕೋಶದೊಳಗೆ

ಅಂಗಳದಿ ಅರಳಿರುವ
ರಾತ್ರಿ ರಾಣಿಯ ಹೊಗರು
ಸಿಡಿದು ಸುರಿಯುತ್ತಿದೆ ಪೊಗರು
ಅದಕೆ ಇದನೆಲ್ಲ ಕೊಟ್ಟರಾರು?

ನನಗಿಲ್ಲದೀ ಸುಖವ
ಇದಕೇಕೆ ಎನುತಲಿ
ಮತ್ಸರದಿ ಕಿಡಿಕೊಟ್ಟೆ
ಉಳಿದೆಳೆಯ ಸುಖಕೆ

ಯಾರಿಗೋ ಬಯಸುತಿದೆ
ಏನೇನೋ ಬೇಡುತಿದೆ
ಈ ಜೀವದಾ ನೋವಿಗೆ
ಮದ್ದು ಇನಿತಾದರೂ ಇರುವುದೇನು?

ಊರಾಚೆ ಮುಗಿಲಾಚೆ
ನಕ್ಷತ್ರ ನೀಲಿಯಾಚೆ
ಇರುವ ಮಾಂತ್ರಿಕನೆನಗೆ
ಒಲಿದು ಬರುವನೇನು?!

ಬಂದರೊಮ್ಮೆಯಷ್ಟೇ ಸಾಕು
ಮಾಯುವುದು ನೂರು ಸಾವಿರ ಗಾಯ
ಕ್ಷಣವೊಂದರರ್ಧದಲಿ
ನೋವೆಲ್ಲ ಮಂಗಮಾಯ!
ಕ್ಷ ಕಿರಣನೋಟದಲಿ
ಬೆತ್ತಲಾಗುವ ಮನದಿ
ಕಡಲಗಲ ಕಾಣುವುದು
ಹೊನಲ ಪ್ರೀತಿಯ ಧಾರೆ

ಬರಲೆಂಬ ಬಯಕೆಯಲಿ
ಬರುವ ಸವಿಗನಸಿನಲಿ
ಜಗದ ದುಃಖವನೆಲ್ಲ
ಹೊತ್ತು ನಿಂತಿರುವೆ

ಅಸ್ಪಷ್ಟ ಹಾದಿಗಳಿಗೆ
ಹೆದರಿ ಕದಗಳನಿಕ್ಕಿದೆ
ಹಣತೆಗಳ ಬೆಳಕಿರಿದು
ಕತ್ತಲುಟ್ಟೊರಗಿದೆನು

ಬಂದ ಹಾದಿಯಗುಂಟ
ಅರಸುತ್ತ ಹೊರಟ
ಆಸೆಗಳು ಕಮರಿ
ಗೋರಿಗೊಳಿಸುತ ನಡೆದೆ

ನಡೆದೆರಡು ಗಳಿಗೆಯಲಿ
ಬಾಗಿಲಿನ ಸದ್ದು!
ಇವನಾರು ಬಾಗಿಲನು
ತಟ್ಟುವವನು!

ಬಾಗಿಲಾಚೆಯೂ ಸದ್ದು!
ಬಾಗಿಲೀಚೆಯೂ ಸದ್ದು!
ಮಿಡಿತ ಬಡಿತಗಳ
ಮೇಳವಹುದೇನು?'
ತೆಗೆಯಲೇ ಬಾಗಿಲನು!
ಯಾರವನು ಏಕೆಂದು
ಕೇಳಲೇನು? ಕೇಳಿ ಕಾಣದಾದರೆ
ಬಯಲ ತಬ್ಬುತ ಬಿಕ್ಕುತಿರಲೇನು?

# ಕನಸುಗಳಿಗೆ ವಿದಾಯ

ನಿನ್ನ ಮುಖದಲ್ಲಿ ಮುಗ್ಧ
ನಗೆಗಾಗಿ ಹುಡುಕಾಡುತ್ತೇನೆ
ಮುತ್ತುಗಳ ಮುತ್ತಿಗಾಗಿ
ದಿನಾ ದಿನಾ ಕಾಯುತ್ತೇನೆ

ರಜತೋತ್ಸವ ವರ್ಷಗಳು
ಜಾರಿದರೂ ಮದುವೆಯಾಗಿ
ಏಕ ತಾನದಲ್ಲಿ ಮೊಳಗಲಿಲ್ಲ
ಸ್ವರಗಳೆಂದೂ ಶೃತಿಗೂಡಲಿಲ್ಲ

ನಿನ್ನನ್ನು ಕಾಣುವ ಕ್ಷಣಗಳಲ್ಲಿ
ಅವ್ಯಕ್ತ ಕಂಪನಗಳು ಒಡೆಯುತ್ತವೆ
ಮುಳ್ಳು ಬಿಸಿಲಿನ ಇರಿತದಲಿ
ಮೃದು ಮಾಂಸ ಚೀರುತ್ತದೆ

ಅಬ್ಬರದ ಗುಡುಗು ಸಿಡಿಲು
ಇಲ್ಲದೆಯೂ ಲಾವಾ ಹೊಮ್ಮುತ್ತದೆ
ನಳನಳಿಸುವ ಮನದ ಹಸಿರು
ಬೆಂದು ಬೂದಿಯಾಗುತ್ತದೆ

ಒಮ್ಮೆಯಾದರೂ ನಿನ್ನ
ಮೊಗದ ಆಗಸದಲ್ಲಿ
ನಗೆಯ ಚಿಕ್ಕಿಗಳ ಬಿತ್ತಬಾರದೆ!
ಬೆಳ್ದಿಂಗಳಿಷ್ಟು ಹನಿಸಬಾರದೇ?
ತುಟಿಯ ದಂಡೆಗಳಲ್ಲಿ

ಮೂಡಿ ಮಿನುಗುವ
ಮಂದಹಾಸಕ್ಕೆ ಕನಲಿ
ಕಾಲಾಂತರದಿಂದಲೂ ಕಾದಿದ್ದೇನೆ

ಶಬರಿಗೊದಗಿದ ಭಾಗ್ಯದ
ಭರವಸೆಯಲ್ಲಿ ನಿಲ್ಲುತ್ತೇನೆ
ನಿತ್ಯ ದರ್ಶನದಲ್ಲಿ ಹನಿ ಪ್ರೀತಿಗಾಗಿ
ಬಾಯಾರಿ ಬೆಂಡಾಗಿ ಕಾದಿದ್ದೇನೆ
ಎದೆಯ ಪೆಟ್ಟಿಗೆ ತುಂಬ
ಕೋಟಿ ಕೋಟಿ ಕನಸುಗಳು!
ಈ ಕನಸು ಬೀಜಗಳೇ ಮೊಳೆದು
ಮುಗಿಲೆತ್ತರಕ್ಕೆ ಮತ್ತೆ ಮೊಳೆವ ಕನಸು!!

ಕನಸು ಬಯಕೆಗಳು ಬೆಸೆದು
ಬೆಳೆವುದೆಂದು ಕಾದಿದ್ದವಳ
ಕಣ್ಣಿಗೆ ಕಂಡದ್ದು ಕ್ಷಣದಲ್ಲಿ
ಗೋರಿಯಾಗಿ ಮಲಗಿದ್ದು!!

ಗಾಳಿ ಬೆಳಕುಗಳಿಲ್ಲ
ಮಣ್ಣು ಗೊಬ್ಬರವೂ ಇಲ್ಲ
ಮೊಳೆಯ ಬಾರದ ಹಠದಿ
ಮಲಗಿಬಿಟ್ಟಿವೆ ಇದ್ದಲ್ಲಿ ಇಲ್ಲದಂತೆ!

ಒಂದು ಕನಸಾದರೂ
ಚಿಗುರೊಡೆದು ಬರಲಿಲ್ಲ
ರೆಕ್ಕೆ ಮೂಡಿಸಿಕೊಂಡು
ಬಾಳಿನಾಗಸದಲ್ಲಿ ಹಾರಾಡಲಿಲ್ಲ
ಚೈತ್ರ ವಸಂತಗಳ
ಮಾವು ಮಲ್ಲಿಗೆ ಕೋಗಿಲೆ
ಮಾದಕ ಮಧುರ ಪ್ರಣಯ
ಪುಲಕಗಳೆಲ್ಲವೂ ಮಂಜುಗಡ್ಡೆ!

ಶಿಶಿರದಲಿ ಸಾವನಪ್ಪಿರಲು
ಗ್ರೀಷ್ಮದಲಿ ಬೂದಿಯಾಗಿರಲು
ಇನ್ನೆಲ್ಲಿಯ ಕನಸುಗಳು!
ಕೆಕ್ಕರಿಸಿ ನಿಂತಿವೆ ಕೊಲುವ ಮನಸುಗಳು!

ಇನ್ನೆಂದೂ ಕಾಡಬೇಡಿ ಕನಸುಗಳೇ
ಇರಿದು ಕೊಲ್ಲಲು ಬಾರದಿರಿ ಬಯಕೆಗಳೇ
ಅಳಿದುಳಿದ ಕನಸುಗಳೇ
ಹೊರಟು ಬಿಡಿ ನಿಮಗಿದೋ
ಹೇಳುವೆನು ವಿದಾಯ! ವಿದಾಯ!

## ಪ್ರೀತಿಯೆಲ್ಲಿದೆ ಇಲ್ಲಿ?

ಒಂದಕ್ಕೊಂದು ಮುಫತ್ತಾಗಿ
ಸಿಗುವ ಸಂಭ್ರಮ
ಅಪರ ರಾತ್ರಿಗಳಲ್ಲೂ
ಅಂತರಿಕ್ಷದ ಎಲ್ಲೆಗಳ
ಕ್ರಮಿಸಿ ರಾಕೆಟ್ಟು ರಾಯಭಾರಗಳ
ಕಳಿಸಿ ಗಗನ ಕುಸುಮಗಳ
ತರಿಸಿ ಹಿತ್ತಿಲಂಗಳದಲ್ಲಿ
ಬಿತ್ತುವ ಸವಲತ್ತು
ಹಣದ ಹೊಳೆಗೆ ಉಬ್ಬಿ
ಹರಿವ ಗತ್ತು ಗಮ್ಮತ್ತು
ಯಾರಿಗೂ ಜೀವ ಕೊಡುವ
ಪ್ರೀತಿ ಧಾರೆಗಳೆಲ್ಲ ಎಲ್ಲೋ
ಹಿಂಗಿ ಹನಿಹನಿಗೂ
ತವಕಿಸುವ ಕ್ಷಣಗಳೆಷ್ಟೋ!
ಮುಗ್ಧ ಹೂಗಳ ಗಂಧ
ಗಾಳಿಗೂ ತತ್ವಾರ
ಎಲ್ಲೆಲ್ಲೂ ಹೊಲಸು ನಾರುವ
ಚಿಲುಮೆಗಳ ಸರಣಿ
ಹೊಗೆ ಧೂಳಿನ ಮುಸಲ ಧಾರೆ
ಆತುರದ ನಡೆ
ಸಂಬಳ, ಬಡ್ತಿ, ಪ್ರಮೋಷನ್
ಗಳಿಗಾಗಿ ಪರದಾಟ, ವಟವಟ
ಆಕಾಶ ಸೌಧಗಳ
ಅಂಗಳಕ್ಕಿಳಿಸುವಲ್ಲಿ
ಕಿರುದಾರಿ ಕಳ್ಳದಾರಿಗಳ

ಶೋಧದಲಿ ಕೊಲಂಬಸ್ ಯಾತ್ರೆ
ಸಾಗಿದ ದೂರಗಳ ಅಳತೆಯಲಿ
ದಣಿದ ಕೈ ಕಾಲುಗಳು
ಸುಪ್ರಭಾತದ ಕಿರಣ
ಸ್ಪರ್ಷಕ್ಕೆ ಅರಳುವ ಪುಲಕ
ದನುಭವಕೂ ಮೊದಲೇ
ಕರೆವ ಸ್ಯೆರನ್ನು
ರೆಕ್ಕೆ ಮೂಡಿಸಿಕೊಂಡು
ಬಿರಬಿರನೆ ಸಾಗುವ ಹೆಜ್ಜೆ
ಮುಗ್ಧ ನಿದ್ದೆಯ
ಮಾದಕತೆಗೆ ಮೈಯ್ಯ ಮರೆತು
ಮುದ್ದು ಗೆನ್ನೆಯ ಕೆಂಪು
ಛವಿ ಹೊದ್ದು ಮಲಗಿದ
ಎದೆಯ ಕುಡಿಯ
ಜಾಗರದಲ್ಲಿ ತೊದಲಿ
ನುಡಿವ ಪ್ರಶ್ನೆಗೆಲ್ಲಿದೆ ಉತ್ತರ?
ಕೆಂಪು ಸಂಜೆಗಳೂ ಕರಗಿ
ಗುಮ್ಮಗತ್ತಲು ಕವುಚಿದಾಗ
ಮರಳಿದಪ್ಪ ಅಮ್ಮನ
ಅಪ್ಪುಗೆಯ ಸ್ಪರ್ಷಕ್ಕೆ
ನಿಸ್ಪಂದ! ನಿಟ್ಟುಸಿರು
ವೃದ್ಧಾಶ್ರಮದ ಕಿರುಕಿಂಡಿ
ಗಳಲ್ಲಿ ಕಣ್ಣೆರಿಸಿ ಕಾತರಿಸಿ
ಸಂಜೆ ಇಳಿಜಾರುಗಳಲ್ಲಿ
ನಿಂತು ಸುರಿವ ಕತ್ತಲ
ಧಾರೆಗಳಲ್ಲಿ
ಪ್ರೀತಿ ನಕ್ಷತ್ರ ಬೆಳಕ
ಹೀರುವ ಬಯಕೆಯಲಿ
ಮಂಜುಗಣ್ಣಿನೊಳಗಿಂದ
ಫಕ್ಕನೆ ಸಿಡಿವ ಮಿಂಚು?
ದಾಹ! ದಾಹ! ದಾಹ

ದಾಹದಾಹಾಕಾರವೆಲ್ಲೆಲ್ಲೂ
ಹಣದಾಹ! ಸುಖದಾಹ
ಸವಿದಾಹ! ಪ್ರೀತಿದಾಹ
ಆದರೆಲ್ಲಿದೆ ಇಲ್ಲಿ
ದಾಹ ತಣಿಸುವ ಪ್ರೀತಿ
ನೀತಿ! ರೀತಿ!!

# ವಿದಾಯ

[ಡಾ. ಚಿ.ನ. ಮಂಗಳಾ ಅವರಿಗೆ ಶ್ರದ್ಧಾಂಜಲಿ]

ಮಂಗಳಕ್ಕ ನಿನಗೆ ಬದುಕು ಬೇಸರವಾಯ್ತೆ?
ನಿನ್ನಂತೆಯೇ ನಾವೂ ಬಂದಿದ್ದೇವೆ ಅತಿಥಿಗಳು!
ನಮ್ಮೊಡನೆ ನಕ್ಕು ಅತ್ತು ಏನೆಲ್ಲ ಪಾಡು ಪಟ್ಟಿದ್ದೇವೆ
ಹಬ್ಬ ಪಬ್ಬ ಸಂಭ್ರಮ ಸಲ್ಲಾಪಗಳೆಂದು ನಲಿದಿದ್ದೇವೆ
ಆದರೇಕಿಷ್ಟು ಬೇಗ ನೀನು ಬಯಸಿದೆ ವಿದಾಯ?

ಬದುಕಿನಾಟ ಓಟಗಳಲ್ಲಿ ಎಂದಿಗೂ ಮುಂದೆ
ತಡವರಿಸಿ ನಡೆವಾಗ ನಮ್ಮ ಹೆಜ್ಜೆಗಳು
ನಿನ್ನ ಹೆಜ್ಜೆಗಳಿಗೆ ರೆಕ್ಕೆ ಮೂಡಿ ಮುಗಿಲನ್ನೇ ಮುಟ್ಟಿದೆ
ಹಿಂದಿಕ್ಕಿ ನಮ್ಮೆಲ್ಲರನು ನೀನು ಗುರಿಗಳನ್ನೇ ತಟ್ಟಿದೆ

ಇನ್ನಿಷ್ಟು ದಿನ ಬದುಕ ಬೇಕಿತ್ತು ಮಂಗಳಕ್ಕ
ನಿನ್ನ ಮಾಂತ್ರಿಕ ಸ್ಪರ್ಷಕ್ಕೆ ಸಿಗುವ ಕಾಷ್ಠಗಳೆಲ್ಲ
ಕೊನರಿ ನಳನಳಿಸಿ ಮುದಗೊಂಡು ಅರಳಿದವು
ನೀ ನಡೆದ ಮರುಗಳಲ್ಲಿ ಚಿಲುಮೆಗಳು ಚಿಮ್ಮಿದವು

ನಿನ್ನಕ್ಕ ತಂಗಿಯರ ಬದುಕುಗಳ ಉತ್ಖನಿಸಿ
ಹೆಕ್ಕಿ ತೆಗೆದೊಡ್ಡಿದೆ ಬೆಳ್ಳಿ ಬಂಗಾರ ರಾಶಿ ರಾಶಿ
ಮಣ್ಣ ಪದರುಗಳ ಅಜ್ಞಾತ ಮೂಲೆಯಲ್ಲಡಗಿ
ಮಂಕು ಬಿದ್ದ ಮಣಿಗಳ ತೆಗೆದು ಬೆಳಕಿಗಿಟ್ಟ

ನಿನ್ನೊಳಗೆ ಸದಾ ಹರಿವ ಪ್ರೀತಿಯ ಅಂತರ್ಜಲವ
ಮಂದಿಮಕ್ಕಳಿಗೆಲ್ಲ ಹಂಚುತಲೆ ನಡೆದೆ
ಹತಾಶ ಜೀವಿಗಳ ಅಸಂಖ್ಯ ಹೃದಯಗಳ ಗೆಲಿದೇ

ಕಲ್ಯಾಣ ಕಾರ್ಯಗಳ ನಾಂದಿಗೀತೆಯ ಕಲ್ಯಾಣಿಯಾದೆ
ಸ್ವಂತ ಸುಖ ಸವಿಗಳನು ಬದಿಗಿಟ್ಟು ಬಲಿಗೊಟ್ಟು
ನೊಂದವರ ಬೆಂದವರ ಹೊರೆಗೆಂದು ಹೆಗಲಕೊಟ್ಟೆ
ಕ್ಷೀಣದನಿಗಳ ಅಸ್ಪಷ್ಟ ಮೊರೆತಕ್ಕೆ ಬಲವ ಕೊಟ್ಟೆ
ಎಲ್ಲರೆದೆ ಪ್ರೀತಿ ಮಣ್ಣಲ್ಲಿ ಹಸನಾಗಿ ಬೇರುಬಿಟ್ಟೆ

ದಣಿಯದ ಬಲ ಸೋಲದ ಛಲಗಳ ನೆಮ್ಮಿ
ನುಗ್ಗಿ ನುಗ್ಗುತ ಕಾಡು ಕಡಿದು ದಾರಿಗಳ ತೆರೆದೆ
ದಿಕ್ಕು ತಪ್ಪಿ ದಾರಿ ಮರೆತವರಿಗೆಲ್ಲ ದಾರಿಯಂಚಲಿ. ನಿಂತು
ಬೆಳಕು ಚೆಲ್ಲುವ ದಾರಿ ಕಾಣಿಸುವ ದೀಪಧಾರಿಯಾದೆ

ಕರ್ಮಯಜ್ಞದ ಸಮಿಧೆ ನೀನಾಗಿ ಉರಿದುರಿದು
ಯಜ್ಞಫಲ ಪುಣ್ಯಗಳನೆಲ್ಲವನೂ ಹಂಚಿ ಬಿಟ್ಟೆ
ಅವಿಶ್ರಾಂತ ದುಡಿವ ದುಂಬಿಯ ತೆರದಲ್ಲಿ
ಸುಳಿದಾಡಿ ಅಲೆದಾಡಿ ಜೇನಕೊಡಗಳ ತುಂಬಿಕೊಟ್ಟೆ

ನಿನಗಲ್ಲ ನಿನ್ನೊಳಗೆ ಭರವಸೆ ತಳೆದ ನನ್ನವರಿಗೆ
ಕಟ್ಟಿಕೊಂಡ ಕನಸುಗಳ ನನಸಾಗಿ ಕೊನರಿಸಿದೆ
ನಿನ್ನಕ್ಷರ ಸೌಧದ ಕಲ್ಲು ಕಂಬ ಮಣ್ಣು ಇಟ್ಟಿಗೆಗಳ
ಉಸಿರಾಟದಲ್ಲಿ ಕೇಳಿ ಬರುತಿದೆ ನಿನ್ನ ಹೆಸರಿನುಸಿರು

ಜೀವನದಿಯಾದ ನಿನ್ನ ಪ್ರೀತಿಯ ಸೆಲೆ ಬತ್ತುವುದಿಲ್ಲ
ಪಾತ್ರಗಳು ಬದಲಾದರೂ ನಿನ್ನ ಹರಿವು ನಿಲ್ಲುವುದಿಲ್ಲ
ನಿನ್ನೆದೆಯ ಕಡಲು ಕಲಕಿದಷ್ಟೂ ಉಕ್ಕುಕ್ಕಿ ಹೊಮ್ಮುವ
ಅಮೃತ ಹಸಿದ ಜೀವಗಳಿಗೆಲ್ಲ ಸಂಜೀವಿನಿ

ನೀನೊಂದು ಬಾಡದ ವೃಕ್ಷ ಕಲ್ಪವೃಕ್ಷ
ಗ್ರೀಷ್ಮ ಶಿಶಿರಗಳು ನಿನ್ನ ಮುಟ್ಟುವುದಿಲ್ಲ
ಕೊಂಬೆ ಕೊಂಬೆಯ ತುಂಬ ಉತ್ಸಾಹ ಹೂವರಳಿ
ತುಂಬಿದೆಲ್ಲೆಡೆ ಕಂಪು ವಸಂತನ ಸೊಂಪು

ನಿನ್ನ ಕಂಠದ ಮೊಳಗೆ ಕಣ್ಣಿನ ಬೆಳಕು
ಇನ್ನೂ ಬೇಕಿರಲು ನಮಗೆ ಈಗಲೇ ಹೊರಟೆಯೇಕೆ?
ನಿನ್ನ ಪಳಿಯುಳಿಕೆಗಳ ನೆರಳಲ್ಲಿ ಸಾಗುವ ನಮಗೆ
ನಿನ್ನ ವಿದಾಯ ಗೀತೆಯ ಶೋಕ ಬೆಂಕಿ ಮುಳ್ಳು

ಪ್ರಾಯಕ್ಕೆ ಮೀರಿದ ನಿನ್ನ ಪ್ರಬುದ್ಧ ಕೈಗಳಲಿ
ನಿನ್ನಕ್ಕ ತಂಗಿಯರ ಬದುಕುಗಳೆಲ್ಲ ಕಲೆಯಾಗಿವೆ
ಶಾಶ್ವತಿಯ ಶಾಶ್ವತ ನೆನಪುಗಳ ಕೋಶವಾಗಿ
ಉಳಿದವಳು ವಿದಾಯಕ್ಕೆ ವಿದಾಯ ಹೇಳಬಾರದಿತ್ತೇ?

# ರುಡಾಕಿ ಕವಿತೆಗಳು

**(ಕಲಿಲಾಹ್ ವಾ ದಿ ಮ್ನಾಹ್)**

ಆದಮನ ಕಾಲದವರೆಗೆ
ಜ್ಞಾನಿಗಳಾಗದವರೊಬ್ಬರೂ
ಇರಲಿಲ್ಲ
ಭಿನ್ನ ಭಿನ್ನ ಭಾಷಿಕ ಬುದ್ಧಿವಂತ
ರೆಲ್ಲರೂ ಜ್ಞಾನದ ಬೆನ್ನಲ್ಲಿ ನಡೆದು
ಎದೆಗಪ್ಪಿಕೊಂಡು
ಕಲ್ಲುಗಳಲ್ಲಿ ಕೊರೆದು
ಸೆರೆಯಿಟ್ಟರು
ಜ್ಞಾನವು ಎದೆಯಲ್ಲಿ
ಉರಿವ ಹಣತೆ
ಲೇಪಿತ ಮೈಲಿಗೆಯ
ಕೇಡ ತಡೆ

೨

ಓ! ನೀನು ಶೋಕಿಸುತ್ತಿರುವೆ
ದುಃಖಿಸುತ್ತಿರುವೆ
ಮೌನದಲಿ ಕಂಬನಿಗಳ
ಮಿಡಿಯುತ್ತಿರುವೆ
ಹೋದದ್ದು ಹೋಗಲಿ
ಬಂದದ್ದದು ಬರಲಿ
ಆದದ್ದು ಆಗಲಿ
ಪ್ರಯೋಜನವಿಲ್ಲದಕ್ಕೆ
ಅಳುತ್ತಿರುವೆಯೇಕೆ?
ಜಗತ್ತನ್ನು ಗುರಿಯನ್ನು

ನಿಯಂತ್ರಿಸಲೆಂದಾದರೂ
ಅವರು ಬಲ್ಲರೇನು?
ಹುಚ್ಚು ಅಬ್ಬರ ಬೇಡ
ಜಗತ್ತು ಕೇಳಿಸಿಕೊಳ್ಳುವುದಿಲ್ಲ
ಶೋಕಿಸ ಬೇಡ
ಶೋಕಕ್ಕೆ ಯಾರೂ
ಕಿವಿಗೊಡುವುದಿಲ್ಲ
ಇಷ್ಟಾದರೂ ತರಬಲ್ಲೆಯೇನು
ಕಳೆದು ಹೋದದ್ದನ್ನು!
ನಿನ್ನೆದೆಯನೊಡೆಯಲು
ದುಃಖಗಳು
ಸೇನಾ ತುಕಡಿಗಳಾಗಿ ಬಂದಾಗ
ಮಧುಬಟ್ಟಲು ತರಿಸು – ಹಂಚು
ಅವರನ್ನು ಸದೆ ಬಡಿ
ಪರೀಕ್ಷೆಯನ್ನು ಎದುರಿಸು
ಕಷ್ಟಗಳೇ ಕೊರಳ ಬಳಸಿ
ಉಸಿರುಗಟ್ಟಿಸಿದಾಗಲೇ
ಮನುಷ್ಯನ ಔನ್ನತ್ಯ ಶ್ರೇಷ್ಠತೆ
ನಾಯಕತ್ವಗಳ ಅನಾವರಣ!!

೩

ಹೆಂಡದ ತಾಯನ್ನು (ದ್ರಾಕ್ಷಿ ಬಳ್ಳಿ) ಬಲಿಗೊಟ್ಟು
ಅವಳ ಮರಿಗಳನ್ನು (ದ್ರಾಕ್ಷಿಯನ್ನು)
ಹಿಡಿದು ಸೆರೆಮನೆಯಲ್ಲಿರಿಸಬೇಕು
ತಾಯೊಡಲಿಂದ ಕಸಿಯುವುದು
ನ್ಯಾಯವಲ್ಲವಾದರೂ
ಈ ಮಕ್ಕಳನ್ನು ಮಾತ್ರ
ಮುರಿದು ಹಿಸುಕಿ
ಸಾಯಿಸುವುದು ಬೇಡವೇ ಬೇಡ
ಏಳು ತಿಂಗಳು ಅಮ್ಮನ
ಹಾಲು ಕುಡಿದು

ಅರ್ದಿಬಿಹಿಸ್ತ್‌ನಿಂದ ಅಬಾನ್‌ನ
ವರೆಗೆ ಬೆಳೆಯಲಿರಿಸು
ಪುಟ್ಟಕೋಶದಲಿ
ತಾಯ ಕೊರಳ ಹಿಚುಕಿ
ಇಲ್ಲವಾಗಿಸು
ಆಗ ಒಪ್ಪಿತವಾದೀತು
ಧರ್ಮ–ಧರ್ಮಾತೀತ
ಕಾನೂನಿಗೆ
ಏಳು ದಿನ ಈ ಮಕ್ಕಳು
ಸೆರೆಯ ಮೌನದಲಿ ಈ
ಆಘಾತವ ಸಹಿಸಿ
ಸುಮ್ಮನಿದ್ದಾವಾದರೂ
ಅರಿವು ಮರುಕಳಿಸಿ
ಸಿಟ್ಟು ಸೆಡವಿನಲಿ ಸಿಡಿದೆದ್ದೂ
ಎದೆಯುರಿಯಿಂದ
ದುಃಖದಾವೇಗದಿಂದ
ಅಸ್ವಸ್ಥದಲಿ ಹೊರಳಿ ಹೊರಳಿ
ಬೆನ್ನು ಕೀಯುವವರೆಗೆ
ಬಿಕ್ಕಳಿಸಿ ಅತ್ತಾವು
ಉರಿವ ಬೆಂಕಿ ನೊರೆಯುಕ್ಕಿಸು
ವುದಾದರೂ ಉರಿವೆದೆಯ
ಬೆಂಕಿಗೆ ಅದು ಸಾಧ್ಯವಾಗದು
ಆದರೆ ಎದೆಯುರಿದು ನೊರೆ
ಬೆಂಕಿ ನೊರೆಯಲ್ಲ
ಅದು ಒಂಟೆ ಬಾಯಿ
ಹೊರ ಚೆಲ್ಲುವ ನೊರೆ
ಆಕ್ರೋಶದಿಂದ ಪಿಶಾಚಿ
ಒಗೆವ ನೊರೆ
ಬುಸು ಬುಸು ಬುಸುಗುಡುವ
ನೊರೆ
ಆವೇಶ ಉದ್ವೇಗಗಳು

ತಣ್ಣಾರಿದಾಗ ಗಡ್ಡೆಗಟ್ಟಿದ
ನೊರೆಯ ಮೇಲುಪದರವ
ಸೆರೆಯ ಕಾವಲುಗಾರ
ಸುಲಿದು ಬಿಡುತ್ತಾನೆ
ಆಗ ಆ ಮಕ್ಕಳ ಮೊಗ
ವಜ್ರವೈಢೂರ್ಯ ಕಾಂತಿಯಲಿ
ಫಳಫಳನೆ ಹೊಳೆಯುತ್ತವೆ
ಕೆಲವು ಕೆಂಪು ಹರಳುಗಳಂತೆ!
ಮತ್ತೆ ಕೆಲವು ಬದಕ್ಷಾನದ ತಿಳಿಗೆಂಪು
ಹರಳುಗಳಂತೆ!!
ಮೂಗರಳಿ ಕಂಪು ಹಿಡಿದಾಗ
ಮತ್ತೇರಿಸುವ ಕಸ್ತೂರಿ
ಗೌರೋಜಿನದ ಸೊಂಪು ಕಂಪು!!
ದೊಡ್ಡ ಗಾತ್ರದ ಪೀಪಾಯಿ
ಪಾತ್ರೆಗಳಲ್ಲಿ ಹೊಸ ವರ್ಷದ
ವರೆಗೆ – ಏಪ್ರಿಲ್ ಮಧ್ಯದವರೆಗೆ
ಗಮ್ಮತ್ತಾಗಿ ಕುಳಿತು ಬಿಡುತ್ತವೆ
ಆಗೊಮ್ಮೆ ಮಧ್ಯ ರಾತ್ರಿಯಲಿ
ಸರಿಸಿ ಬಿಡು ಮುಚ್ಚಳವ
ನೋಡು ಕಾದಿಹುದು
ನಿನಗೊಂದು ಪವಾಡ
ಸೂರ್ಯ ಪ್ರಭೆಯ ವರ್ತುಲ
ಗಾಜು ಬಟ್ಟಲಲಿ ಕೆಂಪುಹರಳು
ಮೋಸಸಿನ ಅಂಗೈಯ ಕಾಂತಿ

೪

ಈ ಸುಗಂಧದ ಮಧುವ
ಬಟ್ಟಲಲಿ ತುಂಬಿ
ಸಿಜಿಸ್ಥಾನದ ರಾಜ್ಯಪಾಲನ
ಕುಶಲಕ್ಕೆಂದು ರಾಜಕುಮಾರ
ಹೀರುತ್ತಾನೆ ಬಟ್ಟಲ ನೆತ್ತಿ

ಮಾತುಗಾರನಾದಲ್ಲಿ ಅವನ
ಗುಣಗಳ ಕೊಂಡಾಡು
ಬರಹಗಾರನಾದಲ್ಲಿ ಬಣ್ಣಿಸು
ಅವನ ಹಿರಿಮೆ–ಗರಿಮೆಗಳ
ಯಾರ ಹೊಗಳಿಕೆಗಾದರೂ
ಮಿತಿಯಿರುವುದಾದರೂ
ಇವನ ಹೊಗಳಿಕೆಗೆ
ಮಿತಿಯೆಂಬುದೇ ಇಲ್ಲ
ರುಡಾಕಿ ಸಮಯಕ್ಕೆದ್ದು
ನಿಲ್ಲದಿದ್ದಲ್ಲಿ, ಗರಬಡಿದು
ಮಾತಿಲ್ಲದೆ ನಿಶ್ಚಲ ನಿಂತಲ್ಲಿ ಅಚ್ಚರಿಯಿಲ್ಲ

೫

(ನಸ್ರಬಿ ಅಹಮದ್ ಹೆರಾತಿನಲ್ಲಿ ಅನಿರ್ದಿಷ್ಟ ಕಾಲ ನಿಲ್ಲುವ ಸೂಚನೆ ಕಂಡು ಬಂದಾಗ ರುಡಾಕಿ ಬರೆದ ಈ ಸಾಲುಗಳು ಆತನನ್ನು ಬುಖಾರಾಗೆ ಶೀಘ್ರವಾಗಿ ಹಿಂತಿರುಗುವಂತೆ ಮಾಡಿದವು)

ಸುಳಿಯುತ್ತಿದೆ ಗಾಳಿ
ಆಕ್ಸಸ್ ನದಿಯ ಕಂಪು ಹೊತ್ತು
ಮರುಕಳಿಸುತ್ತಿದೆ ಮನಕೆ
ಬಿಟ್ಟು ಬಂದ ಗೆಳೆಯರ ನೆನಪು
ತನ್ನೆಲ್ಲ ಕರ್ಕಶತೆಯಿರಿಸಿಕೊಂಡೂ
ಆಕ್ಸಸ್ ನದಿಯ ದಂಡೆಯ
ಮರಳು ಚೀನಾದ ರೇಶಿಮೆಯ
ನುಣುಪು! ನುಣುಪಿನ
ಅನುಭವ ಪಾದದಡಿಯಲ್ಲಿ
ಆಕ್ಸಸ್‌ನ ಶುಭಾಶಯಗಳ
ನೆನಪಿಸಿಕೋ
ಗೆಳೆಯರು ಹಿಂತಿರುಗಿದ
ಸಂಭ್ರಮದಲ್ಲಿ ಕುದುರೆಗಳ
ಕೆನೆತಕ್ಕೆ ಸರಿಸಾಟಿಯಾಗಿ
ಕುಣಿಯುತ್ತಿದೆ

ಓ ಬುಖಾರಾ ದೀರ್ಘಾಯುವಾಗು
ಗೆಲುವಾಗು
ಸಂತಸದ ಎದೆ ತುಂಬಿಸಿಕೊ
ಆತುರಾತುರದಿ ಬರುತಿಹನು
ಅಮೀರನಿನ್ನೆಡೆಗೆ
ಬುಖರಾ ಬಾನಾದರೆ
ಅಮೀರ ಚಂದ್ರಾಮನೆ ಸೈ
ಚಂದ್ರಾಮನೀಗ
ಆಕಾಶದ ಹಾದಿಯಲ್ಲಿದ್ದಾನೆ
ಬುಖಾರ ಉದ್ಯಾನವಾದರೆ
ಅಮೀರ ಸೈಪ್ರಸ್
ಈಗ ಸೈಪ್ರಸ್ ಉದ್ಯಾನದ
ಹಾದಿಯಲ್ಲಿದೆ

೬

ಕಪ್ಪು ಕಣ್ಣಿನ ಸುಂದರಿಯರೊಂದಿಗೆ
ಸುಖವಾಗಿರು
ಈ ಪ್ರಪಂಚವೊಂದು ಭ್ರಮೆ:
ಧೂಳಿನ ಮೋಡ
ಬಂದುದಕೆ ಬೇಸರ ಬೇಡ
ಹೋದುದನು
ಮತ್ತೆಂದೂ ಕರೆಯಬೇಡ
ಕಪ್ಪು ಗುಂಗುರ ಕೂದಲಿನ
ಹೆಣ್ಣು ನನಗಿರಲಿ
ಅಪ್ಸರೆ ಸೌಂದರ್ಯ ಹೊತ್ತು
ಹುಟ್ಟಿದ ಚಂದ್ರಮುಖಿ
ನನಗಿರಲಿ
ತಾನುಂಡೂ ಕೊಟ್ಟವನು
ಭಾಗ್ಯವಂತ ತಾನೂ ಉಣ್ಣದೆ
ಉಣಲೂ ಕೊಡದೆ
ಉಳಿದವನು ನಿಜದಿ ನಿರ್ಭಾಗ್ಯ

ದೇವರೆ! ಈ ಪ್ರಪಂಚ
ಸಾಗಿ ಮರೆಯಾಗುವ ಮೋಡ
ಮಧುಬಟ್ಟಲನು ನೀಡು
ಆಗುವುದೇನಾದರೂ ಆಗಲಿ!!

೭

ಮನಸು ಬುಖಾರಾ ಮತ್ತು
ತರಾಜ಼ದ ದೇವರುಗಳಿಗೆ ತುಡಿವಾಗ
ಮೆಕ್ಕಾದೆಡೆಗೆ ಮುಖಮಾಡುವುದೇಕೆ?
ದೇವರು ಬಯಸುವುದು ನಿನ್ನಿಂದ
ಪ್ರೇಮಿಯ ಆತ್ಮ ಸಮರ್ಪಣೆ
ದೀರ್ಘದಂಡ ನಮಸ್ಕಾರ
ಪ್ರಾರ್ಥನೆಗಳನ್ನು ಕೇಳುವುದಿಲ್ಲ
(ಶಹೀದನ ಮರಣದ ಸಂದರ್ಭದಲ್ಲಿ ಬರೆದ ಸಾಲುಗಳು)
ಶಹೀದನ ಪಯಣ ಮುಗಿಯಿತು
ನಾನೂ ಈಗ ಸಜ್ಜಾಗುತ್ತಿದ್ದೇನೆ
ನಾವು ಕಳೆದುಕೊಂಡದ್ದೇನೆಂದು
ಯೋಚಿಸು
ಕಣ್ಣು ಎರಡು ಗ್ರಹಿಸಿದಂತೆ
ವ್ಯಕ್ತಿಯೊಬ್ಬನನ್ನು
ಬುದ್ಧಿ ಗ್ರಹಿಸಿದಂತೆ ಸಾವಿರ
ಮಂದಿಯನ್ನು

೮

ಬೆಂಕಿಯಲ್ಲಿ ಹೊಗೆಯಿದ್ದಂತೆ
ದುಃಖದಲ್ಲೂ ಹೊಗೆಯಿದ್ದರೆ
ಮುಳುಗುತ್ತಿತ್ತು ಜಗತ್ತು
ಮುಗಿಯದ ಕತ್ತಲಲ್ಲಿ
ಕೊನೆಯೊಂದರಿಂದ ಮತ್ತೊಂದು
ಕೊನೆಯವರೆಗು ಶೋಧಿಸು
ಜಗದೊಳಗೆ ಸಿಗಲಾರ
ಸುಖಿಯೊಬ್ಬನೂ!!

## ಅಬುಶುಕೂರ್ ಬಾಲ್ಕಿ

(ಅಬುಶುಕೂರ್ ಬಾಲ್ಕಿ ರುಡಾಕಿಯ ಸಮಕಾಲೀನ ಕವಿಯಾಗಿದ್ದಾನೆ)

ಮಾತಿಗಿಂತ ಮೇಲಾದ್ದು
ಮತ್ತೇನೂ ಇಲ್ಲವಾದರೂ
ಮಾತುಗಾರ ಸುಶಿಕ್ಷಿತನಲ್ಲವಾದರೆ
ಮಾತಿಗೇ ಬೆಲೆಯಿಲ್ಲ
ದೊಡ್ಡ ವ್ಯಕ್ತಿಯ ಮಾತು
ಸುಂದರವಿರಲು ಭದ್ರಗೊಳ್ಳುತ್ತದೆ
ದಂತಕತೆಯಾಗುತ್ತದೆ
ದಾರಿಹೋಕನ ಕೈಯೊಳಗೆ
ಬದಕ್ಷಾನನ ರತ್ನವೂ
ಅಗ್ಗದಲ್ಲಿ ಬಿಕರಿಯಾಗುತ್ತದೆ
ರತ್ನಸಂಗ್ರಹಕಾರನಿಗೆ
ಆದರೆ ಅದೇ ರತ್ನವು
ದೊರೆಯ ಬೆರಳಿನುಂಗುರ
ದಿಂದ ಬಂದರೆ
ಸಂಗ್ರಹಕಾರನ ಕುತೂಹಲದ
ಕಣ್ಣಲ್ಲಿ ಅತ್ಯಮೂಲ್ಯವೆನಿಸುತ್ತದೆ
ನಷ್ಟದ ಹೊರತು ಲಾಭವೇನನ್ನೂ
ಗಳಿಸಲಾಗದ ಮಾತುಗಳೇಕೆ ನಿನಗೆ?
ನಾ ಕೇಳಿದ್ದೇನೆ–
ಮಾತಿಗೆ ನಾಲಿಗೆ ಇದೆಯಂತೆ
ವಜ್ರದಂತೆ, ಸಾಣೆ ಹಿಡಿದ
ಚಾಕುವಿನಂತೆ ಕತ್ತರಿಸಬಲ್ಲ
ತೀಕ್ಷ್ಣತೆ ಇದೆಯಂತೆ
ಧರ್ಮಪೀಠ, ಅರಮನೆಗಳನ್ನೂ

ಉಚ್ಚಾಟಿಸಬಲ್ಲುದು ಹಾವನ್ನೂ
ಹೊರಹಾಕಬಲ್ಲುದು ಮಾತು
ಮಾತು ವಿಷಕಾರಕವೂ ಹೌದು
ವಿಷಹಾರಕವೂ ಹೌದು
ಬಿಸಿ... ತಂಪು... ಕಹಿ... ಸಿಹಿ
ಮಾರಕ... ಪರಿಹಾರಕ
ಏಕಕಾಲಕ್ಕೆ ಎಲ್ಲವೂ ಹೌದು
ನಾಲಗೆಯಿಂದ ಹೊಮ್ಮುವ
ಕೆಡುಮಾತು ಹುತ್ತದಿಂದ
ಹೊರಹೊಮ್ಮುವ ಹಾವಿನಂತೆ
ಅದಕೇ ಅದರಿಂದ
ದೂರವಿರು – ರಕ್ಷಿಸಿಕೋ
ಇಲ್ಲವಾದಲ್ಲಿ ಅದು ಕಚ್ಚದೆ
ಸುಲಭದಲಿ ಬಿಡುವುದಿಲ್ಲ
ಜ್ಞಾನ ಪಡೆಯಲೆತ್ನಿಸು ಬೇಗ
ಬುದ್ಧಿ ಔನ್ನತ್ಯಗಳಿಂದ ಅದು
ನಿನ್ನನಲಂಕರಿಸುವುದು
ಎತ್ತರದವನಾಗಿರುವುದಿಲ್ಲ
ವಿದ್ವಾಂಸರು ಜ್ಞಾನಿಗಳಿಂದ
ಮಾರ್ಗದರ್ಶನ ಬಯಸಿ
ಚಕ್ರವರ್ತಿಗಳೂ ಬಾಗುವುದನ್ನು
ನೋಡಿಲ್ಲವೇನು?
ದೀರ್ಘಾಯು ದೀರ್ಘಾಧಿಕಾರ
ಗಳಿದ್ದರೂ ಜ್ಞಾನಿಗಳ ನೆರವಿನಿಂದ
ಯಾಚನೆಯಲ್ಲಿ ಇರುತ್ತಾರೆ
ನಿನ್ನ ಸಂಪತ್ತನ್ನು ನೀನು
ರಕ್ಷಿಸಿಕೊಳ್ಳಬಲ್ಲೆ
ಆದರೆ ನನ್ನ ರಕ್ಷಿಸುವವರು
ಯಾರು?
ರಕ್ಷಕನಿಗೆ ರಕ್ಷೆ ಜ್ಞಾನ!
ಜ್ಞಾನದಿಂದ ವ್ಯಕ್ತಿ

ಚಾರಿತ್ರ್ಯಶುದ್ಧನಾಗುತ್ತಾನೆ
ಸಂತನೊಬ್ಬ ನುಡಿದ ಹೀಗೆ:
‘ಆಪತ್ಕಾಲದಲ್ಲಿ ಜ್ಞಾನ
ಆಶ್ರವೀಯುತ್ತದೆ
ಹಾದಿ ತಪ್ಪಿದಾಗ
ಸರಿಹಾದಿಗೆ ಕೊಂಡೊಯ್ಯುತ್ತದೆ

# ದಾಖೀಖಿ

ಈ ಜಗತ್ತಿಗೆ ರಾತ್ರಿ ಎಂಬುದೇ
ಇಲ್ಲದಿದ್ದರೆ
ಅವಳ ತುಟಿಗಳಿಂದ (ಬಲವಂತದ)
ಅಗಲಿಕೆಯೇ ಇರುತ್ತಿರಲಿಲ್ಲ
ಅವಳ ಕುರುಳುಗಳು
ಚೇಳಿನಂತಿರುತ್ತಿರಲಿಲ್ಲವಾದರೆ
ನನ್ನಾತ್ಮಕ್ಕೆ ಚೇಳು ಕೊಂಡಿಗಳು
ಇಳಿಯುತ್ತಲೇ ಇರಲಿಲ್ಲ
ಅವಳ ತುಟಿಗಳಡಿಯಲ್ಲಿ
ನಕ್ಷತ್ರಗಳು (ಹಲ್ಲುಗಳು) ಇಲ್ಲದಿದ್ದಲ್ಲಿ
(ನಿದ್ದೆಯಿಲ್ಲದ ರಾತ್ರಿಗಳಲ್ಲಿ) ನನಗೆ
ಬೆಳಗಿನವರೆಗೆ ಗೆಳೆಯರೇ
ಇರುತ್ತಿರಲಿಲ್ಲ
ಸೌಂದರ್ಯದ ಸಾಕಾರವೇ
ಅವಳಾಗಿರದಿದ್ದಲ್ಲಿ
ಅವಳ ಪ್ರೀತಿಯೊಂದಿಗೆ
ನನ್ನಾತ್ಮ ಬೆಸೆದುಕೊಳ್ಳುತ್ತಿರಲಿಲ್ಲ
ಗೆಳೆಯನೇ ಇಲ್ಲದೆ
ಬದುಕಬೇಕಾಗಿದ್ದಲ್ಲಿ
ಬದುಕೇ ನನಗೆ
ಬೇಡವಾಗುತ್ತಿತ್ತು

# ಫಿರ್‌ದೌಸಿ

(ಸುಲ್ತಾನ್ ಮಹಮ್ಮದ್‌ನ ಮೇಲೆ ಬರೆದ ವಿಡಂಬನ ಕವಿತೆ, – ಷಾಹ್‌ನಾಮಾದಿಂದ)

ಓ! ಜಗದ್ವಿಜೇತ ಮಹಮ್ಮದನೇ
ಯಾರಿಗಂಜದಿದ್ದರೂ ಬೇಡ
ಆದರೆ ಆ ದೇವನಿಗೆ ಅಂಜಿ ನಡೆ
ನಿನಗೂ ಮೊದಲು ಈ
ಭೂಮಂಡಲವನಾಳಿದವರೆಷ್ಟು
ಮಂದಿಯೋ – ಲೆಕ್ಕವಿಲ್ಲ!
ಸ್ಥಾನಮಾನ, ಅಧಿಕಾರ ಅಂತಸ್ತು
ಕಿರೀಟ ಸಿಂಹಾಸನ ಸಿರಿತನಗಳಲ್ಲಿ
ನಿನ್ನನೂ ಮೀರಿದ ಶ್ರೇಷ್ಠರೆಷ್ಟೋ!!
ಸ್ವರ್ಣ ಮೋಹದ ಸೆರೆಯಲ್ಲಿಹ
ದೊರೆಯ ಮೆಚ್ಚುವುದಿಲ್ಲ
ತಿಳಿದವರಾರೂ
ಇಂದು ಸಿಂಹಾಸನ
ನಿನ್ನದಾಗಿರಬಹುದು
ಹಾಗೆಂದು ವಿವೇಚನೆಯಿಲ್ಲದೆ
ಮಾತಾಡಬಹುದೆ ಮನಬಂದಂತೆ
ನನ್ನ ಸೂಕ್ಷ್ಮ ಮನಸ್ಸು
ಕಾಣಲಿಲ್ಲವೇ? ಅಥವಾ
ಕೊಲೆಗಡುಕ ತೀಕ್ಷ್ಣತೆಯನ್ನು
ಗ್ರಹಿಸಲಿಲ್ಲವೇ?
ಕಾಫಿರನೆಂದು ನನ್ನ ಕರೆವೆಯೇನು?
ನಾನೊಂದು ಪುರುಷ ಸಿಂಹ
ಕುರಿಯೆಂದು ಕರೆಯುವೆ ಹೇಗೆ?
ನನಗೆ ಸಾವಿನ ಬೆದರಿಕೆಯ

ಹಾಕಿದೆ
ಆನೆ ಕಾಲಿನಿಂದ ತುಳಿಸುತ್ತೇನೆಂದೆ
ತುಳಿಸಿ ನೈಲ್ ನದಿಯ
ದಂಡೆ ಮರಳಿನಂತೆ
ಪುಡಿಗುಟ್ಟಿಸುತ್ತೇನೆಂದೆ!
ನನ್ನದೆಯಲ್ಲಿ ಪ್ರವಾದಿ
ಅಲಿಯರ ಪ್ರೀತಿಯಿರುವವರೆಗೆ
ಬೆದರಿಕೆಯ ಹೆದರಿಕೆಯಲ್ಲ
ಜಗತ್ತು ಹೀಗೆಯೇ
ಮುಂದುವರೆಯುತ್ತದೆ
ದೊರೆಗಳು ಆಳುತ್ತಲೇ ಇರುತ್ತಾರೆ
ಪ್ರತಿಯೊಬ್ಬರ ಎದೆಯ
ಬಾಗಿಲು ಹೊಗುತ್ತದೆ
ನನ್ನ ಸಂದೇಶ
"ಫಿರ್‌ದೌಸಿಯ ನೇರ
ನಿಷ್ಠುರ ಆತ್ಮ ಶಾಹನಾಮ
ಸುಲ್ತಾನ್ ಮಹಮ್ಮದನಿಗೆ
ಅಂಕಿತವಾಗಲಿಲ್ಲ"
"ವಿಚಾರ ಮಾತುಮುತ್ತುಗಳಿಂದ
ಸಂಪನ್ನ ಈ ಭಂಡಾರವನ್ನು
ಪ್ರವಾದಿ ಮತ್ತು ಅಲಿಗೆ ಅರ್ಪಿಸಿದ"
ಫಿರ್‌ದೌಸಿಗೆ ಸಮನಿಲ್ಲ
ಪ್ರತಿಭೆಯಲಿ ಹಾಗೂ ದೌರ್ಭಾಗ್ಯದಲಿ
ಎಂಬತ್ತನೇ ಈ ವಯಸ್ಸಿನಲಿ
ಆಸೆ, ಭರವಸೆಗಳೆಲ್ಲ
ಏಕಕಾಲದಲ್ಲೀಗ ಮಣ್ಣುಪಾಲಾದವು
ವೇಗದೋಟದಲಿ ಸಾಗುವ
ಈ ಭೂಮಂಡಲದಿ
ವಿಶ್ರಾಂತಿಯೆಂಬುದೇ
ತಿಳಿದಿಲ್ಲ ನನಗೆ
ನಷೆಯ ಭರವಸೆಯಲ್ಲಿ

ಎಷ್ಟೊಂದು ನೋವು ಸವಿದೆ
ಉಜ್ವಲ ಮಹಾಕಾವ್ಯದಲಿ
ಎರಡು ಮೂವತ್ತು ಸಾವಿರ
ಪದ್ಯಗಳ ಕಟ್ಟಿದೆ
ಅವೆಲ್ಲವೂ ರಾಶಿ ರಾಶಿ
ಶಬ್ದ ಚಿತ್ರಗಳ ಮೆರವಣಿಗೆ
ಖಡ್ಗಗಳು ಬಾಣಗಳು ಬಿಲ್ಲುಗಳು
ತೊಗಲ ಚಬುಕುಗಳು
ಧೀರಯೋಧರ ಶಿರಸ್ತ್ರಾಣಗಳು
ಢಾಲುಗಳು ಕವಚಗಳು
ಇರಿಸಿದ ಜಾಣ ಬಲೆಗಳು
ಮರುಭೂಮಿಗಳು ಸಮುದ್ರಗಳು
ಬತ್ತಿದ ನದಿ ತೀರಗಳು
ತೋಳಗಳು ಸಿಂಹಗಳು
ಆನೆಗಳು ಚಿರತೆಗಳು
ಮಾಟಗಾತಿಯರು
ಡ್ರ್ಯಾಗನ್‌ಗಳು ಮೊಸಳೆಗಳು
ರಾಕ್ಷಸರ ಮೋಸ
ದೆವ್ವಗಳ ಮಾಯೆ ಮತ್ತು
ಸ್ವರ್ಗದತ್ತ ಹೆಜ್ಜೆ ಹಾಕುತ್ತಿರುವ
ಆತ್ಮಗಳ ಸಂಕಟದ ಕೂಗುಗಳು
ಯುದ್ಧವೀರರು, ದ್ವಂದ್ವ
ಹೋರಾಟದಲ್ಲಿನ ಶತ್ರುಗಳು
ವೀರಸೇನಾಧಿಕಾರಿಗಳ
ಪ್ರಲಾಪಗಳು ಪ್ರತಿಶೋಧಗಳು
ಖ್ಯಾತನಾಮ ದೊರೆಗಳಾದ
ತೂರ್, ಸಲ್ಮ, ಅಫ್ರಾಸಿಯಾಬ್
ಕಯ್ಯಾಕಿಅಸ್, ಕೇಬುಸ್ರಾ
ಉಕ್ಕಿನ ದೇಹದ ರುಸ್ತುಂ;
ದಾರಾನ ಮಗ ದಾರಾ ಬಹಮನ್
ಮತ್ತು ಅಲೆಕ್ಸಾಂಡರ್, ದೊರೆಗಳ ದೊರೆ

ಅರ್ದಾಶಿರ್, ಅವನ ಮಗ ಶಾಪೂರ್
ಬಹ್ರಾಂಗುರ್ ಮತ್ತು ನ್ಯಾಯವಂತ
ನುಷೀರ್‌ವಾನ್
ಈ ಎಲ್ಲಾ (ಪಿಷ್ದಾದಿಯಾನ್ ಕಯಾನಿಯಾನ್ ಮತ್ತು ಸಾಸಾನಿಯನ್)
ದೊರೆಗಳನ್ನು ಚಿತ್ರಿಸಿದ್ದೇನೆ
ಮರಳಿ ಜೀವದಾನ ಮಾಡಿದ್ದೇನೆ
ಅನಂತಕಾಲದವರೆಗೆ ಮರೆತು
ಮರೆಯಾಗಿದ್ದವರು
ನನ್ನ ಕವಿತೆಯ ಸಾಲುಗಳಲ್ಲಿ
ಜೀವ ಪಡೆದು ಎದ್ದು ನಿಂತಿದ್ದಾರೆ
ಏಸುವಿನಂತೆ ನಾನು ಅವರ
ಹೆಸರು ಹಿಡಿದು ಕರೆದರಷ್ಟೇ
ಸಾಕು – ಸಮಾಧಿಗಳಿಂದ
ಒಬ್ಬೊಬ್ಬರೇ ಎದ್ದು ಬರುತ್ತಾರೆ
ನಿನ್ನನ್ನೂ ಅವರಂತೆಯೇ
ಅಮರವಾಗಿಸಬೇಕೆಂದಿದ್ದೆ
ಚಿರಂತನವಾಗಿ ಉಳಿಯ
ಬೇಕೆಂದು ಕಲ್ಲು ಮಣ್ಣುಗಳಿಂದ
ಕಟ್ಟಿಸುವ ಕಟ್ಟಡಗಳೂ
ಬಿಸಿಲು ಗಾಳಿ ಮಳೆಗಳಿಂದ
ಕುಸಿದು ನಾಶವಾಗಿಯೆ
ಹೋಗುತ್ತವೆ ಕಾಲ ಪ್ರವಾಹದಲಿ
ಅದಕ್ಕೆಂದೇ ನಾನು ನನ್ನ
ಕವಿತೆಯ ಸಾಲುಗಳಿಂದ
ನಿನಗೊಂದು ಸ್ಮಾರಕ ಕಟ್ಟಿ
ಗಾಳಿ, ನೀರುಗಳ ಆಘಾತದಿಂದ
ಉಳಿಸಿ ಚಿರಂತನ ಸಾಕ್ಷಿಯಾಗಿ
ಇರಿಸಬೇಕೆಂದಿದ್ದೆ
ಈ ಸ್ಮಾರಕ ಕಾಲಾತೀತ ನಿಲ್ಲುತ್ತದೆ
ಇದನ್ನೋದುವ ಜಾಣರು
ಮತ್ತೂ ಜಾಣರಾಗುತ್ತಾರೆ

ನೀನಾಗಿದ್ದರೆ
ನನ್ನ ಕೃತಿಯ ಬಗ್ಗೆ
ವಿಚಾರ ಮಾಡುತ್ತಿದ್ದೆ
ಮಹಾದ್ಭುತ ಕಲಾಕೃತಿ ಇದೆಂದು
ಅನನ್ಯ ಸೃಷ್ಟಿಯಿದೆಂದು
ಒಪ್ಪಿ ಭಾಷೆಗೆ ನ್ಯಾಯ ಸಂದಿದೆ
ಎಂದು ಕೊಂಡಾಡುತ್ತಿದ್ದೆ
ನನ್ನ ಕಾವ್ಯದಿಂದ ಭೂಮಿಯನ್ನು
ಸ್ವರ್ಗವಾಗಿಸಿದ್ದೇನೆ
ಏಕೆಂದರೆ ಮಹಾಕಾವ್ಯದ ಬೀಜಗಳು
ಹಿಂದೆಂದೂ ಬಿತ್ತಿರಲಿಲ್ಲ
ನನಗೂ ಮೊದಲು ಕವಿಗಳಿದ್ದರು
ಕವಿತೆಗಳನ್ನು ಬರೆದರು
ಆದರೆ ನನ್ನಂತೆ ನನ್ನ ಶೈಲಿಯಂತೆ
ಬರೆದವರು ಎಷ್ಟು ಮಂದಿ?
ಒಬ್ಬರೂ ಇಲ್ಲ!
ನನ್ನ ಕಾವ್ಯವ ದೊರೆ ಲಕ್ಷಿಸಿದ್ದರೆ
ನಾನಿಂದು ಸಿಂಹಾಸನವನೇರಿ
ಮೆರೆಯುತ್ತಿದ್ದೆ
ಅಜ್ಞಾನಿಯಾದವನು ಎಂದಾದರೂ
ಸಂಪತ್ತಿನ ರಕ್ಷಕನಾಗ ಬಲ್ಲನೇ?
ವೀರಯೋಧನ ಅನಿವಾರ್ಯತೆ
ಅರಿಯ ಬಲ್ಲನೇ
ಸುಲ್ತಾನನ ರಕ್ತದಲಿ ಯೋಗ್ಯತೆಯ
ಗುಣವಿಲ್ಲದಿರಲು ಆಚರಣೆಯಲ್ಲಿ
ಯೋಗ್ಯತೆ ಕಾಣುವುದಾದರೂ ಹೇಗೆ?
ದೊರೆಯಿಂದ ದೊರೆತದ್ದು ನನಗೆ
ಹೆಂಡಕಾಗುವಷ್ಟು ಬೆಲೆ ಮಾತ್ರ!
ಅರಮನೆಯ ಛಾವಣಿಯಿಂದ
ಉದುರಿದ್ದೂ ಹೆಂಡಕಾಗುವಷ್ಟು ಬೆಲೆ!
ಅಯೋಗ್ಯರನ್ನು ಹಾಡಿ ಹೊಗಳುವುದು

ಭರವಸೆಗಳನ್ನು ನಿರೀಕ್ಷಿಸುವುದು
ಸುಖದ ದಾರಿಗಳ ಕಳೆದುಕೊಂಡಂತೆ
ಎದೆಯಲ್ಲಿ ಕಾಳೋಗರವ ಇರಿಸಿಕೊಂಡಂತೆ
ಮುಳ್ಳುಗಳಿಂದ ದ್ರಾಕ್ಷಿ
ಪಡೆಯಲಾಗುವುದಿಲ್ಲ
ಕಂಟಿಗಳಿಂದ ಅಂಜೂರ
ಹುಟ್ಟುವುದಿಲ್ಲ
ಕೆಟ್ಟ ಮರವನ್ನು ಸ್ವರ್ಗದಲ್ಲಿ
ಬೆಳೆಸಿದರೂ ಕೆಡಕು ಬಿಡದು
ಎಲಿಸಿಯಸ್ ನದಿಗಳಿಂದ
ನೀರಿಗೆ ಬದಲಾಗಿ
ಜೇನನ್ನೇ ಹಾಯಿಸಿದರೂ
ಅದೆಲ್ಲವನ್ನೂ ನುಂಗಿ ನೊಣೆದು
ಕಹಿ ಹಣ್ಣುಗಳನ್ನೇ ಬಿಡುವುದು
ಸುಗಂಧಿಗಳ ಹಾದು ಸಾಗಿದರೂ
ಸಾಕು – ಉಟ್ಟುಡುಗೆಯೆಲ್ಲವೂ
ಗಂಧ ಸಿಂಧೂರ ಸ್ನಿಗ್ಧ!
ಇದ್ದಿಲ ವ್ಯಾಪಾರಿಯ ಸಂಗ ಸಾರಲು
ಇದ್ದಿಲ ಕಪ್ಪಲ್ಲದೆ
ಮತ್ತೊಂದು ಬೇರೆ ಬರಲುಂಟೆ?
ಕೆಡುಕರ ಸಂಗದಿಂದ
ಕೇಡು ಘಟಿಸುವುದು ಅಸಹಜವಲ್ಲ
ಕತ್ತಲು ರಾತ್ರಿಯ ಬಿಟ್ಟಿರದು
ಅಂತೆಯೇ ಕೇಡು ಕೆಟ್ಟವರ
ತೊರೆದೆಂದೂ ದೂರವಿರದು
ನೀಚಕುಲ ಜಾತನಲಿ
ಆಸೆಗಳಿಗೆ ಅವಕಾಶವೇ ಇರದು
ಎಥಿಯೋಪಿಯಾದವನನ್ನು
ಮೀಯಿಸಿ ಎಷ್ಟೇ ತೊಳೆದರೂ
ಕಪ್ಪು ಬಣ್ಣ ಬಿಡುವುದುಂಟೆ!

(ಎಥಿಯೋಪಿನ ಕಪ್ಪು ಬಿಡುವುದಿಲ್ಲ; ಚಿರತೆಯ ಮೈಯ್ಯ ಚುಕ್ಕಿಗಳು ಮರೆಯಾಗುವುದಿಲ್ಲ)

ನೀಚನಿಂದಲೇ ಒಳಿತ ನಿರೀಕ್ಷಿಸುವುದು ಕಣ್ಣಲ್ಲಿ
ಧೂಳೆರಚಿಕೊಂಡಂತೆಯೇ!!
ಅವನನ್ನು ಅವನಿರುವ ಹಾಗೆಯೇ
ದೇವರು ಸೃಷ್ಟಿಸಿರಲು ಅದು
ದೈವರಹಸ್ಯವೇ ಇರಬೇಕು
ಆ ರಹಸ್ಯಕ್ಕೆ ಕೀಲಿಕೈ ಸಿಗದು
ಬಾಯಿ ಮಾತಿನ ಭರವಸೆಗಳಿಂದ
ಹಿರಿತನವನಳೆಯದಿರು
ನುಡಿದರ್ಥವನಾಚರಿಸಿದರೆ
ಇನ್ನೂರು ಭರವಸೆಗಳೂ ಅದಕೆ
ಸರಿ ತೂಗಲಾರವು
ಉತ್ಕೃಷ್ಟವಾದ ಈ ಪದ್ಯಗಳ
ಬರೆದಿದ್ದೇನೆ – ದೊರೆಗೆ ಮುಂದಾದರೂ
ಸರಿ ಹೊತ್ತಲ್ಲಿ ಎಚ್ಚರಿಕೆಯಾಗಲಿ
ಬೇರೆ ಯಾವ ಕವಿಗಳನ್ನೂ
ಮುಂದೆಂದೂ ಹೀಗೆ ಕಾಣದಿರಲಿ
ಅವರ ವ್ಯಂಗ್ಯ ಕವಿತೆಗಳಿಂದ
ತಲೆ ತಗ್ಗಿಸುವಂತಾಗದಿರಲಿ

# ಮನು ಚೆಹ್ರಿ

(ದ್ರಾಕ್ಷಿಗಳ ಕುರಿತು)

ದ್ರಾಕ್ಷಿ ಕಸ್ತೂರಿ ಬಣ್ಣದ ಹೆಣ್ಣು
ಬಸಿರು ಕಸ್ತೂರಿ ಚೀಲದಂತೆ
ಬಸಿರಲ್ಲಿ ಜೀವ ಒಂದು
ಹೃದಯ ಮೂರು ಆದರೆ
ಈ ಮೂರು ಎಲುಬಿನ ತುಂಡುಗಳು
ಹೇಳುತ್ತಾರೆ ಹೃದಯದಲ್ಲಿ
ಪ್ರಾಣಿಯ ಬದುಕಿದೆ ಎಂದು
ಆದರೆ ಅವಳ ಬದುಕು
ಹೃದಯ ಆತ್ಮವೆಲ್ಲವೂ ಮೂಳೆಯೇ
ಬದುಕಿಗೆ ಬಣ್ಣವಿದೆಯೆಂದರಿಯೆ
ಆದರವಳ ಬದುಕಿಗೆ
ತೋಟದಲ್ಲಿನ ಟ್ಯುಲಿಪ್‌ಗಳ
ಬಣ್ಣವಿದೆ
ಬದುಕಿಗೆ ಪರಿಮಳವಿಲ್ಲ
ಆದರವಳ ಬದುಕಲ್ಲಿ
ಕಸ್ತೂರಿಯ ಕಂಪಿದೆ
ಆ್ಯಂಬರ್ ಅಳಲೆಗಳ
ಕಂಪಿನ ಸೊಂಪೂ ಇದೆ
ದ್ರಾಕ್ಷಿ ಕಪ್ಪಾಗಿದೆ; ಚಂದ್ರನಂತಿದೆ
ಕಪ್ಪೂ ಚಂದ್ರನ ಗುಣಗಳಲ್ಲಿ
ಒಂದೆಂದರೆ ಅಚ್ಚರಿಯೇಕೆ!
ಬಸಿರಾದ ಅಪರಾಧವೊಂದಲ್ಲದೆ
ಅಪರಾಧವಿಲ್ಲ
ಆಕೆಯಾಗಷ್ಟೇ ಪ್ರಾಯಕ್ಕೆ

ಬಂದಿರುವ ಕನ್ನೆ
ಗಂಡನ ಸಂಗತವಿಲ್ಲದೆ
ಬಸಿರಾದಳು ಅಮ್ರಾನ್‌ನ
ಮಗಳಂತೆ!
ಆದರಿವಳ ಕತೆ ಅದಕ್ಕಿಂತ
ರೋಚಕ; ರಂಜಕ
ಉಸಿರಿನ ಸೋಂಕಿನಲಿ ಮೇರಿ
ಬಸಿರಾದರೆ ಇವಳು
ಉಸಿರು ತುಟಿಗಳ ಸ್ಪರ್ಷ
ವಿಲ್ಲದಲೇ ಬಸಿರಾದಳು
ಅಮ್ರಾನ್‌ನ ಮಗಳು
ಮಗನಿಗೆ ಜನ್ಮ ಕೊಟ್ಟಳು
ಆದರೆ ದ್ರಾಕ್ಷಿ ಬಳ್ಳಿಯ
ಮಗಳು ಬದುಕಿಗೆ ದಾರಿಯಾದಳು
ಅದು ಸಕಲ ಸೃಷ್ಟಿಯ ದೇವರ
ಆತ್ಮವಾದರೆ ಈ ಮಧು
ಎಲ್ಲ ಸೃಷ್ಟಿಯ ದೇವರು
ಅವನನ್ನೆಳೆದು ಸೆರೆಯಿಟ್ಟು
ಹಿಂಸಿಸಿ ಕೊಂದರು
ಅವಳನ್ನು ಕೊಂದು ಹಿಂಡಿ
ಬಸಿಯುತ್ತಾರೆ... ವಿಚಿತ್ರವಲ್ಲವೇ!
ಅವನು ಒಂದಿಬ್ಬರಿಗೆ
ಜೀವದಾನ ಮಾಡಿರಬಹುದು
ಇವಳು ಲೋಕಕ್ಕೇ
ಜೀವದಾನ ಮಾಡಿ ಉಳಿಸಿದ್ದಾಳೆ
ಬದುಕಿನಲ್ಲಿ ಸಾವು ಪ್ರೇತಾತ್ಮವಾದರೆ
ಸಾವಿನಲ್ಲಿ ಬದುಕು ಅವಳಾಗಿದ್ದಾಳೆ
ಯಹೂದಿಗಳು ಕ್ರಿಸ್ತನ
ಕೊಲ್ಲ ಬಯಸಿದರು
ಅವಳನ್ನು ಜಗತ್ತೇ
ಕೊಲ್ಲ ಬಯಸುತ್ತದೆ
ಅವನು ಅವರಿಂದ ಏನೆಲ್ಲ

ಅನುಭವಿಸಿದ
ಅವಳು ಅನುಭವಿಸಿ
ಕಳೆದುಕೊಂಡದ್ದೆಷ್ಟು?
ವಿಚಾರಣೆಯ ನಂತರ
ಅವನಿಗೆ ಪೂರ್ಣಾನುಗ್ರಹ
ಸ್ವರ್ಗದ ಅರಮನೆ ಅವನಿಗಾದರೆ
ಅವಳಿಗೆ ರಾಜಮಹಾರಾಜ
ಮಂತ್ರಿಗಳ ವರದ ಹಸ್ತ

***

[ಮೇಣದ ಬತ್ತಿಗಳನ್ನು ಕುರಿತು]
ನಿನ್ನಾತ್ಮ ನಿನ್ನ ಹಣೆಯ
ಮಧ್ಯದಲ್ಲಿ ಪ್ರಕಾಶಿಸುತ್ತದೆ
ಆತ್ಮಕ್ಕೆ ದೇಹವೇ ಆಸರೆ
ದೇಹಕ್ಕೆ ಆತ್ಮವೇ ಆಸರೆ
ನಕ್ಷತ್ರವಲ್ಲದಿದ್ದರೆ ರಾತ್ರಿಯಲ್ಲಿ
ನೀನೇಕೆ ಕಾಣಿಸಿಕೊಳ್ಳದೆ ಇರುತ್ತಿದ್ದೆ
ಪ್ರೇಮಿಯಲ್ಲದಿದ್ದರೆ ನನಗಾಗಿ
ನೀನೇಕೆ ಅಳದೆ ಇರುತ್ತಿದ್ದೆ
ನೀನು ನಕ್ಷತ್ರ ಆದರೆ ಆಕಾಶ ಮೇಣ
ನೀನು ಪ್ರೇಯಸಿ ಆದರೆ
ಪ್ರೇಮಿ ಒಂದು ಹರಿವಾಣ
ಎಲ್ಲರೂ ದೇಹದ ಹೊರಗೆ
ಅಂಗಿಧರಿಸಿದರೆ
ನೀನು ದೇಹದ ಒಳಗೆ
ಅಂಗಿ (ಬತ್ತಿ) ಧರಿಸಿದ್ದೀ
ನೀನು ಸಾಯುವುದಾದರೆ
ಬೆಂಕಿ ನಿನ್ನ ಪ್ರಾಣ ಉಳಿಸುತ್ತದೆ
ನಿನ್ನ ದೇಹಸ್ಥಿತಿ ಕೆಟ್ಟಾಗ
ನಿನ್ನ ತಲೆ ಕತ್ತರಿಸುವುದೇ ಚಿಕಿತ್ಸೆ
ಅಳುವಾಗಲೂ ನೀ ನಗುತ್ತೀ
ಇದೊಂದು ಅಪರೂಪವೇ ಸರಿ.!
ನಿನಗೆ ನೀನೇ ಪ್ರೇಮಿ

ಪ್ರೇಮಿಸುವ ಪ್ರೇಮಿಸಿಕೊಳ್ಳುವ
ಹೆಣ್ಣು – ಎರಡೂ ನೀನೇ
ವಸಂತಬಾರದೆಯೂ
ಅರಳಿ ನಗುವ ಹೂವು ನೀನು
ಮಾಗಿಯಿಲ್ಲದೆಯೂ ಬಾಡುವೆ ನೀನು
ಕಣ್ಣಿಲ್ಲದೆ ಕಂಬನಿಗರೆವೆ
ಬಾಯಿಲ್ಲದೆ ಮುಗುಳ್ನಗುವೆ
ರಾತ್ರಿಯಲಿ ನಿದ್ರಿಸುವುದು ಸಹಜ
–ಆದರೆ ನಿನಗಾಗಿ ರಾತ್ರಿಯಲ್ಲಿ ಎಚ್ಚರವಿದ್ದು
ಸೂರ್ಯೋದಯದಲಿ ಸುಖವಾಗಿ ನಿದ್ರಿಸಿದೆ
ನಿನ್ನಿಂದ ಅಗಲಿ ಸೂರ್ಯನಿಗೆ ಶತ್ರುವಾದೆ
ನಿನ್ನ ಸಂಧಿಸಿ ಸಂಗಮಿಸಿ
ಕತ್ತಲ ಸ್ನೇಹಿಯಾದೆ
ಇಬ್ಬರೂ ನಾವು ನಗುತಲಿದ್ದೇವೆ
ಕರಗುತ್ತಿದ್ದೇವೆ; ಉರಿಯುತ್ತಿದ್ದೇವೆ
ಒಂಟಿತನವ ಅನುಭವಿಸುತ್ತಿದ್ದೇವೆ
ದುಡಿದಿದ್ದೇವೆ; ದಣಿದಿದ್ದೇವೆ
ಅಗ್ನಿ ಪರೀಕ್ಷೆಗಳ ಗೆದ್ದಿದ್ದೇವೆ
ನನ್ನೆದೆಯ ಜ್ವಾಲೆ ನಿನ್ನ ಶಿರದ ಮೇಲಿರಿಸಿದೆ
ನಿನ್ನ ಶಿರದ ಮೇಲಿನದನ್ನು ನನ್ನೆದೆಯ
ಗೂಡಿನಲಿ ಭದ್ರವಿರಿಸಿದ್ದೇನೆ
ಸೂರ್ಯೋದಯಕೆ ನಿನ್ನ ಮೊಗ
ಸೂರ್ಯಕಾಂತಿಯಾದರೆ
ನನ್ನ ಮೊಗ ಹುಲ್ಲುಗಾವಲಿನಲ್ಲಿ
ಬಾಡಿ ಸೋತ ಹೂವಿನಂತಿದೆ
ನನ್ನೆಲ್ಲ ಗೆಳೆಯರನ್ನೂ ಆತ್ಮೀಯರನ್ನೂ
ಪರಿಚಿತರನ್ನೂ ಪರೀಕ್ಷಿಸಿದ್ದೇನೆ
ಯಾರಿಂದಲೂ ಸಹಾಯ ಸಾಧ್ಯವಿಲ್ಲ
ಎಂಬ ಸತ್ಯದ ಸಾಕ್ಷಾತ್ಕಾರ ಪಡೆದಿದ್ದೇನೆ
ನೀನೇ ನಂಬುಗೆಯ ನೆಂಟ
ಗೆಳೆಯ; ಸಹಾನುಭೂತಿಯ ಸಖ
ನಾನು ನಿನಗೆ, ನೀನು ನನಗೆ!!

# ನಾಸಿರ್ – ಇ – ಖುಸ್ರಾ

(ಬೀಳುವ ಮುನ್ನ ಅಳಿವ ಅಹಂಕಾರ)

ಒಂದು ದಿನ ಗರುಡ ಬೆಟ್ಟದ
ತಲೆಯಲ್ಲಿ ರೆಕ್ಕೆ ಹರಡಿ
ಹೆಮ್ಮೆಯಲಿ ಹಾರಿತ್ತು ಆಕಾಶಕ್ಕೆ
ಗೆದರು ಗರಿಗಳನವಲೋಕಿಸುತ್ತ
ಮೆಚ್ಚುಗೆಯಲಿ ಮಾತು ಬಿಚ್ಚಿತು
ನನ್ನ ರೆಕ್ಕೆಯಡಿಯಲ್ಲಿ
ಭೂಮಿ ಚಾಚಿಮೈ ಮಲಗಿದೆ
ಇನ್ನೊಂದಿಷ್ಟು ಎತ್ತರ ಹಾರಿದರೆ
ಇನ್ನೊಂದಿಷ್ಟು ಎತ್ತರ ಹಾರಿದರೆ
ಸೂರ್ಯನನ್ನೇ ದಾಟಿ ಮೀರಬಲ್ಲೆ;
ಬಾಗಿ ನೋಡಿದರೆ ಕೆಳಗೆ
ಸಮುದ್ರದೆದೆಯಾಳದ
ಅಣು ಅಣುವನ್ನೂ ಅವಲೋಕಿಸಬಲ್ಲೆ
ಕಸದ ಅಣುವನ್ನೂ ಅವಲೋಕಿಸಬಲ್ಲೆ
ಕಸದ ರಾಶಿಯಲಿ ಕದಲುವ
ನೊಣವನ್ನು ಕೆದಕಿ ನೋಡಬಲ್ಲೆ
– ಹೆಮ್ಮೆಯಲಿ ಬಿಂಕದಲಿ
ಬೀಗಿ ಬಣ್ಣಿಸಿಕೊಂಡರೂ ಅದು
ವಿಧಿಯನರಿಯಲಿಲ್ಲ
ದ್ರೋಹಿಯಾಗಸವದಕೆ
ಕಲಿಸಿದ ಪಾಠ ತಿಳಿಸಲೆಂತು!!
ಅನಿರೀಕ್ಷಿತದಿ ಅಗೋಚರದಲಿ
ಎಲ್ಲಿಂದಲೋ ಎರಗಿ ಬಂದ
ಮೊನಚು ಬಾಣ

ನಾಟಿತು ಎದೆಯ
ಹರಿಯಿತು ರೆಕ್ಕೆಯ
ಆಕಾಶವೇ ಅದರ ಸಾಮ್ರಾಜ್ಯ
ವೆಂದು ಬೀಗಿದ್ದು ಬಿತ್ತು
ಅಲ್ಲಿಂದಲೇ ಚೀರಿತು ರೆಕ್ಕೆ
ಫಡಫಡಿಸಿ ಮೀನಿನೊಲು
ತತ್ತರಿಸಿ ಎಡಬಲಕೆ ಹೊರಳಿ
ಹೊರಳಿ ಸಾವನ್ನಪ್ಪಿದ್ದು
ವಿಧಿಯಾಟ; ದೇವರಾಟ!!
ಕಬ್ಬಿಣದ ಪುಟ್ಟ ಬಾಣಕ್ಕೆ
ಇಷ್ಟೊಂದು ತೀಕ್ಷ್ಣತೆ ವೇಗಗಳೆ!
ಎಚ್ಚರದಲಿ ಅಚ್ಚರಿಗೆ ಸಂದಿತ್ತು
ನೋಡಲದು ಬಾಣವೇ?
ಪರಿಕಿಸಿತ್ತು ಸೂಕ್ಷ್ಮದಲಿ
ಬಾಣವಲ್ಲದು ತನ್ನ ಸ್ವಂತ
ಗರಿಯೆಂಬ ಸತ್ಯದರಿವಿನಲಿ
ತನ್ನನ್ನೇ ಹಳಿದಿತ್ತು – ತಾನೇ ಹೊಣೆ
ಎನಲು ದೂರನೊಯ್ಯಲಿ
ಯಾರಿಗೆಂದು ತನಗೆ ತಾನೇ
ಸಾಂತ್ವನಕೆ ಸಂದಿತ್ತು
ಮನದ ಮೂಲೆಯಲಿ
ಮೆಲುಕಾಡುವ ಅಹಂಕಾರವ
ತೊರೆದು ಗರುಡ ಗರ್ವದ
ಪರಿಣಾಮದ ಪರಿಯನೆಂದೂ
ಮರೆಯದಿರು

# ಖತ್ರಾನ್

**(ತಾಬ್ರಿಜ್‌ನಲ್ಲಿ ನಡೆದ ಭೂಕಂಪ)**

ಸಂಪತ್ತು ಸುರಕ್ಷೆ ಸೌಂದರ್ಯ
ಸೌಹಾರ್ದತೆಗಳಲ್ಲಿ
ತಾಬ್ರಿಜ್‌ಗೆ ತಾಬ್ರಿಜ್ ಮಾತ್ರವೇ
ಸರಿಸಾಟಿಯಲ್ಲದೆ ಮತ್ತೊಂದಿಲ್ಲ
ಅವರವರ ವೃತ್ತಿ ನಿರತತೆಯಲ್ಲಿ
ರಾಜಕುಮಾರ, ಮಂತ್ರಿ, ಸಾಮಂತ
ಸೇವಕ ದಂಡನಾಯಕರೆಲ್ಲ
ಸುಖಿಗಳು; ಮಹಾಸುಖಿಗಳು
ಆದರೊಂದು ಕ್ಷಣ!
ಒಂದೆ ಒಂದು ಕ್ಷಣದಲ್ಲಿ
ಹೊಮ್ಮಿ ಚಿಮ್ಮಿತು ನಿಟ್ಟುಸಿರು
ತಾಬ್ರಿಜ್‌ನತ್ತ ದೇವರು ದೂಡಿದ
ಸಾವಿನಿಂದ, ಸಂಪತ್ತೆಲ್ಲವೂ
ಗುಡಿಸಿ ಹೋಯಿತು
ಎತ್ತರದ್ದೆಲ್ಲವೂ ಕುಸಿದಿತ್ತು
ಕುಸಿದಿದ್ದೆಲ್ಲವೂ ಏರಿತ್ತು
ಬೆಟ್ಟ ಗುಡ್ಡಗಳು ಮರಳು ದಿಣ್ಣೆಗಳಾಗಿ
ಮರಳು ದಿಣ್ಣೆಗಳು ಬೆಟ್ಟಗಳಾದವು
ಉಕ್ಕಿ ಹರಿಯಿತ್ತು ನೀರು
ಜಾರಿ ಬಿದ್ದವು ಪರ್ವತಗಳು
ಮುಗಿಲ ಮುತ್ತಿಡುವ ಭವನಗಳು
ಭೂಮಿಯ ತಬ್ಬಲೆಂದುರುಳಿದವು
ಮುಗಿಲೆಡೆಗೆ ಚಾಚಿದ
ಕೊಂಬೆರೆಂಬೆಯ ಹಸ್ತಗಳು

ಮಂಗಮಾಯವಾದವು
ಎಲ್ಲವೂ ನಿರ್ನಾಮ ನಿರ್ನಾಮ!
ಯಾವುದೇನೆಂದು ಅರಿಯಲಾಗದ
ಅವ್ಯವಸ್ಥೆ ಸಾಮ್ರಾಜ್ಯ!!
'ಚೀರಬೇಡ! ಅಳಬೇಡ!
–ಎಂದೆಲ್ಲಾ ಸಾಂತ್ವನ ನುಡಿಯೆ
ಮಂದಿಯೊಬ್ಬರೂ ಉಳಿದಿಲ್ಲ
ಉಳಿದಿದ್ದರೂ ಜೀವವೊಂದಾದರೂ
ಕಂಡದ್ದು ಕಂಬನಿಯ ಕಡಲಲ್ಲಿ
ನರಳಿಕೆ ನೇಣಿನಲಿ
ಮುಲುಗುತ್ತ ಮುದುಡಿ
ಕುದುರೆಗೊರಸಿನಾಕಾರದಲಿ
ಪರಿಪೂರ್ಣತೆ ಪರಾಕಾಷ್ಠೆಗಳೇ
ಈ ವಿನಾಶಕ್ಕೆ ದಾರಿಯೆನಲು
ದೂರವಿರಿಸಲಿ ಆ ಭಗವಂತ
ಈ ಪರಿಪೂರ್ಣತೆ ಪರಾಕಾಷ್ಠೆಗಳ!!
ಹೆಣ್ಣುಗಳು ಹಲವಾರು ನನ್ನೆದೆಯ
ಕದಿಯಲು ಅಣಿಯಾಗಿದ್ದರು
ಗಂಡಸರು ನನ್ನ ಆಲೋಚನೆಗಳ
ಅಪಹರಿಸಲೆಂದಿದ್ದರು
ಆವುದನೂ ಲಕ್ಷಿಸದೆ ಅವರ
ಪ್ರಶ್ನೆಗಳ ಕೇಳ ಬಯಸುತ್ತೇನೆ
ಎಚ್ಚರದಿಂದ ಉತ್ತರಗಳ ಹೇಳ ಬಯಸುತ್ತೇನೆ
ಒಂದು ಗುಂಪು ಸತ್ತು ಸಮಾಧಿಯಾದರೆ
ಮತ್ತೊಂದು ಭೀತಿ ತಲ್ಲಣಗಳಿಂದ
ಹುಚ್ಚರಾದರು
ಸತ್ತವರ ಸಂಖ್ಯೆ
ಮೀರಿದ್ದರೂ ಕಂಡಿದೆ ಕಣ್ಣಿಗೆ
ಜೀವವೊಂದಾಗಲೀ ಕಟ್ಟಡವಾಗಲೀ
ಸುಂದರವೂ ಸಮನೋಹರವೂ
ಆದದ್ದು ತಾಬ್ರಿಜ್‌ನಲ್ಲಿ

ನೆನಪಾಗಿಯೂ ಉಳಿದಿಲ್ಲ
ವಿಕೃತ ವಿನಾಶ ಪರಾಕಾಷ್ಠೆಯ
ಅಂಚಿನಲಿದ್ದರೂ ಭೂಕಂಪಗಳು
ಸಾವಿನ ಸಂದೇಶವನ್ನು
ಸಾರುತ್ತ ಬೊಬ್ಬೆಯಿಟ್ಟಿವೆ

## ಉಮರ್ ಖಯ್ಯಾಂ

೧

ಶುಕ್ರ ಚಂದ್ರರು ಆಗಸದಿ
ಅವತರಿಸಲು ಮಧುವಲ್ಲದೆ
ಮತ್ತೊಂದ ಕಾಣಲಾರರು
ಮದ್ಯಕ್ಕಿಂತ ಮಿಗಿಲಾದುದನು
ಮದ್ಯ ಮಾರುವವರು
ಕೊಳ್ಳುವುದೆಂದರೆ ಅಚ್ಚರಿಯೆ!!

೨

ಖಯ್ಯಾಂ, ಮಧುಪಾನ ಮತ್ತ
ನಾಗಿಹೆಯಾ ಖುಷಿಯಾಗಿರು
ಚಂದ್ರಮುಖಿಯಾಗಿರು
ಸುಖವಾಗಿರು
ಇಂತಿರುವುದನು ಬಿಟ್ಟರೆ
ನಿನಗೆ ನೀನಿಲ್ಲವೆಂದೇ ತಿಳಿ
ಅದಕೆಂದೆ ಇರುವಾಗ ಖುಷಿಯಾಗಿರು

೩

ಮಧುವ ಸೇವಿಸು – ೭೨ ರೀತಿಯ
ಚಿಂತೆಗಳ ಕೊರತೆಗಳ ದೂರವಿರಿಸು
ಮಧುವ ನೀಂಟುವುದನು
ಬಿಡದಿರು – ದೂರ ಸರಿಯದಿರು
ಒಂದು ಹನಿ ಮಧುವಲ್ಲಿ
ಚಿಂತೆ ನೂರು ಸಾವಿರಕೂ ಪರಿಹಾರ

೪

ಸ್ವರ್ಗವ ಕೇಳಿ ಬಲ್ಲೆ ನಂದನ
ಮಧುವಿನೊರತೆಗಳು
ಕ್ಷೀರಧಾರೆಗಳು ಸಕ್ಕರೆ ರಾಶಿ
ಅಪ್ಸರೆಯರನುಪಮ ಚೆಲವು
ಮಧುವ ಬಟ್ಟಲ ತುಂಬಿ ಕೊಡು
ನನಗಷ್ಟೇ ಸಾಕು ಕನ್ನಡಿಯ
ಗಂಟಿಗಿಂತ ಮಿಗಿಲು ಕೈಯೊಳಗಿನ
ದಂಟೆಂಬಂತೆ – ಈ ಮಧು ಬಟ್ಟಲು

೫

ಮಧುಪಾತ್ರೆಗಿಂತ ಮಿಗಿಲೆ
ಸ್ವರ್ಗ ಮಧುಪರ್ಕ ಕ್ಷೀರ
ಅಪ್ಸರೆಯರ ಹಿಂಡು
ಪ್ರೇಯಸಿಯ ಸಹವಾಸ
ಸಾಮೀಪ್ಯದಲಿ ಈಂಟುತಿಹೆ
ಈ ಮಧುವ – ಇದಕಿಂತ
ಮಿಗಿಲಾದುದೇನ ಬಯಸಲಿ ನಾ!

೬

ಕುಡಿಯಲೇ ಬೇಡವೇ
ಸುಖಿಸಲೆ ಸುಖಿಸದಿರಲೇ
ಎಂಬ ಚಿಂತೆಯ ತೂಗುಯ್ಯಾಲೆ
ಯಲಿ ದಿನವೆಷ್ಟು ಕಳೆಯಲಿ ಹೀಗೆ!

೭

ಅವರು ಹೇಳುತ್ತಾರೆ – ಸ್ವರ್ಗ ಅದ್ಭುತ!
ಅಪ್ಸರೆಯರ ಅಂದ, ಮಂದಹಾಸ!!
ನಾ ಹೇಳುತ್ತೇನೆ – ಈ ದ್ರಾಕ್ಷರಸವೇ!!
ಅದಕ್ಕಿಂತ ಮಧುರ ಸುಖ
ಸಾಲವ ಮರೆತು ಸಂಪದವನನುಭವಿಸು
ದೂರ ಮದ್ದಲೆಯ ಓ ಧೀರ ಸಂಗೀತವೇ!

೮

ಸಾಗಿ ನಡೆದಿದೆ ಬದುಕು ಪಯಣ
ಕೈ ಜಾರಿ ಹೋಗುವ ಕ್ಷಣಗಳ
ಅನುಭವಿಸು ಎಲ್ಲೆಯಿಲ್ಲದಂತೆ
ಮಧುಪಾತ್ರೆ ಚದುರೆ ನಾಳಿನಾ
ಚಿಂತೆಯಲಿ ಸವೆಯದಿರು
ತಾ ಮಧುಬಟ್ಟಲನು ಬೇಗ
ಕಳೆದು ಹೋಗಲಿದೆ ರಾತ್ರಿ ಈಗ

೯

ಪಾನಿಗರು ನಾವಿರಲು ಪಾನ
ಶಾಲೆಗೆ ಲಾಭವೋ ಲಾಭ
ಸಹಸ್ರ ಶಪಥಗಳು ಎನ್ನಾತ್ಮದಲಿ
ನಾನಪರಾಧವೆಸಗದಿರೆ
ದೈವಕೃಪೆಗೆಲ್ಲಿಹುದು ಕೆಲಸ!!
ನಾವೆಸಗುವ ಪಾಪಗಳ
ಕತ್ತಲು ಕವಿಯದಿರಲು ಅವನ
ಕರುಣೆಯ ಬೆಳಕಿಗೆಲ್ಲಿ ನೆಲೆ!

೧೦

ನಾ ಪಾಪಿ ಸೇವಕ, ಎಲ್ಲಿದೆ ನಿನ್ನ ದಯೆ?
ಇರುಳು ಕತ್ತಲೆ ಮನೆ ದೂರ
ಎಲ್ಲಿಹುದು ತೋರು ನಿನ್ನ ಬೆಳಕು
ಸದ್ಗುಣಗಳ ಮೆಚ್ಚಿ ನಮಗೆ
ಸ್ವರ್ಗವನು ಬಹುಮಾನಿಸಿದರೆ
ಅದು ದಯೆಯಾಗದು
ಬರಿ ವ್ಯಾಪಾರವೆನಿಸುವುದು ನಿನ್ನ

೧೧

ಅಪರಾಧಗಳನೆಸಗದಿಹನು
ಆವನಿಹ ತೋರೆನಗೆ

ಪಾಪರಹಿತರು ವರ್ತಿಸುವರೆಂತೆಂದು
ತಿಳಿಯ ಹೇಳೆನಗೆ
ಒಳಿತಿಗೆ ಪ್ರತಿ ಒಳಿತು
ಕೆಡುಕಿಗೆ ಪ್ರತಿ ಕೆಡುಕು
–ಹೀಗಿರುವುದೇ ನಮ್ಮ ವ್ಯವಹಾರ
ನಿನ್ನ ವ್ಯವಹಾರವೂ ಇದೇ
ಮಾದರಿಯಾದರಲ್ಲಿ ಹೇಳು
ನಿನ್ನ ನಮ್ಮ ನಡುವೆ ವ್ಯತ್ಯಾಸವೇನು?

೧೨

ನನ್ನ ಹಾದಿಯಲಿ ಹರಡಿಹೆ
ಸಹಸ್ರಾರು ಮೋಹಪಾಶಗಳ ಜಾಲ
(ಆತ್ಮ ಪತನ ಅನಿವಾರ್ಯವಾಗಿಸಿ)
ಹೆದರಿಸುತ್ತೀ – ಹೇಳುತ್ತೀ
ದೂರವಿರು ಪಾಪಗಳಿಂದ –
ಇಲ್ಲವಾದಲ್ಲಿ ನಿನ್ನ ಶಿಕ್ಷಿಸುವೆ

೧೩

ಜಗದಣು ಅಣುವೂ ನಿನ್ನಾಣತಿಯಂತೆ
ವರ್ತಿಸುತ್ತಿರಲು – ಸೇವಿಸುತ್ತಿರಲು
ನನ್ನನ್ನು ಪಾಪಿಯೆಂದು ನೀ ಕರೆಯೆ
ಚಿತ್ರಮ್ ವಿಚಿತ್ರವೆನಿಸುವುದು
ಪಾಪವೆಸಗುವ ಪ್ರಚೋದನೆಯೂ
ನಿನ್ನಿಂದಲೇ ಅಲ್ಲವೇ!!
ಇಂತಿರಲು ದಂಡನೆಯು ಸರಿಯೆ!!!

೧೪

ಅಮರತ್ವ ನಿಗೂಢತೆ
ನಿನಗಾಗಲಿ ನನಗಾಗಲೀ ತಿಳಿದಿಲ್ಲ
ಅಂತೆಯೇ ಗುರಿಯನೂ
ಅರಿತಿಲ್ಲ ನೀನೂ ನಾನೂ

ಮುಸುಕಿನೊಳಗಿಂದಲೇ
ನನ್ನ ನಿನ್ನ ನಡುವೊಂದು ಸಣ್ಣ ಸಂವಾದ
ಮುಸುಕು ಮೇಲೆತ್ತಲು
ಜಾರುವುದು ಪರದೆ
ನನ್ನ ನಿನ್ನ ಮೇಲೆ

೧೫

ಕತ್ತಲೆಯ ಪಾತಾಳದಿಂದ ಶನಿಯ
ತೇಜೋಲೋಕದ ವರೆಗಿನ
ಪ್ರಶ್ನೆಗಳನೆಲ್ಲ ಉತ್ತರಿಸಬಲ್ಲೆ
ಬಗೆ ಬಗೆಯ ಗೋಜಲು ಗಂಟು
ಗಳನೆಲ್ಲ ಬಿಡಿಸಿ ಇರಿಸಬಲ್ಲೆ
ಆದರೀ ಜನನ ಮರಣದ ಸಿಕ್ಕು
ಬಿಡಿಸುವಲ್ಲಿ ಸೋಲನುಂಡೆ
ನನ್ನಾತ್ಮದ ಜ್ಞಾನದ ಹಸಿವಿಗೆ
ನಿಲುಗಡೆಯೆಂಬುದೇ ಇಲ್ಲ
ನನ್ನರಿವಿನ ಎಟುಕಿಗೆ ಹೊರತಾಗಿ
ಉಳಿದದ್ದು ಕೆಲವು ನಿಗೂಢಗಳಷ್ಟೇ!
ಎಪ್ಪತ್ತೆರಡರ ಪ್ರಾಯದಲ್ಲಿ
ಹಗಲಿರುಳ ಗಂಭೀರ ಚಿಂತನೆ
ಯಲ್ಲಷ್ಟೇ – ನನಗೇನೊಂದೂ
ತಿಳಿದಿಲ್ಲವೆಂಬ ಸತ್ಯ ಸಾಕ್ಷಾತ್ಕಾರ
ವಾಯಿತೆನಗೆ!!

೧೬

ಕಿರಿತನವ ಕಳೆದು ಹಿರಿತನದ
ಗುರುವೆನಿಸಿದ್ದು – ಅಲ್ಪ ಸಮಯ
ಗುರುವು ನಾನೆಂಬ ಸಂತಸವಿತ್ತು
ನನ್ನ ಕಟ್ಟ ಕಡೆಯ ವಿಧಿಯೇನೆಂಬುದ
ಕೇಳಿಸಿಕೋ – ಧೂಳಿನಿಂದ
ಮೇಲೆಬ್ಬಿಸಿ ಧೂಳಾಗಿ
ತೂರಿ ಬಿಟ್ಟರು ನನ್ನ ಗಾಳಿಯಲಿ

೧೮

ಗಗನ ಚುಂಬಿ ಮಹಲುಗಳ
ಎತ್ತರದ ಗೋಡೆಗಳು
ಅರಸರೂ ಹಣೆ ಉಜ್ಜುತ್ತಿದ್ದ
ಅವುಗಳ ಮೇಲೆ ಕೋಗಿಲೆಯೇ
ಅಲ್ಲ, ಏನೊಂದೂ ಕಾಣಲಿಲ್ಲ
ಅಚಾನಕದಲಿ ಎಲ್ಲಿಂದಲೋ
ಕರೆಯೊಂದು ಕೇಳಿಸಿತು
ಎಲ್ಲಿ? ಎಲ್ಲಿ? ಎಲ್ಲಿ?
ಕುಹೂ ! ಕುಹೂ ! ಕುಹೂ !

೧೯

ಮಧುಪಾನ ಮತ್ತನಾಗಿ ಕಳೆದ
ರಾತ್ರಿಯೊಂದು ಮಣ್ಣಿನ ಮಧು
ಪಾತ್ರೆಯನು ಕಲ್ಲಿಗೊಡೆದು
ಬೀಳಿಸಿದೆ; ಮುರಿದೆ
ಮಧುಪಾತ್ರೆ ಹೇಳಿತು ಬಿಕ್ಕಳಿಸಿ
"ಹಿಂದೆ ನಾನೂ ನಿನ್ನಂತೆಯೇ ಇದ್ದೆ
ನಾಳೆ ನೀನೂ ನನ್ನಂತೆಯೇ ಆಗುವೆ"

೨೦

ಚಕ್ರದ ಮುಂದೆ ಕಾರ್ಯಮತ್ತ
ಕುಂಬಾರನ ಕಂಡೆ
ಅಪೂರ್ಣವಾಗಿದ್ದ ಆ ಕುಂಭಗಳಿಗೆ
ತಲೆ ಹಿಡಿಗಳನು ಹೊಂದಿಸುತ್ತಿದ್ದ
ಕುಂಭಕ್ಕೆ ಕೊಟ್ಟ ತಲೆ
ಮಣ್ಣಾದ ರಾಜನ ತಲೆ ಬುರುಡೆ
ಯಿಂದಾಗಿತ್ತು – ಕುಂಭಕ್ಕೆ ಮೆತ್ತಿದ
ಹಿಡಿ ಮಣ್ಣಾದ ಭಿಕ್ಷುಕನ
ಕೈಗಳಿಂದಾಗಿತ್ತು

೨೧

ಆಯ್ಕೆಯ ಅವಕಾಶವಿದ್ದರೆ
ಬರುತ್ತಿದ್ದೇವೇನು?
ಆಯ್ಕೆ ಅವಕಾಶವಿದ್ದರೆ
ಹೋಗುತ್ತಿದ್ದೇವೇನು?
ಈ ಶೂನ್ಯ ಪ್ರಪಂಚಕ್ಕೆ
ಬರುವ ಹೋಗುವ
ಹುಟ್ಟುವ ಸಾಯುವ
ಸಂದರ್ಭವೇ ಬಾರದಿದ್ದಲ್ಲಿ
ಎಷ್ಟು ಚಂದವಿರುತ್ತಿತ್ತು!

# ಹಂಜಾಲಾಹ್

[ಕ್ರಿ.ಶ. ೯ನೇ ಶತಮಾನದಲ್ಲಿ 'ಅಬ್ದುಲ್ಲಾ'ನ ರಾಜಾಸ್ಥಾನದಲ್ಲಿದ್ದ ಕವಿ]

೧

ನನ್ನ ಪ್ರೇಮದ ಹುಡುಗಿ
ಕೆಟ್ಟ ದೃಷ್ಟಿಯ ತಡೆಯೆ
ನಾಗದಾಳದ ಬೀಜ
ಬೆಂಕಿಗೆಸೆಯೆ
ಬೆಂಕಿಯೂ ಬೀಜವೂ
ಅವಳೇ ಅವಳಾಗಿರಲು
ಬರುವ ಭಾಗ್ಯವೇನು?

೨

ಸಿಂಹದ ಬಾಯಲ್ಲಿ ಅಧಿಕಾರ
ಇದೆಯೆಂದಾದರೆ
ಎದೆಗೆಡದೆ ಮುನ್ನುಗ್ಗು
ಕಸಿದಿಕೋ ಅದನು
ಶ್ರೇಷ್ಠತೆ, ಗೌರವ, ಸಿರಿ
ಅಧಿಕಾರವೋ ಇಲ್ಲ
ಧೀರನಿಗೆ ಶೂರನಿಗೆ
ಮುಖಾಮುಖಿ
ದೊರೆವ ಸಾವೋ!

## ಅಬು ಸಾಲಿಕ್

೧

ಇಳೆಯಲ್ಲಿ ರಕ್ತ ಚೆಲ್ಲುವುದಾದರೆ
ಅಪ್ಪುಗೆಯಲ್ಲಿ ಆತ್ಮಗೌರವ
ಕಳೆಯುವುದಕ್ಕಿಂತಲೂ ಮೇಲೆನಿಸುವುದು
ಮನುಷ್ಯರನ್ನು ಪೂಜಿಸುವುದಕ್ಕಿಂತ
ಮೂರ್ತಿಗಳನ್ನು ಪೂಜಿಸು
ಈ ನನ್ನ ನುಡಿಯಾಲಿಸು
ನಡೆ ಅದರಂತೆ

೨

ತುಟಿಗಳಲ್ಲಿ ನ್ಯಾಯಮೂರ್ತಿ
ಕಣ್ಣೆವೆಗಳಲ್ಲಿ ಕಳ್ಳಿ
ಆ ಕಣ್ಣೆವೆಗಳಿಂದಲೇ
ನನ್ನೆದೆಯ ಕದ್ದು ಕೇಳುತ್ತಿರುವಿ
ಕಳವು ಮಾಡಿದ ಕಳ್ಳಿಯೇ
ಸಂಭಾವನೆಯ ಕೇಳುವಂತೆ
ಕೇಳುತ್ತಿರುವಿ ನನ್ನ
ಸಂಭಾವನೆಯ ನೀಡುವಂತೆ

## ಮು–ಇಜ್ಜಿ

ಓ ಒಂಟಿ ಚಾಲಕನೇ ನನ್ನ
ಪ್ರಿಯತಮೆಯ ನೆಲೆವೀಡ ಬಿಟ್ಟು
ಮತ್ತೆಲ್ಲಿಯೂ ನಿಲದಿರಲಿ ಪಯಣ
ಅಲ್ಲಿ ಆ ಎಡೆಯಲ್ಲಿ
ಒಂದಷ್ಟು ಗಳಿಗೆ ನಿಲ್ಲ ಬಯಸುವೆನು
ಮುರಿದ ಮನೆ
ಬೀಳು ಬಿದ್ದ ಭೂಮಿ
ವಾಸದವಶೇಷಗಳ ನೋಡಿ
ನೆನಪಲ್ಲಿ ನನ್ನವಳ
ಹನಿಮುತ್ತುಗಳ ಸುರಿವೆನಲ್ಲಿ

ಶೂನ್ಯ ತುಂಬಿದ ಮನೆಯ
(ನನ್ನೆದೆಯ) ರಕ್ತದಲಿ ತುಂಬಿಸುವೆ
ರಕ್ತಾಶ್ರುಗಳಿಂದ ಸಿಂಚನವ ಗೈದು
ಬೀಳು ನೆಲದಲ್ಲೂ ಗುಲಾಬಿಗಳನರಳಿಸುವೆ
ವಾಸದವಶೇಷಗಳನೆಲ್ಲ
ಕಂಬನಿಯ ತುಂಬಿ ಹೊನಲಾಗಿಸುವೆ

ನನ್ನವಳ ಮೊಗದ ಚೆಲುವಿಲ್ಲದ
ಶೂನ್ಯ ಬಿಡಾರಗಳು
ಸೈಪ್ರಸ್‌ನ ಮೋಹಕ ಮಾಟ
ವಿಲ್ಲದ ಹುಲ್ಲುಗಾವಲುಗಳು!
ಮಧುವಿನ ಹೊಳೆಗಳು
ಎಲ್ಲಿ ಹರಿಯುತ್ತಿದ್ದವೋ
ಮಧುಪಾತ್ರೆಗಳ ಠಣತ್ಕಾರಗಳು

ಅಣುರಣಿಸುತ್ತಿದ್ದವೊ
ಕಾಡು ಕತ್ತೆಗಳ ಗೊರಸುಗಳ
ಸಪ್ಪುಳದ ಲಯ ಕೇಳುತ್ತಿತ್ತೋ?
ಎಲ್ಲಿ ಕೊಳಲು ತಂತು ವಾದ್ಯಗಳ
ಮಧುರ ಮೊಳಗಿದ ನಾದ
ತುಂಬಿ ತುಳುಕುತಿತ್ತೋ
ಕೇಳುತಿದೆ ಈಗಲ್ಲಿ ಬರಿ ಕಾಗೆ ಕೂಗು
ಕೀಟಗಳ ಕರ್ಕಶದ ಮೊರೆತ
ಎಂದು ತೊರೆದಳೊ ಸೋದಾ
ಡೇರೆಯನು ಸಲ್ಮಾ ಕೋಣೆಯನು
ಲೈಲಾ ಲತಾ ಕುಂಜವನು
ತೊರೆಯಿತಂದೇ ನನ್ನಾತ್ಮ
ನನ್ನ ಈ ದೇಹವನು

ಜೇನು ತುಟಿಗಳ ಬೆಳ್ಳಿ ಗದ್ದದ
ಆ ಹೆಣ್ಣಿನ ಕತೆ ಹುಟ್ಟು ಹಾಕಿದ
ಸಮಸ್ಯೆಗಳ ಎದುರಿಸದೆ
ಸಾಗಿದ್ದೇ ಇಲ್ಲ

ಆ ಪ್ರಿಯತಮೆ ಗೆಳತಿಯರೊಡನೆ
ಉದ್ಯಾನದಲಿ ಅಡ್ಡಾಡುತಿರಲಾಗಿ
ತೋಳ ನರಿಗಳೂ ಠಾಣೆಯೂರಿ
ನಿಲ್ಲುತ್ತಿದ್ದವು; ಕಾಡುಕತ್ತೆ ರಣಹದ್ದುಗಳೂ
ಬೀಡು ಬಿಟ್ಟು ಉಳಿಯುತ್ತಿದ್ದವು

ಚಂದ್ರನಿದ್ದಲ್ಲಿ ಮೋಡವಿದೆ
ಸಕ್ಕರೆಯಿದ್ದಲ್ಲಿ ವಿಷವಿದೆ
ರತ್ನವಿದ್ದಲ್ಲಿ ಕಲ್ಲಿದೆ
ಹೂವಿದ್ದಲ್ಲಿ ಮುಳ್ಳಿದೆ
ವಿಧಿಯೆಣಿಸಿದಾ
ಭಾಗ್ಯ ದುರ್ಭಾಗ್ಯವಾಗುವುದು

ಪಕಳೆಗಳು ಕಳೆಕಂಟಿಯಾಗುವುವು
ನಲಿವೂ ನೋವಾಗಿ ಹೊಮ್ಮುವುದು

ನನ್ನವಳ ಆ ಮೋಹಕ
ಚೆಲುವಲ್ಲಿ ಸ್ವರ್ಗವಾಗಿದ್ದ
ಮಹಲು ಮುರಿದ ಗೋಡೆಗಳು
ಮೂರ್ತಿ ಪೂಜಕನ ಬೆನ್ನಂತೆ
ಬಾಗಿ ನಿಂತಿವೆ ಈಗ
ಮನುಷ್ಯನ ತಾಣಗಳನ್ನೆಲ್ಲ
ಮುನಿದು ಮುಗಿಲು ಹರಿದು ಬಿದ್ದು
ವಿಧ್ವಂಸಗೊಳಿಸಿರಲು
ಪಯಣಿಗನೇಕೆ ಪ್ರೇಯಸಿಯ
ಭಗ್ನಾವಶೇಷಗಳೆಡೆಗೆ ಸಾಗಿಹನು?

ಅಶೋಕೆಯ ಕೆಂಚಿಗುರು
ಮೊಗದ ಹೆಣ್ಣು ಚೀನಾಂಬರದ
ನುಣುಪು ದೇಹದ ಅಪ್ಸರೆ
ದಾಳಿಂಬೆ ಬೀಜದ ತುಟಿಯ ಸೈಪ್ರೆಸ್
ದಾಳಿಂಬೆ ಮರದ ನಿಲುವಿನ ಚಂದ್ರ
ಕಣ್ಣ ಮೋಡಿಗೋ... ಎಣೆಯಿಲ್ಲ!
ಅಮೃತ ಲೇಪದ ಬೆಳ್ಳಿ ಮೊಗ
ಸರಪಳಿಯ ಕೊಂಡಿಗಳ ಮುಂಗುರುಳು
ಗುಂಗುರು ಗುಂಗುರು
ಲಡಿಗಳ ಕೂದಲು
ಅಗಲಿರಳು ಅವಳೆನ್ನ
ಮುನಿದಿವೆ ಆತ್ಮ ಮನಸುಗಳು
ಹರೆಯ ಜಾರಿದೆ; ಮುಪ್ಪು ಮೂಡಿದೆ
ನೇರನಿಲ್ಲದೆ ಬೆನ್ನು ಬಾಗಿದೆ
ಎನ್ನಿಂದ ದೂರವಾಗಲು ಅವಳು
ಮನವದೆಲ್ಲೋ ಏನೋ!
ಆದರೂ ಸಹನೆಯ ಬೀಜ ಬಿತ್ತಿ

ಹಾದಿ ಕಾದಿಹೆನವಳ
ಬೆಂದ ಹಕ್ಕಿಯ ಬವಣೆ
ನನ್ನ ಪಾಲಿಗೆ ಬುತ್ತಿ
ಅವಳನ್ವೇಷಣೆಗೆ ಸಾಗಿದ್ದೇನೆ
ನಕ್ಷತ್ರ ನಿರ್ದೇಶನದ ಬೆಳಕಲ್ಲಿ
ಪ್ರೇತ ಚಿಂತೆಗಳ ತಲೆಯಲಿರಿಸಿ
ನಿರ್ಜನ ಕಾಡುಗಳೆದೆಯ ಹೊಗುತಿರುವೆ
ಹುಲಿ ಚಿರತೆ ಜೊತೆಯಾಗಿ
ಗುಹೆಗಳಲ್ಲಿ
ಸಾರಂಗಗಳ ಜೊತೆಯಾಗಿ
ಕೊಳದ ತಡಿಯಲ್ಲಿ
ಚಂದ್ರನೊಡ ಹೊರಬರುವ
ಚಂದ್ರಮಿತ್ರರ ಕೂಡಿ
ನಡೆದಿದೆ ಶೋಧ

ಕಂಗಳು ಹೃದಯದ ಕಾರಣ
ನನ್ನ ನಿರಂತರ ನೆಲೆ ನೀರು ಬೆಂಕಿ
ಬೆಟ್ಟ ಬಯಲುಗಳ ಹಾದು
ಪಯಣಿಸುವ ಒಂಟೆಯೇ
ನನ್ನ ವಾಸಸ್ಥಳ
ಮರಳುಗಾಡಿನ ಹಡಗು
ಈ ಒಂಟೆಯೋ ನಿರ್ಲಿಪ್ತ
ಹೊರೆ ಭಾರ ಬೆನ್ನೇರಿದರೂ
ಹಗಲಿರುಳ ಪರಿವೆ ಮರೆತು
ಮುಳ್ಳುಗಳ ಮೇಲಾದರೂ
ಮೊಗ ಕಿವುಚದೇ ಮುಂದೆ
ಮುಂದೆ ಸಾಗುವುದು ಪಯಣ
ಮರಳು ಗಾಡಿನ ಪಯಣಿಗನಿವ
ವೇಗಾತಿ ವೇಗದೋಟಗಾರ
ಮಿತ ಭೋಜಕ ವಿಶ್ವಪರ್ಯಟಕ
ಇವನ ನೆಗೆತ ಜಿಗಿತ ಓಟಕ್ಕೆ
ಮೃಗವೂ ನಿಲ್ಲದು ಸಾಟಿ

ಬಯಲ ಬೀಸುವ ಗಾಳಿ
ಕಣಿವೆಯಾಳದ ನೀರು
ಆದರೂ ನಿಲ್ಲದು ಅದರ ವೇಗ
ಭೂಮಿ ಬಸಿರಿನಾಳದ
ಬೆಂಕಿಯೊಲು ವಿಶ್ರಾಂತ
ಸ್ಥಿತಿಯಿಂದ ಜಿಗಿದೆದ್ದು
ಗಿರಿಯ ನೇರುತ ಗುರಿಯ ತಾಗುವುದು
ಪಥಚಲಿತ ಗ್ರಹಗಳಿಗೂ
ಅಚ್ಚರಿಯು ಅವನ ರೀತಿನೀತಿ
ದೂರ ದೂರವನೆಲ್ಲ ಒಂದೇ ನೋಟದಿ
ಅಳೆವ ಅದ್ಭುತ ಕುಶಲಿ
ಕಷ್ಟ ಸಹಿಷ್ಣುತೆಗಿದರ
ಇರುವುದೇ ಎಲ್ಲಾದರೂ ತೀರ!!

ಬೆನ್ನೇರಿ ಅವನ ಜಾಗದಿ
ಕುಳಿತು ದಾಪುಗಾಲಿನ
ಓಟದಲಿ ತಲುಪುವೆನು
ನನ್ನ ಗುರಿಯನು ನೇರ
ನಾನೊಬ್ಬ ಪಯಣಿಗ
ಪ್ರಧಾನಿಯ ಸಭಾಂಗಣವೇ
ನಾ ತಲುಪುವ ನೆಲೆ
ಗೆಲ್ಲಬೇಕೆಂದು ಎಂದೂ
ಮೋಸಮಾಡಲಾರ
ಅದೆ ಅವನ ಸಿದ್ಧಾಂತ
ನಡೆಯಲಿ ಕ್ರಿಯೆಯಲಿ
ಶುದ್ಧ ಸಾಚಾತನ
'ಪವಿತ್ರ ಪದಾರ್ಥಗಳಿಂದಲೇ
ಬಹುಶಃ ಸೃಷ್ಟಿಸಿರಬಹುದೇ
ಇವನ ಸೃಷ್ಟಿಕರ್ತ! –

ಅಚ್ಚರಿಯಲಿ ಅನುಮಾನಿಸುತ್ತದೆ
ಮನಸು ಮತ್ತೆ ಮತ್ತೆ
ಆಸರೆಗೋ ಭಿಕ್ಷಕೋ
ಕೀರ್ತಿಗೋ ಅವನ ಮೊರೆ ಹೊಕ್ಕರೆ
ಸಾಕು – ಮಮತೆಯಲಿ
ತಾಯಿ ಮಕ್ಕಳಾಸೆಯ
ಪೂರೈಸುವೊಲು ಪೂರೈಸುವನು
ಸ್ತುತಿಸುತಿಹೆ ನಿನ್ನ
ಧನ್ಯವಾದಗಳನೊಪ್ಪಿಕೋ
ನಿನ್ನ ಔನ್ನತ್ಯವೇ ನನ್ನ
ದೇಹಸ್ಥಿತಿಗೆ ಸಂತಸಕೆ ಕಾರಣವು

(ಅಪಘಾತದಿಂದ ಬದುಕುಳಿದು – ಚೇತರಿಸಿಕೊಂಡಾಗ)

ದೇವರೇ ನಿನಗೆ ಧನ್ಯವಾದಗಳು
ಈಗುಲಾಮ (ಅಪಘಾತದಿಂದ)
ಯಜಮಾನ (ದೊರೆ)ನಿಂದ
ಕೊಲೆಯಾಗಿ ಸಾಯದೆ ಬದುಕಿದೆ

ದೇವರಿಗೆ ಧನ್ಯವಾದಗಳಿರಲಿ
ಗೂಳಿಗೆ ಗುರಿಯಿಟ್ಟನಲ್ಲದೆ
ನನ್ನ ಕೊಲ ಬಯಸಲಿಲ್ಲ
ಅನುಭವಿಸಿದೆ; ನರಳಿದೆ
ಹಾಸಿಗೆಯಲ್ಲಿ ಕಳೆದೆ ವರುಷ
ಹೇಗೆ ಹೇಳಲಿ ಕೃತಜ್ಞತೆ
ಇನ್ನೂ ಬದುಕಿದ್ದೇನೆ
ಸಭೆಯಲ್ಲಿ ಮತ್ತೊಮ್ಮೆ
ಹಾಡಿ ಹೊಗಳುತ್ತೇನೆ
ಅವನನ್ನು ಗುಲಾಮನಂತೆ

ನನ್ನ ದೊರೆ ದೊರೆಗಳ ದೊರೆ
ಸುಲ್ತಾನ ಸಂಜಾರ್ ಸಿಂಹದಂತೆ
ಗುರಿತಪ್ಪದೆ ಹಿಡಿಯುತ್ತಾನೆ
ತನ್ನ ಬಲಿಯನ್ನು
ಸಮರದಲಿ ಸೋಲೆಂಬುದೇ
ಅನಿಗಿಲ್ಲ; ಜಯವೆ ಎಲ್ಲ!!

## ಇರಾಖಿ

ಮೊದಲಳತೆ ಮಧುವ
ಮಧುಪಾತ್ರೆಯಲಿ ಪಡೆದದ್ದು
ಮಧುಪಾತ್ರೆ ಹಿಡಿದವಳ
ಕಾಂತಿಹೀನ ಕಣ್ಣುಗಳಿಂದ

ಸಂಭ್ರಮಿಸುವ ಮಧೋತ್ಸಾಹಿಗಳು
ನಾಚಿ ಹಿಂಜರಿವುದನರಿತು
ಮತ್ತೇರಿಸುವ ಮಧುವ
ಬಟ್ಟಲಿಗೆ ಸುರಿದರು

ಪ್ರೇಯಸಿಯ ಮಧು ಮಧುರ
ತುಟಿ ಪಡೆಯಿತು ಹೆಸರು
ಅಂದಿಂದ ಮಧುಪಾತ್ರೆಯೆಂದು
ಆ ತುಟಿಯ ಮುತ್ತಿಗೂ
ಹೆಸರಾಯ್ತು ಪ್ರಿಯರ ಮಧುವೆಂದೂ

ಎಷ್ಟೊಂದು ಪಾನಪ್ರಿಯ
ಹೃದಯಗಳ ಅಸ್ವಸ್ಥಗೊಳಿಸಿತೋ
ಆ ಪ್ರೇಯಸಿಯ ಮುಂಗುರುಳು
ಅಸ್ವಸ್ಥಗೊಂಡ ಮನಸುಗಳ
ಕಂಡು ಪರಿತಾಪದಲಿ ತಾವೂ
ಅಸ್ವಸ್ಥರಾಗಿ ನರಳಿದರು
ಆ ವಿಶೇಷ ಪಾನಕೂಟದಲಿ
ದುರ್ಜನರು ಸಜ್ಜನರು
ಸರ್ವರಿಗೂ ಸಮಾನ ಸ್ವಾಗತ

ಎಲ್ಲರೆಡೆ ಬಟ್ಟಲು ಸುಳಿದಾಗ
ಹಿರಿಕಿರಿಯ ತನದ ಭೇದವೇ ಇಲ್ಲ
ಪೋಲೋ ಮೈದಾನದಲ್ಲಿ

ಚೆಲುವಿನ ಚೆಂಡು ಚಿಮ್ಮಿದಾಗ
ನಾಗಾಲೋಟದಿ ಜಿಗಿದು
ಹಿಡಿದು ಗೆದ್ದರು ಎರಡು
ಲೋಕಗಳ ಪಾರಿತೋಷಕವ
ಅಮಲೇರಿದ ಸ್ಥಿತಿಯಲ್ಲೂ
ಭಕ್ಷ್ಯಗಳ ಬಯಸಿ
ತಮ್ಮ ತಮ್ಮ ಪ್ರೇಯಸಿಯರ
ತುಟಿಗಳನ್ನೇ ಸಕ್ಕರೆ ಬಾದಾಮಿಗಳಂತೆ
ಸವಿ ಸವಿದು ಮೆದ್ದರು

ಪ್ರತಿಕ್ಷಣವೂ ಹೃದಯ
ಕಂಪನದ ಭೀತಿಯಿಂದ
ಪ್ರೇಯಸಿಯರ ಮುಂಗುರುಳನ್ನೇ
ಕಡವಾಗಿ ಕೇಳಿದರು

ಒನಪು ವಯ್ಯಾರದಲಿ
ತಮ್ಮೊಳಗೆ ತಾವೇ ಮಾತನಾಡುತ್ತ
ಆಡಿಕೊಂಡ ಮಾತಿಗೆ ಇಮ್ಮಡಿಯಾಗಿ
ಭ್ರುಕುಟಿಗಳ ಕುಣಿಸುತ್ತ
ಸನ್ನೆ ಸಂಕೇತಗಳಲ್ಲಿ
ಸಂದೇಶಗಳನಟ್ಟಿ ಕಳುಹಿದರು
ಏಕಾಂತದಲಿ ಎಚ್ಚರಿಸಿ
ರಹಸ್ಯಗಳ ಮರೆಮಾಚುವಂತೆ
ತಾವೇ ಮುಂದಾಗಿ
ಮರೆಸಿದ್ದನ್ನು ಜಗಜ್ಜಾಹಿರ
ವಾಗುವಂತೆ ಸಾರಿ
ಬಡಿದರು ನಗಾರಿ

ಪ್ರಪಂಚದಲಿ ಕಂಡ ಕಂಡ
ನೋವು ದುಃಖಗಳನ್ನೆಲ್ಲ ಎತ್ತಿ
ಕೊಂಡು ಮಿಡಿದು ಬೆರಸಿ
ಅದಕೊಂದು ಹೆಸರು
ಪ್ರೀತಿ ಎಂದಿಟ್ಟು ಕರೆದರು
ತಾವೇ ರಹಸ್ಯವನ್ನು ಬಯಲು
ಮಾಡಿ ಅವರೇಕೆ
ಇರಾಖಿಯನ್ನು ದೂರಿ
ಹೆಸರು ಕೆಡಿಸುವರೋ

***

ಓ ನನ್ನ ಮೂರ್ತಿಯೇ
ದಿಕ್ಕು ದೆಶೆಯಿಲ್ಲದೆ ಅಲೆವ
ಈ ಅಲೆಮಾರಿಗೆ ದಾರಿ ತೋರೆಯಾ?
ಗುರಿಯೂ ದೂರ

ಪ್ರಾರ್ಥಿಸುವಾಗ ಭೂಮಿ
ಸ್ಪರ್ಶಿಸಲು ದನಿಯೊಂದು ಕೇಳಿಸಿತು
ನಿನ್ನ ಭಕ್ತಿ ಪ್ರಣಾಮಗಳು
ಕೇವಲ ವಂಚನೆ
ಪೂರ್ತಿಯಾಗಿ ನನ್ನನ್ನು
ವಿನಾಶಗೊಳಿಸಿರುವೆ

ಕಾಬಾ ಪ್ರದಕ್ಷಿಣೆಗೆ ಹೊರಟಾಗ
ಬಾಗಿಲಲ್ಲೇ ಅಡ್ಡಗಟ್ಟಿ ಕೇಳಿದರು
"ಪ್ರವೇಶಕ್ಕೆ ಅರ್ಹತೆ ಪಡೆಯಲು
ಗುಡಿಯಾಚೆ ನೀ ಎಸಗಿದ
ಕಾರ್ಯವೇನು?"

ನಿನ್ನ ಶತ್ರುಗಳನ್ನು ನಿನಗೆ
ಕೊಲ್ಲಲಾಗದು ನಿನ್ನ
ಗೆಳೆಯರಿಗಷ್ಟೇ ಈ ಸವಲತ್ತು
ಅವರಿಂದಲೇ ಕಲಿಯಬೇಕಿದೆ
ನಿನಗೆ ಕತ್ತಿವರಸೆ

ಪ್ರೀತಿಸುವರಿಂದಲೇ
ಪ್ರೀತಿಸುವವರನ್ನು ಕೊಲ್ಲಿಸುವ
ಪರಿಪಾಠ ಯಾವ ದೇಶಕ್ಕಿದೆ
ಯಾವ ಧರ್ಮಕ್ಕಿದೆ?
'ನನ್ನೇಕೆ ಪ್ರೀತಿಸುತ್ತಿರುವೆ'
ಎನ್ನುತ್ತಲೇ ಕೊಲ್ಲುವ ನೀತಿಯೇಕೆ?

ಗುಡಿಯ ಬಾಗಿಲ ತಟ್ಟಲು
ದನಿಯೊಂದು ಕರೆಯಿತು
'ಬಾ ಇರಾಖಿ ನೀನು ನಮ್ಮ
ಗಣ್ಯರಲಿ ಒಬ್ಬ'ನೆಂದು
ಅದ್ದೂರಿಯ ಸ್ವಾಗತವ ಬಯಸಿತ್ತು
***
ನಿನ್ನ ಪ್ರೀತಿಯ ಹೊರತು
ಅನ್ಯಕರ್ಥವನೊಂದು ಕಾಣಲಾರೆ
ಬೇಕಿದೆ ನನಗೆ ನಿನ್ನ ರಕ್ಷಣೆ
ನನ್ನಾತ್ಮದೊಡನೆ ಪ್ರೇಯಸಿ
ನಿನ್ನ ಹೊರತು ಮತ್ತೊಬ್ಬರನು
ಕರೆದೊಯ್ಯುವುದನಾನರಿಯೆ
ಸಹನೆ ವಿಶ್ರಾಂತಿ ನೆಮ್ಮದಿ
ಗಳಿಗೆಡೆಯೆಲ್ಲಿದೆ ನನ್ನಲ್ಲಿ
ದಯೆ ಪ್ರೀತಿಗಳು
ನಿನ್ನಲ್ಲಿ ಹೊರತು ನಾ ಕಾಣೆ
ನಾ ಕಾಣೆ

ನನ್ನನುಪಕರಿಸು
ತೋರಿಸು ನಿನ್ನ ಮುಖ
ನಿನ್ನ ನೋಟ ನನ್ನ
ನೋವಿಗೆ ಶಮನವಲ್ಲದೆ
ಮತ್ತೊಂದು ಕಾಣೆ
ನಾ ಕಾಣೆ

ಸುಳಿಯ ಸಾಗರದಲ್ಲಿ
ಬಿದ್ದ ನನಗೆ ಅದರಾಳ ಎಷ್ಟೆಂದು
ನಾ ಕಾಣೆ ನಾ ಕಾಣೆ
ಓ ಗೆಳತಿ ಬಂದೆನ್ನ
ಕೈ ಹಿಡಿದು ರಕ್ಷಿಸು

ದಯೆ ಕರುಣೆಯಲಿ
ಏರುಪೇರಾದ ನನ್ನ ವ್ಯವಹಾರಗಳ
ಸರಿಪಡಿಸಲು ನೀನಲ್ಲದೆ
ಮತ್ತಾರು ಬಂದಾರು
ನನಗೆ ಸಹಕರಿಸು

ಇರಾಖಿಗೆ ನಿನ್ನ ದರ್ಬಾರಿಗೆ
ದಾರಿ ತೋರಿಸು
ನನ್ನಂಥ ಅಲೆಮಾರಿ
ಪ್ರೇಮೋನ್ಮತ್ತ ಪ್ರಪಂಚದಲಿ
ಮತ್ತೊಬ್ಬರಿರುವುದನು
ನಾ ಕಾಣೆ ನಾ ಕಾಣೆ

## ಅಮೀರ್ ಖುಸ್ರೋ

ಖಾಲಿಯಾದ ಮಧುಪಾತ್ರೆ
ಮಧುವಿನಾಸೆಗೆ ಮಿತಿಯಿಲ್ಲ
ಶುದ್ಧ ತಾಜಾ ಮಧುವ
ಬಯಸಿದರೆ ಕುಡಿನಿನ್ನ ರಕ್ತವನು

ಮಜ್ನೂನ್ ಪ್ರೇಮಿಗಳ
ಸಂಗೀತ ಕಛೇರಿಯ ಸರಣಿ
ಅದರ ಸಂಗೀತವನ್ನು ಅನುಭವಿಸುವುದು
ಬುದ್ಧಿವಂತರಿಗೂ ಮೀರಿದ್ದು

ನನ್ನ ಒಲವಿನ ವಿದ್ರೋಹಿಯ
ಬಲವಷ್ಟೇ ಸಾಕು ನನ್ನ ಕೊಲ್ಲುವುದಕ್ಕೆ
ದೈವವೇ ನಿನಗೆ ತೊಂದರೆ ಬೇಡ
ನೇಣಿಗನೆ ನಿನಗೆ ತೊಂದರೆ ಬೇಡ
ನೇಣಿಗನೆ ನಿಂತಿರಲು
ಕೊಲೆಗಡುಕ ಕಟುಕ
ಬೇಕಿರುವುದೇನು?

ದೊರೆಗೆ ನನ್ನ ರಕ್ತವನು
ಹರಿಸಹೇಳು ದಂಡಾಧೀಶನಿಗೆ
ನನ್ನ ತಲೆ ಕತ್ತರಿಸಹೇಳು
ಪ್ರೀತಿಸುವವರನ್ನು ತೊರೆದು
ಬದುಕಿ ಉಳಿಯಲು ಯಾವ
ಶಾಸ್ತ್ರವೂ ಬೋಧಿಸುವುದಿಲ್ಲ
ಓ ತರ್ಕವೇ ಸಹಾನುಭೂತಿಯಲಿ

ಸಾಗಿ ಬರಬೇಡ
ಪ್ರೇಮದ ಹಾದಿಯಲಿ
ನಡೆವಾಗ ಹುಚ್ಚತನಕ್ಕಿಂತ
ಮಿಗಿಲಾದ ಸಾಧನವಿಲ್ಲ

ನೋಡಲಾಗದಿದ್ದರೆ ಅವಳ
ಆಲೋಚಿಸಬಲ್ಲೆ ಅವಳ
ಕುರಿತು ಸಂತಸ ಪಡಬಲ್ಲೆ
ಭಿಕ್ಷುಕನ ಮನೆ ಬೆಳಗಲು
ಚಂದ್ರಕಾಂತಿಗು ಮಿಗಿಲು
ದೀಪವಿಹುದೇ?

ಓ ದ್ರೋಹಿ ನಿನ್ನ ಪ್ರೇಮಿಗಳನ್ನೇ
ನಿನ್ನ ಬಾಯ ತುತ್ತಾಗಿಸುವೆ
ಸ್ವಲ್ಪ ಹೊತ್ತಾದರೂ
ನಿಧಾನ ಸಾಗು
(ನನ್ನಂಥ) ಅಸಹಾಯಕ ಮೃಗ
ಕ್ರೂರ ತುರ್ಕಿ ಬಿಲ್ಲುಗಾರ (ನಿನ್ನಂಥ)ನ
ಬಾಣದಾಘಾತವನು ಎದುರಿಸಿ
ನಿಲ್ಲಬಲ್ಲುದೇ ಹೇಳು?

ಓ ಮನವೇ ನಿನಗೆ
ಬಾಯಾರಿ ಸಾಯಬೇಕಿದೆ
ಅವಳ ಗಲ್ಲ ಸಮಾಧಾನ
ನೀಡುವುದಿಲ್ಲ ಅದರ ಹಳ್ಳ
ದಿಂದ ನೀರು ನಿರೀಕ್ಷಿಸಬೇಡ
ಬೇಕೆಂದರೆ ಅಗೋ
ಬರಿ ರಕ್ತ ಕುಡಿಯಲಿದೆ

ನೀನು ಹೇಳಿದೆ "ಓ ಖುಸ್ರೋ
ನಿನ್ನ ಕನಸುಗಳಲ್ಲಿ ನಾನು ಪ್ರತ್ಯಕ್ಷ

ನಿನ್ನ ಈ ಉಪಕಾರವನು
ಅಪರಿಚಿತರಿಗೇ ಮೀಸಲಿರಿಸು
ಏಕೆಂದರೆ ನಿನ್ನ ಬಲ್ಲ ಅವರಿಗೆ
ನಿದ್ದೆಯಾಗಲೀ ಕನಸುಗಳಾಗಲಿ ಇಲ್ಲ

***

ಓ ವೈದ್ಯ ಪಂಡಿತನೇ
ನನ್ನ ಹಾಸಿಗೆ ಬದಿಯ ಬಿಟ್ಟೇಳು
ಪ್ರೇಮರೋಗಿಗೆ ಪ್ರೇಯಸಿಯ
ದರುಶನವೇ ಮದ್ದು
ಮತ್ತೊಂದಿಲ್ಲ
ಓ ಮನವೇ ಪ್ರೇಮದ
ಪೇಟೆಯಲ್ಲಿ ನಿನ್ನನರಿಯಲು
ಹೇಗಾದರೂ ಬಂದೇ ಬರುತ್ತಾಳೆ
ಇದಕಿಂತ ಸಂತಸದ ಸುದ್ದಿಬೇಕೆ?

ತೋಟದ ಗುಲಾಬಿ ಇಲ್ಲವಾದರೂ
ಹಾಡು ನಿಲ್ಲಿಸುವುದೇ ಹಾಡು ಹಕ್ಕಿ
ಪ್ರೇಮ ಮೂಡುವುದಕ್ಕೆ
ಹೃದಯ ಬೇಕಲ್ಲದೆ
ದೇಹ ಸೌಂದರ್ಯವಲ್ಲ

ಖುಸ್ರೋ ಮೂರ್ತಿ ಪೂಜಕ
ನೆಂದು ಜಗವು ಸಾರುವುದು
ಹೌದು ನಿಜವೆ; ನಿಜವೇ ಹೌದು
ಅವನಿಗೆ ಮಂದಿ ಬೇಕಿಲ್ಲ
ಲೋಕವೂ ಅವನಿಗೆ ಬೇಕಿಲ್ಲ
ಯಾವುದನೂ ಲೆಕ್ಕಿಸುವುದಿಲ್ಲ

***

ನನ್ನ ಪ್ರೇಯಸಿ ನನ್ನ
ಕಾಣ ಬರುವಳು ಇಂದು ರಾತ್ರಿ
ಎಂದೆಂಬ ಸುದ್ದಿ ಈಗಷ್ಟೇ

ಕೇಳಿ ಬಂತು
ಅವಳು ಹಾದು ಬರುವ
ದಾರಿಗಿದೋ ನನ್ನ ತಲೆದಂಡವೂ
ಸಿದ್ಧವಾಗಿದೆ

ಮರಳುಗಾಡಿನ ಮೃಗಗಳು
ಎಂದೋ ತಮ್ಮ ತಲೆದಂಡ ತೆತ್ತಿವೆ
ಅವುಗಳಿಗೆ ಗೊತ್ತು
ಒಂದಲ್ಲ ಒಂದು ದಿನ ನೀ
ಬಂದು ತಮ್ಮ ತಲೆಗಳ
ಬಲಿ ಬೇಡುವೆಯೆಂದು

ಪ್ರೀತಿ ಚುಂಬಕಕೆ
ಸ್ಪಂದಿಸದೆ ಇರಲಾರೆ
ನನ್ನ ಶ್ರಾದ್ಧಕ್ಕೆ ಬರಲಾರೆಯಾದರೆ
ಸಮಾಧಿಯ ಬಳಿಗಾದರೂ ಬಾ

ನನ್ನ ಪ್ರಾಣ ತುಟಿಗಳಲ್ಲಿದೆ
ಬಾ ಬಂದು ಉಸಿರನುಳಿಸು
ನಾನಿಲ್ಲವಾದ ಮೇಲೆ ನೀ
ಬಂದೆಯಾದರೆ ಬರುವುದೇನು!

ಒಮ್ಮೆ ಖುಸ್ರೋ ಭೇಟಿಯಾದದ್ದೇ
ಖುಸ್ರೋ ಧರ್ಮ, ಮನಸ್ಸು
ತಾಳ್ಮೆಯೆಲ್ಲವನೂ ಕಳೆದುಕೊಂಡ
ಈ ಬಗೆಯಲ್ಲಿ ಒಂದು
ಎರಡು ಮೂರು ಬಾರಿ ಬಂದರೆ
ಅವನೇನಾಗಬೇಕು?

***

ನನ್ನ ದೇಹದಿಂದ ನನ್ನಾತ್ಮವ
ಕಸಿದುಕೊಂಡೆಯಾದರೂ

ಆತ್ಮದ ಮಧ್ಯದಲಿ ನೀ ನೆಲೆಸಿಹೆ
ನೂರು ತರಹದ ನೋವು
ನೀ ಕೊಟ್ಟರೂ ನೋವಿಗೆ
ಮದ್ದಾಗಿಹೆ ನೀನೊಬ್ಬಳೇ!
ನನ್ನೆದೆಯ ವಾಸಕ್ಕೆ
ಅಲ್ಲಿಯೇ ಅಡಗಿ ಕುಳಿತಿಹೆ
ಇನ್ನೂ ಅಲ್ಲಿಯೇ ಇರುವೆ

ಕಂಬನಿ ಸುರಿಸುತ್ತ
ಕರಗಿ ಹೋಗಿದ್ದೇನೆ ಉಪ್ಪಿನಂತೆ
ಆದರೆ ನೀನಿನ್ನೂ ನಗುತ್ತಲೇ
ಮಲ್ಲಿಗೆಯ ಮಳೆ ಸುರಿಸುತಿಹೆ

ಒನಪು ವಯ್ಯಾರಗಳ
ಕುಡಿನೋಟ ಚೂರಿಯಲಿ
ನನ್ನದೆಯ ಸಾಮ್ರಾಜ್ಯವನು
ಅಳಿಸಿ ಬಿಟ್ಟೆ ಆದರೂ ಆ
ಭಗ್ನ ಹೃದಯವನು
ಆಳುತಿಹೆ ನೀನಿನ್ನೂ!

ನಿರ್ದಯತೆಯಲ್ಲಿ ನೀ
ಬಲಿಪಶುವ ಕೊಂದು ರಕ್ತ
ಚೆಲ್ಲಿದೆಯಾದರೂ ನಿನ್ನ
ಉಡುಗೆಯ ಮೇಲೆ
ರಕ್ತಕಲೆಯೊಂದೂ ಕಾಣದಿಹದು
ಅಚ್ಚರಿಯಹುದಾದರೂ
ನಿನ್ನ ರಕ್ತಪಾತದ ಕ್ರಿಯೆ
ಸಾಗುತಿದೆಯಿನ್ನೂ!!

ಎರಡು ಜಗತ್ತಿನ ಬೆಲೆಗೆ
ನಿನ್ನ ನೀ ಸರಿ ತೂಗಿದರೂ

ಸರಿಯೆನಿಸುವುದಿಲ್ಲ ಅದು
ಅಗ್ಗವಾಗಿಸಬೇಡ ಬಾ
ಬೆಲೆಯ ಹೆಚ್ಚಿಸಿ ಕೋ!
ಆತ್ಮದೇಹದ ಭಗ್ನಮಂದಿರ
ದಿಂದ ಪಾರಾದರೂ ನನ್ನೆದೆ
ನಿನ್ನ ಕುರುಳಲ್ಲಿ ಇನ್ನೂ ಬಂದಿ

ಮುಪ್ಪು ಮತ್ತು ಪ್ರೀತಿಸುವುದು
ಹೊಂದಿಕೊಳ್ಳುವುದೇ ಇಲ್ಲ
ಆದರೆ ಓ ಖುಸ್ರೋ ನನ್ನ
ತರ್ಕಕ್ಕೆ ನೀನೇ ಸಾಕ್ಷಿಯಾಗಿದ್ದೀ
ನೆನ್ನೆ ರಾತ್ರಿ ಕನಸಿನಲಿ ನನ್ನ
ನೀ ಬಂದೆ ಮಧು ಪಾತ್ರೆಯಿತ್ತೆ
ಮಧುವ ಹೀರುತ್ತ ಮೈ
ಮರೆತು ತೂಕಡಿಸುತಿಹೆ ನಾ
ಸಾವಿನ ಸಂಕಷ್ಟದಲಿ
ನಾನಿರಲು ನೀ ಮಧುಮತ್ತ
ಮದವೇರಿ ಕನಸಿನಲಿ ಕಾಣುತಿಹೆ
ಚಿರನಿದ್ರೆಯತ್ತ ಸಾಗಿರುವ
ನನಗೆ ಭ್ರಮೆಯೋ
ಎಚ್ಚರಿಹೆನೋ ನಿದ್ರಿಸಿಹೆನೋ
ಎಲ್ಲವೂ ಅಯೋಮಯ
ವೆನಿಸಿ ಕಾಡುತಿದೆ

ಬೆಂದ ಹೃದಯ ವಂಚನೆಗೆ
ಬಂದಿಹೆಯಾದರೂ
ನಾ ದೂರುವುದಿಲ್ಲ ನಿನ್ನ
ಮಧುವಿನ ಮದವೇರಿ
ಬಂದಿಹೆಯಾಗಿ
ತೆಗೆದುಕೋ ಮಧುವಿನ
ಜೊತೆಗೆ ಬೆಂದ ಮಾಂಸ

ಬಲು ಮಜವೆನಿಸುವುದು
ನಿರಾಶೆಯ ಕತ್ತಲು ಸರಿದು
ಕಾರು ಕತ್ತಲು ಕಂಡೆ
ನೀ ಬಂದದ್ದೇ ಜಗ್ಗನೆ ಹೊತ್ತಿ
ಉರಿಯಿತು ಬೆಳಕು
ನನಗೆ ಗೊತ್ತು ನೀನು
ಪೂರ್ಣ ಚಂದ್ರನಂತೆ

ನನ್ನ ಕಂಬನಿಗವರು
ಕಾರಣವ ಕೇಳಲು
ಕಂಬನಿಯ ಕೊಳದಲ್ಲಿ
ಕಂಡದ್ದು ನಿನ್ನ ಬಿಂಬ

ನನ್ನ ಅದೃಷ್ಟ ತಾರೆಯೇ
ಚಂದ್ರನಂತೆ ಮರೆಯಾಗಿ
ಸೂರ್ಯನಂತೆ ಮರಳಿ
ಬರುತ್ತಿದ್ದೆ – ಈಗೆಲ್ಲಿರುವೆ?
ತಾಳ್ಮೆಯ ಮಡುವಾಗಿ
ಖುಸ್ರೋನ ಹೃದಯಕ್ಕೆ
ನಿನ್ನಿಂದ ನೋವಿಲ್ಲ ಓ ಒಲವೆ
ನೀ ಹಿಂತಿರುಗಿದಾಗ ನಿನ್ನ
ಪ್ರೀತಿಯನೆಲ್ಲ ಧಾರೆ
ಎರೆದರಷ್ಟೇ ಸಾಕು

***

ನಿನ್ನ ಆ ಮುಖ ಅಜಾರನ
ಶಿಲ್ಪಗಳಿಗಿಂತಲೂ ಸುಂದರ
ನಿನ್ನ ಶ್ರೇಷ್ಠತೆಯೆಂದೆಂದಿಗೂ
ನನ್ನದೆಯಾಳದಲ್ಲಿ
ಸ್ಥಿರವೆಂಬುದೇ ಸತ್ಯ

ದೇಶ ದೇಶಗಳನ್ನೆಲ್ಲ
ಸುತ್ತಾಡಿದೆ ಸಾವಿರಾರು
ಹೆಣ್ಣುಗಳ ಪ್ರೀತಿಯ
ಸವಿಯುಂಡೆ
ಅಸಂಖ್ಯ ಸೌಂದರ್ಯ
ತಾರೆಯರ ನಾ ಕಂಡೆ
ಆದರೂ ನಿನ್ನ ಬಣ್ಣಿಸುವುದು
ಮಾತಿಗೆ ಮೀರಿದ್ದು!
ಹೋಲಿಕೆಗೇ ಸಾಟಿಯಾಗದ್ದು

ನಿನ್ನ ಚೆಲುವಿನ ಮೊಗಕೆ
ಮೀರಿದ್ದೊಂದ ನಾಕಾಣೆ
ಚಂದ್ರನೋ ಶುಕ್ರನೋ
ಸೂರ್ಯನೋ – ಬಣ್ಣಿಸಲಿ
ಏನೆಂದು ಹೇಳಲಾರೆ!

ಭೂಮಿಯ ಮೇಲೆ
ಸೃಷ್ಟಿಯಾರಂಭವಾದಂದಿ
ನಿಂದಲೂ ನಿನ್ನಂಥ ಚೆಲುವ
ಯಾವ ಜೀವಿಯೂ ಪಡೆದದ್ದು
ನಾ ಕಾಣೆ ನೀನೇನೂ
ಯಕ್ಷಿಯೋ ಅಪ್ಸರೆಯೋ
ಆದಮನ ಮಗಳೋ
ಜಲಕನ್ಯೆಯೋ
ಏನೆಂದು ತಿಳಿಯಲಾಗದು ನನಗೆ!!
ನಾನು ನೀನಾದೆ ನೀನು ನಾನಾದೆ
ನಾ ದೇಹವಾದರೆ ನೀ ಆತ್ಮವಾದೆ
ನಾನು ನೀನು ಬೇರೆಯೆನಲು
ಸಾಧ್ಯವಾಗದು ಜಗಕೆ ಜನಕೆ

ನಿನ್ನ ನಡೆ ಕಿನ್ನರಿಗಿಂತಲೂ
ಚುರುಕು ನಿನ್ನೊಡಲು
ಗುಲಾಬಿ ಪಕಳೆಗಳಿಗಿಂತಲೂ
ಮೃದು ಮಧುರ
ಸುಂದರ ಯುವತಿ ಎನ್ನುವು
ದಕ್ಕಿಂತಲೂ ನೀನೊಂದು
ಪವಾಡವೇ ಹೌದು
ಮುಗುಳ್ನಗೆಯ ಮೊಗವ
ಕಂಡೆ ಹವಳ ಕೆಂಪು
ತುಟಿಯ ಕಂಡೆ ಹೊಳೆವ
ಮುತ್ತು ಸಾಲಿನಂಥ
ದಂತಪಂಕ್ತಿ ಕಿರಣ ಕಂಡೆ

ಬದುಕಿನ ನೆಮ್ಮದಿ ಶಾಂತಿ
ನೀನು ಸೈಪ್ರಸ್ ನಿಲವು ನಿನ್ನದು
ನನ್ನ ಮನದ ಶಾಂತಿ
ಕದಡುವ ತೆರದಲ್ಲಿ
ತೇಲಿಸುತ್ತಾ ಹೋಗಬೇಡ

ಮನವಮುದಗೊಳಿಸೆ
ಹೋಗುತಿಹೆ ಮರುಭೂಮಿಯ
ತಾಜಾ ಗಾಳಿ ಸೇವನೆಗೆ
ಹೋಗುತಿಹೆ – ಇಲ್ಲ, ನೀ
ನನ್ನ ಆತ್ಮ, ಪ್ರಾಣಗಳನ್ನು
ನಿನ್ನ ಪ್ರೀತಿಯ ರೀತಿ ತೋರಲು
ಹೊತ್ತೊಯ್ಯುತಿರುವೆ

ಜಗತ್ತೆ ನಿನ್ನಿಂದ ಕೊಳ್ಳೆ ಹೋಗಿದೆ
ಲೋಕವೇ ನಿನಗೆ ಮುಗ್ಧವಾಗಿದೆ
ಪ್ರತಿಮಾರಾಧನೆಗೆ ನಿನ್ನ ಮಾದಕ
ಕಣ್ಣುಗಳೇ ಪ್ರೇರಣೆಯಾಗಿದೆ

ಎನಲು – ನನಗೆ ಹೇಳಲೇನುಂಟು?
ಖುಸ್ರೋ ಒಬ್ಬಯಾಚಕನಂತೆ
ಒಬ್ಬ ಅಪರಿಚಿತನಂತೆ
ಬಂದಿದ್ದಾನೆ ನಿನ್ನ ಬಳಿಗೆ
ದೇವರ ದಯೆಯಿಂದ
ನಿನ್ನ ಬಾಗಿಲಿಂದ ನಿರಾಶೆಗೊಳಿಸಿ
ಅಟ್ಟಿ ಕಳಿಸದಿದ್ದರಷ್ಟೇ ಸಾಕು!

ಬೆಟ್ಟದಲ್ಲಿನ ಗುಹೆಯ ಹೊಕ್ಕು
ಸಾವನ್ನಪ್ಪಿ ನನ್ನಿಂದ ದೂರಾದ
ಗೆಳೆಯರಿಗಾಗಿ ಬಿಕ್ಕಿ ಬಿಕ್ಕಿ ಅತ್ತೆ
ಎಲ್ಲಿ ಅವರು? ಎಲ್ಲಿ ಅವರು?
– ಎಂದು ಎತ್ತಿರಿಸಿ ಕೂಗಿದೆ
ಗುಹೆಯೂ ಪ್ರತಿಧ್ವನಿಸಿ
ಉತ್ತರ ಹೇಳಿತು – ಎಲ್ಲಿ ಅವರು?"

# ಮೌಲಾನಾ ರೂಮಿ

ಜಲಾಲುದ್ದೀನ್ ಮುಹಮ್ಮದ್ ರೂಮಿ (೧೨೦೭-೧೨೭೩) ಬಲ್ಖ್ ಎಂಬಲ್ಲಿ ಜನಿಸಿದ. ಕ್ರಿ ಶ ೧೨೨೧ ರಿಂದ ಇವನನ್ನು ರೂಮಿ ಎಂದೇ ಕರೆಯಲಾಗುತ್ತಿತ್ತು. ೩೮ನೇ ವಯಸ್ಸಿನವರೆಗೂ ಯಾವುದೇ ರೀತಿಯ ಕಾವ್ಯವನ್ನು ಬರೆಯಲಿಲ್ಲ. ಆದರೆ ಷಾಮ್ಸ್-ಇ-ತಾಬ್ರಿಜ್ ಎಂಬ ಅನರಕ್ಷರಸ್ಥ ಅನುಭಾವಿ ಸಂತನ ಪ್ರಭಾವಕ್ಕೆ ಒಳಗಾಗಿ ಅಲ್ಲಿಂದ ಮುಂದೆ ಅವನೇ ಬಹುದೊಡ್ಡ ಅನುಭಾವಿ ಕವಿ ಎಂದು ಪ್ರಸಿದ್ಧಿ ಪಡೆದ. ಅವನ ಕಾವ್ಯ ಸಂಗ್ರಹಗಳಾದ ಮತ್ನವಿಯಲ್ಲಿ ೨೬,೦೦೦ ದ್ವಿಪದಿಗಳೂ ಮತ್ತು ದಿವಾನ್ ಕೃತಿಯಲ್ಲಿ ೪೦,೦೦೦ಕ್ಕೂ ಹೆಚ್ಚಿನ ಸಂಖ್ಯೆಯ ದ್ವಿಪದಿಗಳ ಸಂಗ್ರಹವಿದೆ.

## XXI

(ಮತ್ನವಿ ಬಿದಿರಿನ ಹಾಡಿನೊಂದಿಗೆ ಮೊದಲಾಗುತ್ತದೆ. ತಾನು ಬೆಳೆದ ನೆಲದಿಂದ ಬೇರೆಯಾದ ಬಿದಿರು ಭಗವಂತನೊಂದಿಗೆ ಸಮಾಗಮಕ್ಕಾಗಿ ತುಡಿಯುತ್ತದೆ. ಇಲ್ಲಿ ಬಿದಿರು ಮನುಷ್ಯನ ಆತ್ಮ (ಜೀವಾತ್ಮ)ವನ್ನು ಸಂಕೇತಿಸುತ್ತದೆ. ಬಿದಿರು ಬೆಳೆದ ನೆಲ ಅಥವಾ ಭೂಮಿ ಭಗವಂತನನ್ನು ಸಂಕೇತಿಸುತ್ತದೆ. ಬೆಳೆದ ನೆಲದಿಂದಾಗಿ ಪ್ರತ್ಯೇಕವಾಗುವುದೆಂದರೆ ಭಗವಂತನನ್ನು ಸೇರಲು ಪರಿತಪಿಸುತ್ತದೆ. ವಿರಹಾಕುಲ ಸ್ಥಿತಿಯಲ್ಲಿ ಚಡಪಡಿಸುತ್ತದೆ.)

ಕೇಳಿ ಬಿದಿರಿನ ಅಳಲ - ಅದು ನಿವೇದಿಸುತ್ತಿದೆ ಅಗಲಿಕೆಯ ವೇದನೆಯನ್ನು ನೆಲದಿಂದ ನನ್ನ ಕಿತ್ತೆಳೆದಂದಿನಿಂದ ನಾ ಹೊಮ್ಮಿಸಿದ ವಿಷಾದ ಸ್ವರಗಳಿಂದ, ಹೆಣ್ಣು-ಗಂಡುಗಳೆಲ್ಲರೂ ಬಿಕ್ಕುತಿಹರು.

ಅಗಲಿಕೆಯ ಘಾತದಲಿ ಹೋಳಾದ ಹೃದಯಗಳ ಸಹವಾಸ ಬೇಕಿದೆ ನನಗೆ: ತಿಳಿಸಬೇಕಿದೆ ನನ್ನ ಪ್ರೇಮ-ವಿರಹದ ನೋವ-ಏಕೆಂದರವರಿಗೇ ಅರ್ಥವಾಗಲು ಸಾಧ್ಯ.

ಅಗಲಿದ ಒಂದೊಂದು ಚೇತನವೂ ಮರುಮಿಲನದ ಗೀತೆಯನು ಆಲಿಸಲು ಬಯಸುವುದು.

ಎಲ್ಲೆ ಸೇರಲಿ, ಹೇಗೇ ಇರಲಿ, ಸುಖವೋ ದುಃಖವೋ – ಸಮಾವೇಶ ಯಾವುದೇ ಇದ್ದರೂ ನನ್ನಿಂದ ಹೊಮ್ಮುವುದು ಮಾತ್ರ ಶೋಕ ಗೀತೆ.

ಅವರವರ ನಂಬಿಕೆ ನಿರೀಕ್ಷೆಗಳಲ್ಲಿಯೇ ಗೆಳೆತನವ ಮಾಡಿದೆನಾದರೂ, ಅವರು ಯಾರೂ ನನ್ನೆದೆಯ ನೋವಿನಾಳದ ಪರಿಯ ಶೋಧಿಸಲೇ ಇಲ್ಲ.

ನನ್ನಳಲು, ನನ್ನದೆಯ ರಹಸ್ಯಗಳು ಬೇರೆ ಬೇರೆಯೇನಲ್ಲ ಆದರೂ ಒಳಗಣ್ಣು ಒಳಗಿವಿಗಳೆಲ್ಲಿಹವು?

ದೇಹ – ಆತ್ಮಗಳು ಅಪರಿಚಿತರಲ್ಲ. ಒಬ್ಬರಿಂದೊಬ್ಬರು ತಲೆಮರೆಸಿಕೊಂಡಿಲ್ಲ ಆದರೂ ಆತ್ಮವನು ನೋಡಲು ಅವಕಾಶವಾಗಲೇ ಇಲ್ಲ.

ಬಿದಿರಿನ ಅಳಲ ಕರೆ ಬೆಂಕಿ; ಗಾಳಿಯಲ್ಲಿ ಇಂತಹ ಬೆಂಕಿ ಇರಿಸಿಕೊಳ್ಳದವನಿಗೆ ಜೀವದಾಯಕ ಗಾಳಿಯ ಹಕ್ಕೂ ದೊರೆಯದಿರಲಿ.

ಬಿದಿರಿನ ಪೊಟರೆಯಲ್ಲಿದೆ ಬೆಂಕಿ; ಹೆಂಡದ ಬುದ್ಬುದಗಳಲ್ಲಿದೆ ಪ್ರೀತಿಯ ಗಾಳಿ. ಸ್ನೇಹವಂಚಿತರೆಲ್ಲರ ಸ್ನೇಹಿತೆಯಾಗಿದೆ ಬಿದಿರು. ಬಿದಿರಿನ ಸ್ವರಗಳು ನಮ್ಮೆಲ್ಲರ ಕಿವಿ ತಮಟೆಗಳ ಪೊರೆಯ ಸೀಳುತಿಹವು. ಬಿದಿರಿನಲ್ಲಿರುವ ವಿಷ, ವಿಷಕಾರಕಗಳ ಕಂಡಿಹಿರೇನು? ಮರುಕ, ಮಮತೆಗಳನಿರಿಸಿಕೊಂಡಿಹುದ ಕಂಡಿಹಿರೇನು?

ರಕ್ತಸ್ನಾತ ರಸ್ತೆಯನು ಬಿದಿರು ಬಣ್ಣಿಸುವುದು;

ಹಾಗೆಯೇ ಮಜ್ನೂನ ಪ್ರೀತಿಯ ದುರಂತವನ್ನೂ ಬಣ್ಣಿಸುವುದು

ನೋವು, ವಿಷಾದಗಳಲ್ಲಿ ಕಳೆದಿದ್ದೇವೆ ದಿನಗಳನೆಷ್ಟೋ; ದಿನಗಳೆಲ್ಲವೂ ಬರಿ ಚಿಂತೆಗಳಿಂದಲೇ ತುಂಬಿವೆ.

ಸರಿದಿದ್ದರೆ ದಿನಗಳು ಸರಿದಿರಲಿ; ಓ ಪ್ರಿಯ ನೀನು ಮಾತ್ರವೇ ಸರಿಯದೆ ಸನಿಹದಲಿರು. ಏಕೆಂದರೆ ನಿನ್ನಷ್ಟು ಪರಿಶುಭ್ರವಾದ್ದು ಮತ್ತೊಂದು ಇಲ್ಲವಾಗಿದೆ.

XXIX 2

ಖನಿಜವಾಗಿ ಸತ್ತು ನೇರವಾಗಿ ಜನಿಸಿದೆ; ಮರವಾಗಿ ಸತ್ತು ಪ್ರಾಣಿಯಾಗಿ ಬಂದೆ.

ಪ್ರಾಣಿಯಾಗಿ ಸತ್ತು ವಿಕಾಸದಾವರ್ತನ ಚಕ್ರ; ಮನುಜನಾಗಿ ಸಾವನ್ನಪ್ಪಿ, ರೆಕ್ಕೆ ಮೂಡಿಸಿಕೊಂಡು ಬರುವೆ ದೇವದೂತನಾಗಿ ದೇವದೂತನಾದರೂ ಮನುಜಾವಸ್ಥೆಯನು ದಾಟಬೇಕಿದೆ; ಯಾವುದೂ ಸ್ಥಿರವಲ್ಲ ಚಿರವಲ್ಲ ಆ ಅವನ ಮುಖದ ಹೊರತು.

ಅದಕ್ಕಾಗಿಯೇ ದೇವಪುರುಷತ್ವವನೂ ಕಳೆದು ಆಲೋಚನೆಯ ಹಿಡಿತಕ್ಕೂ ಸಿಗದ ಅಮೂರ್ತ ಚೇತನ ಆಗ ಬಯಸುತ್ತೇನೆ.

ಸಂಗೀತ ಸಭೆಯೊಳಗೆ ಲಯವಾಗುವ ಸ್ವರಗಳಂತೆ ಲಯವಾದಲ್ಲಿ, ಲಯದ ಕ್ರಿಯೆಯಲ್ಲಿಯೇ ಅವನ ಸೇರುವ ಭರವಸೆಯು ಮೊಳೆಯುವುದು.

XXIX 4

ನೂರು ವರುಷ ನಿಷ್ಠೆಯಲ್ಲಿ ಪೂಜಿಸುವುದಕ್ಕಿಂತ ಸಂತರ ಸಾಂಗತ್ಯದಲಿ ಅಲ್ಪ ಸಮಯವೆ ಲೇಸು.

ಅಭ್ರಕವಾಗಿರು ಅಮೃತ ಶಿಲೆಯಾಗಿರು, ಪವಿತ್ರ ಚೇತನ ಸಹವಾಸದಲಿ ನೀ ಮಾಣಿಕ್ಯವಾಗುವೆ.

ಎದೆಯ ಮೂಲೆ ಮೂಲೆಗಳಲ್ಲಿ ಕಾದಿರಿಸು ಪ್ರೀತಿಯನು ಗುಣವಂತರಿಗೆ; ತಣಿದವರಿಗೆ ಅನುಭಾವಿಗಳಿಗೆ ಪ್ರೀತಿಯ ಧಾರೆಯೆರೆಯಲು ಹೃದಯವನು ಮೀಸಲಿರಿಸು.

ಹತಾಶೆ ನಿರಾಶೆ ಹಾದಿ ಹಿಡಿಯ ಬೇಡ, ಭರವಸೆಯಿದೆ; ಕತ್ತಲಿಗೆ ಮುಖ ಮಾಡಬೇಡ, ಸೂರ್ಯರಿದ್ದಾರೆ.

ಕರುಣೆ ಅನುಕಂಪಗಳ ತುಂಬಿಕೊಂಡವನಿಗೆ ಪೋಷಣೆಯ ಪಡೆ ನಿನ್ನೆದೆಗೆ; ಹೋಗು ಧ್ಯೇಯ ಸಾಧಕನೆಡೆಗೆ ನನ್ನ ಭಾಗ್ಯದ ಬಾಗಿಲನು ತೆರೆಯ ಹೇಳು.

XXIX 9

ನಾ ಸಾವನಪ್ಪಿದ ದಿನ, ನನ್ನ ಶವಯಾತ್ರೆ ನಡೆದಾಗ ನನ್ನಾತ್ಮ ಈ ಜಗಕ್ಕೆ ಅಂಟಿಕೊಂಡಿದೆಯೆಂದು ಯೋಚಿಸಬೇಡ.

ನನಗಾಗಿ ಅಳಬೇಡ, ಅಯ್ಯೋ! ಅಯ್ಯೋ! ಎಂದೆನಬೇಡ, ನೀ ನುಡಿವ ದುಃಖದುದ್ಗಾರ ನಿನಗೆ ಪ್ರೇತಗಳ ಆಹ್ವಾನವಾದೀತು.

ನನ್ನ ಅಂತಿಮ ಸಂಸ್ಕಾರವನು ನೋಡಿ: ದೂರವಾದೆ! ದೂರವಾದೆ! ಎಂದು ಕೊರಗಬೇಡ. ಈ ಅಂತಿಮ ಯಾತ್ರೆ ಸಾವಲ್ಲ, ನನ್ನ ಭೇಟಿ ಮತ್ತು ಸಮಾಗಮ.

ಸಮಾಧಿಯಲಿ ಮಲಗಿದಾಗ ಹೋಗಿ ಬಾ! ಹೋಗಿ ಬಾ! ಎಂದೆನಬೇಡ; ಸಮಾಧಿಯೆಂಬುದು ಸ್ವರ್ಗದವರು ನನಗೆ ನೀಡುವ ಸ್ವಾಗತ, ಸಂಭ್ರಮಗಳ ಮರೆಯಾಗಿಡುವ ಪರದೆಯಾಗಿದೆ.

ಸಮಾಧಿಯಾಳಕ್ಕಿಳಿಸಿದಾಗ, ನನ್ನ ಬದುಕಿಸುವ ಆಲೋಚನೆ ಮಾಡುವೆಯೇಕೆ? ಸೂರ್ಯ ಚಂದ್ರರು ಮುಳುಗುವುದೆಂದಿಗಾದರೂ ಅವರಿಗೆ ನಷ್ಟವನು ತಂದಿಹುದೇ?

ಮುಳುಗಿದಂತೆ ಕಂಡರೂ ಅದು ಮುಳುಗುವುದಿಲ್ಲ. ಮರು ಹುಟ್ಟುವುದೇ ಆಗಿದೆ. ವಾಸ್ತವದಲಿ ಸಮಾಧಿ ಸೆರೆ ಮನೆಯಾಗದೆ ಆತ್ಮದ ಬಿಡುಗಡೆಗೆ ಹಾದಿಯಾಗಿದೆ.

ಯಾವ ಬೀಜವು ತಾನೆ ಬಿದ್ದೂ ಮೊಳಕೆಯೊಡೆದು ಏಳದಿದೆ? ಹೀಗಿರಲು ಮನುಷ್ಯ ಬೀಜಕ್ಕೇಕೆ ಚಿಂತೆ?

ಬಾವಿಗಿಳಿದ ಯಾವ ಕೊಡತಾನೆ ಮೇಲೇರಿ ಬರದಿಹುದು?

ಹಾಗಿರಲು ವಿಷಾದವೇಕೆ? ದುಃಖವೇಕೆ? ನಿನ್ನ ಆತ್ಮ ಜೋಸಫನ ಆತ್ಮದಂತಲ್ಲವೆ? ಸಮಾಧಿಯೆಂಬುದೂ ಕೇವಲ ಕುಳಿಯೊಂದು ತಾನೇ?

ಸಮಾಧಿಯ ಕಡೆಗಿರುವ ಬಾಯಿ ತೆರೆಯಬೇಡ. ತೆರೆ ಆಚೆ ಅದರ! ಹಾಡು; ಸಾವಗೆದ್ದ ಸಾಹಸವ ಕೊಂಡಾಡು. ನಿರ್ವಾತದೇಶದಲಿ.

# ಜಾಮೀ

[ನೂರ್-ರುದ್ದೀನ್-ಅಬ್ದುರ್. ರಹಮಾನ್ ಜಾಮಿ (೧೪೧೪-೧೪೯೨) ಜಾಮ್‌ನಲ್ಲಿ ಜನಿಸಿದವನು. ಹೆರಾತ್‌ನಲ್ಲಿ ಅಸುನೀಗಿದ. ಹೆರಾತ್ ರಾಜಕುಮಾರ ಸುಲ್ತಾನ್ ಹುಸೇನ್ ಮತ್ತು ಪ್ರಧಾನ ಮಂತ್ರಿ ಮೀರ್ ಅಲಿಶೇರ್ ನವಾ-ಈ-ಇವರುಗಳಿಂದಾಗಿ ಏಷಿಯಾದ ಸಾಂಸ್ಕೃತಿಕ ರಾಜಧಾನಿ ಎಂದು ಗುರುತಿಸಿ ಕೊಂಡಿತು. ಜಾಮಿ ಮಹಾ ಪ್ರತಿಭಾವಂತ. ಸ್ವೋಪಜ್ಞಚಿಂತಕ. ಅವನ ಪ್ರಮುಖ ಕೃತಿಗಳೆಂದರೆ-ಅನುಭಾವಿ ಕವಿತೆಗಳ ಮೂರು ಸಂಕಲನಗಳು (ದಿವಾನ್‌ಗಳು) ಮತ್ತು ಏಳು ಮತ್ನವಿಗಳು].

-[XLI]-

[ಚೆಲುವಿನ ಸ್ವಭಾವ ಕುರಿತು]

ಜೀವದಸ್ತಿತ್ವದ ಶೂನ್ಯದೇಕಾಂತದಲಿ ವಿಶ್ವದ ಸುಳಿವೇ ಇಲ್ಲ; ಎಲ್ಲವೂ ಮರೆಯಾಗಿವೆ ನಿಗೂಢದಲಿ.

ಬದುಕಿನಾರಂಭ-ಸೃಷ್ಟಿ ಮೊದಲು-ಎಲ್ಲವೂ ತಾನೇ ಆಗಿ; ತನ್ನೊಳಗೆ ತಾನೇ, ತನಗಾಗಿ ತಾನೇ ಅಭಿವ್ಯಕ್ತಿ ತನ್ನದೇ ಅಸ್ತಿತ್ವ ದ್ವಂದ್ವಗಳಿಗೆಡೆಯೇ ಇಲ್ಲ;

ನೀನು ನಾನೆಂಬ ಮಾತೇ ಇಲ್ಲ

ಅಗೋಚರ ವಿಶ್ವದಲಿ ಆ ಪ್ರೇಮಿ ಹೃದಯದ ರತ್ನ, ಮದುವೆ ಮಂಟಪದಲ್ಲಿ ಕುಳಿತಿದ್ದ.

ಕನ್ನಡಿಯಲಿ ಅವನ ಬಿಂಬವಿರಲಿಲ್ಲ; ಬಾಚಣಿಗೆಯಿಂದ ಬೈತಲೆಯ ಬಿಡಿಸಿರಲಿಲ್ಲ.

ಅವನ ಕುರುಳುಗಳು ಗಾಳಿಗೆ ಚದುರಿರಲಿಲ್ಲ. ಕಾಡಿಗೆಯಿಂದ ಕಣ್ಣು ಕಪ್ಪಾಗಿರಲಿಲ್ಲ.

ಕೆನ್ನೆ ಗುಲಾಬಿಗಳ ಮೇಲೆ ಹಯಾಸಿಂತುಗಳ ಪೊದೆಗಳಿರಲಿಲ್ಲ. ಹೂ ಮೊಗದ ಮೇಲಿನ ಕಾಂತಿಯಿಷ್ಟೂ ಕುಂದಿರಲಿಲ್ಲ.

ಸ್ವಚ್ಛಂದ ಪರಿಶುದ್ಧಮೊಗದಲ್ಲೆಲ್ಲಿಯೂ ಕಲೆಯಿರಲಿಲ್ಲ; ಬಣ್ಣಮೆತ್ತಿರಲಿಲ್ಲ; ಅದೃಶ್ಯ; ಅಗೋಚರ.

ತನ್ನೊಳಗೆ ತಾನೇ ತನ್ಮಯನಾಗಿ, ತನ್ನೊಲಿವಿಗಾಗಿ ತಾನೇ ಒಲವಿನ ಸ್ವರಗಳ ನುಡಿಸುತ್ತಿದ್ದ.

ಆದರೆ ಚೆಲುವಿಗೆ, ತನ್ನ ಚೆಲುವ ಮರೆಯಿಸದೆ ಮರೆಮಾಚಿ ಅಡಗಿಸಿಕೊಳ್ಳುವುದೆಂದರೆ ಆಗುವುದೇ ಇಲ್ಲ.

ಚೆಲುವ ಬೈತಿಟ್ಟು ಕೊಳ್ಳುವುದೆಂದರೆ ಬೇಸರ, ಅಸಹನೀಯ; ಕೋಳಹಾಕಿ ಕಂಬಿಗಳ ಹಿಂದಿರಿಸಿದರೂ ಸಂದಿಗೊಂದಿಗಳಿಂದಲೇ ಇಣುಕಿ ತೋರುತ್ತದೆ.

ಹೇಗೆಂದರೆ, ವಸಂತಾಗಮನವಾಗುತ್ತಿದ್ದಂತೆ ಬೆಟ್ಟ ಗುಡ್ಡಗಳ ಬಂಡೆಗಲ್ಲುಗಳ ನಡುವಿನಿಂದಲೇ ನಗುನಗುತ್ತಾ ಅರಳುವ ಅನೆಮೋನ್‌ಗಳಂತೆ. ಬಂಡೆಗಲ್ಲುಗಳ ಮರೆಯಿಂದಲೇ ಚೆಲುವ ಹೊರಚೆಲ್ಲುತ್ತವೆ. ಹೊರಸೂಸಿ ಚೆಲುವ ಚೆಲ್ಲದ ಹೊರತು ನೆಮ್ಮದಿಗೆ ನೆಲೆಯಿಲ್ಲ.

ನಿನ್ನ ಮನದಲ್ಲಿ ಹೊಳೆವ ಹೊಸಭಾವ ವಿಚಾರಗಳ ಹೊರಗೆ ಅಭಿವ್ಯಕ್ತಿಸದ ಹೊರತು ನೆಮ್ಮದಿಗೆ ಎಡೆಯಿಲ್ಲದಾಗುವೊಲೆ,

ಚೆಲುವೂ, ತನ್ನ ತೆರೆದು ತೋರದೆ, ಮೆಚ್ಚುಗೆಯ ಮಾತನಾಲಿಸದೆ ತಣಿಯುವುದೇ ಇಲ್ಲ.

ಚೆಲುವಿನೊಲು ವ್ಯಕ್ತವಾಗಲು ತುಡಿಯುವರಲ್ಲಿ ಆ ದೇವನೇ ಮೊದಲಿಗ!

ಅದಕೆಂದೇ ಈ ಭೂಮಿಯ ಅದ್ಭುತಗಳೆಂಬಂತೆ ಚರಾಚರ ಸಕಲ ವಸ್ತುಗಳಲ್ಲಿಯೂ ತಾನೇ ತನ್ನ ಚೆಲುವ ಮೆರೆದ.

ಒಂದೊಂದು ವಸ್ತುವೂ ಕನ್ನಡಿಯಾಗಿ ಅವನ ಒಂದೊಂದು ಗುಣರೂಪಗಳ ಬಿಂಬಿಸಿದವು; ಎಲ್ಲೆಲ್ಲೂ ಅವನದೇ ಚರ್ಚೆಯ ವೇದಿಕೆಗಳು ಎದ್ದವು!

ಪ್ರತಿಯೊಂದು ರಾಜ್ಯ ರಾಜನ ಮೇಲೆಹೊಳೆದಿತ್ತು. ಅವನದೇ ಕಾಂತಿಯ ಕಿರಣ; ರಾಜನಿಗೆ ಮಾತ್ರ ತಾನೊಂದು ತಿರುಗುವ ಗೋಲದ ಅನುಭವ.

ಅವನ ಅಭಿಮಾನಿಗಳು; ಅನುಗ್ರಹಯಾಚಕರು ಮೈಮರೆತು ಕೂಗಿದರು– ಓ ದೇವರೇ ನಿನಗೆ ಜಯವಾಗಲಿ.

ಸ್ವರ್ಗ ಸಮುದ್ರದ ಮುಳುಕರಿಗೆ ಭಗವಂತನೇ ಹಡಗು. ಎಲ್ಲೆಲ್ಲೂ ಸ್ವರ್ಗದೊಡೆಯನಿಗೆ ಜಯವಾಗಲೆಂಬ ಜಯಘೋಷದ ಅನುರಣನ.

ಅವನ ಒಂದು ಕಾಂತಿ ಕಿರಣದಿಂದಲೇ ಬೆಳಗಿತು ಭೂಮಿ ಕೋಗಿಲೆಯ ಹೃದಯ ಗುಲಾಬಿಗಾಗಿ ಚಡಪಡಿಸಿತು.

ಅವನ ಬೆಂಕಿಯಿಂದಲೇ ಉರಿಯಿತು ದೀಪ; ಮನೆ ಮನೆಯಲ್ಲೂ ಸಾವನಪ್ಪಿದವು ಸಾವಿರ ಸಾವಿರ ಪತಂಗ.

ಜೋಸಫನ ಚಂದ್ರನಾಗಿ ಅವನೇ ಕಾಣಿಸಿಕೊಂಡ; ಜುಲೈಖಾಳ ಹೃದಯವನ್ನೂ ಇರಿದು ಕೊಂದ.

ಎಲ್ಲೆಲ್ಲೋ ತನ್ನದೇ ಚೆಲುವನ್ನು ಪಸರಿಸಿದ. ವಿಶ್ವದ ಪ್ರತಿಯೊಂದು ಚೆಲುವಿನ ವಸ್ತುವನ್ನೂ ತನ್ನ ಚೆಲುವಿಗೆ ನಿದರ್ಶನವೆಂಬಂತಿರಿಸಿದ.

ತೆರೆಯ ಮರೆಯಲ್ಲಿ ಮರೆಯಾಗಿ ಕುಳಿತ ಚೆಲವೂ ಅವನದೇ; ವಿಧಿ ಹೃದಯಗಳನ್ನು ಚಡಪಡಿಸುವಂತೆ ಮಾಡಿದರೆ ಅವನು ಅವುಗಳನ್ನು ಅಡಿಯಾಳಾಗಿಸಿಕೊಳ್ಳುತ್ತಾನೆ. ಯಾರನ್ನಾದರೂ ಪ್ರೀತಿಸಬೇಕೆಂಬ ಹೃದಯವಿದ್ದರೆ ಈ ಭೂಮಿಯಲ್ಲಿ! ತಿಳಿದೋ ತಿಳಿಯದೆಯೋ, ಪ್ರೀತಿಸು ಅವನನ್ನೇ!

ಎಚ್ಚರ ಮಾತು ಜಾರದಿರಲಿ; ಅಲ್ಲದೆ 'ನಮ್ಮಿಂದ ಪ್ರೀತಿ, ಅವನಿಂದ ಚೆಲವು' – ಎಂದೂ ಹೇಳದಿರಿ.

ಏಕೆಂದರೆ ಚೆಲುವಿನಂತೆಯೇ ಪರಿಶುದ್ಧ ಪ್ರೀತಿಯೂ ಅವನಿಂದಲೇ ಬರುವುದು; ಅದು ನಿನ್ನಲ್ಲಿ ಕಾಣಿಸಿಕೊಳ್ಳುತ್ತದೆ.

ನೀನೊಂದು ಕನ್ನಡಿ; ಆ ಕನ್ನಡಿಯ ಹಿಡಿದವನು ಅವನು ಅಲ್ಲದೆ ನೀನು ಅವ್ಯಕ್ತ ಅವನು ವ್ಯಕ್ತ.

ಗಂಭೀರವಾಗಿ ವಿಚಾರಮಾಡಿದರೆ ಒಂದು ರೀತಿಯಲ್ಲಿ ಅವನೆ ಕನ್ನಡಿಯೂ ಕೋಶಾಗಾರವೂ ಅವನೆ, ಕೋಶಾಗಾರದೊಳಗಿನ ಸಂಪದವೂ ಅವನೆ.

ನಾನು–ನೀನು–ಲೆಕ್ಕಕ್ಕೇ ಇಲ್ಲ. ನಾವೆಲ್ಲರೂ ಕೇವಲ ಭ್ರಮೆಗಳು; ಅವಾಸ್ತವಗಳು.

ಮೌನದಿಂದಿರು, ಈ ಕಥೆಗೆ ಕೊನೆಯಿಲ್ಲ; ಇದಕ್ಕೆ ನಾಲಿಗೆಯಿಲ್ಲ; ನಾಲಿಗೆಯಿಂದ ಮಾತೂ ಇಲ್ಲ.

ಅವನನ್ನು ಪ್ರೀತಿಸುವುದು ಮತ್ತು ಪ್ರೀತಿಯ ಕತೆ ಹೇಳುವುದಷ್ಟೇ ನಮ್ಮ ಗುರಿ; ಇದರಾಚೆ ನಮದೇನಿಲ್ಲ; ಏನೂ ಇಲ್ಲ.

[XLI]2

[ದಿವಾನ್ ಸಂಕಲನದಿಂದ]

ನಿನ್ನಾ ತುಟಿಗಳಿಂದ ಗಿಳಿಯ ಮುದ್ದು ಮಾತುಗಳಿಗೆ ಸೋಲನುಣಿಸಿದೆ; (ನಿನ್ನ ಚೆಲುವಿನಲಿ) ವನಿತೆಯರ ಮೃದು ಮಧುರ ಹೃದಯಗಳ ಆತ್ಮ ಸಂಯಮದ ಸೂತ್ರ ಹಿಡಿದಿದ್ದೀಯೆ.

ನೀನು ಹೋಗಿ ಬರುವುದನ್ನು ನೋಡುವ ಭಾಗ್ಯದ ಅಭ್ಯಾಸಕ್ಕೆ ಬಿದ್ದವರು ನಾವು; ನಮ್ಮನ್ನೂ ನೋಡದಂತೆ ನಟಿಸಿ ಹೋಗಬೇಡ.

ದ್ರೋಹವೆಂಬ ಬಂಡೆಯ ಮೇಲೆ ಅಪ್ಪಳಿಸಿ ನನ್ನೆದೆಯನ್ನು ಸೀಳುವೆಯಾದರೆ, ಅಲ್ಲಿ ನಿನಗೆ ನನ್ನ ಶರಣಾಗತಿಯ ಮಾಣಿಕ್ಯವಲ್ಲದೆ ಮತ್ತೊಂದ ನೀ ನೋಡಲಾರೆ.

ನಿನ್ನ ಪ್ರೀತಿಯಿಂದಲಿ ಆ ಹತವಾದ ನನ್ನ ಅಧರಗಳು ಆರಕ್ತ ಕಣ್ಣುಗಳಿಂದ ಸುರಿವ ಧಾರೆಗಳಿದ್ದರೂ ಬಾಡಿ ಬೆಂಡಾಗಿವೆ!

ಬಯಕೆಯ ಗುಡಾರವನು ಹಾಕಬೇಕೆಂದಿದ್ದರೆ, ಓ ಹೃದಯವೇ ಅವಳ ದೇಹ ಕಂಬಗಳನ್ನು ಕೇಶದಲಿ ಹೆಣೆದ ಹಗ್ಗವನು ಕಡವಾಗಿ ಬೇಡು!

ಪ್ರೇಮ ಸಾಮ್ರಾಜ್ಯದಲಿ ಒಳಿತು ಕೆಡುಕುಗಳ ನಡುವಿನ ವ್ಯತ್ಯಾಸ ಹಿರಿದು ಒಳಿತಿಗೆ ಒಳಿತನ್ನು ಮಾಡು; ಕೇಡಿಗೆ ಕೇಡನ್ನು ಮಾಡು.

[XLI]3

ಕನ್ನಡಿಯಾಗು ಕನ್ನಡಿಯಲಿ ಅವನ ಬಿಂಬವ ಕಾಣು; ಹೇಳುವುದೇನನ್ನೂ ಕೇಳಬೇಡ, ಏಕೆಂದರೆ ಕೇಳುವುದು ನೋಡುವುದಕ್ಕೆ ಸಮನಲ್ಲ.

ನಿನ್ನ ಚೆಲುವನ್ನು ಕಾಣಲು ಬಹುದೇ? ನಾ ಕೇಳಿದೆ. ನಾಚಿ ಮೆಲ್ಲನೆ ನುಡಿದೆ "ಹೃದಯ ಶುಭ್ರವಾದ ಕನ್ನಡಿಯಾಗಿದ್ದರೆ ನಿಚ್ಚಳವಾಗಿ, ನಿಶ್ಚಯವಾಗಿ ಕಾಣಬಲ್ಲೆ!"

ಸಚರಾಚರ ಜಗತ್ತಿನ ಅಣು ಅಣುವೂ ಅವನ ಚೆಲುವಿನ ಕನ್ನಡಿಗಳೇ; ಒಂದೊಂದು ಕನ್ನಡಿಯಾಗಿ ಅವನ ಚೆಲುವನ್ನೇ ಬಿಂಬಿಸುತ್ತದೆ.

ಓ ಅನುಭಾವಿಯೇ ತೇಪೆಯೊಲಿದ ಬಟ್ಟೆಯನು ಧರಿಸಿದವನು ನೀನಾದರೆ ಮಧುವ ಸೇವಿಸುವ ಸ್ವೇಚ್ಛಾಚಾರಿಗಳು ನಾವು. ಆದರೂ ನಮ್ಮ ನಡುವಿರುವುದು ಲೌಕಿಕ ದೂರವಷ್ಟೆ ಹೊರತು, ನಾವೆಲ್ಲರೂ ಒಂದೆ.

ಜಾಮಿ ಅಮರತ್ವದ ಉಕ್ಕೇರುವ ಸಾಗರದಲ್ಲಿ ಬಿದ್ದಾಗ. ಭೂಮಿಯ ಮೇಲಿನ ಜೀವಿಗಳ ಹೊಯ್ದಾಟದ ಭಾವನೆಗಳ ಕಾಲುಷ್ಯವನು ಕಳೆದುಕೊಂಡ; ಪರಿಶುದ್ಧನಾದ.

ನೋವಿನ ನನ್ನ ಹೃದಯದಲ್ಲಿ, ನಿದ್ದೆಗೆಟ್ಟ ಕಣ್ಣುಗಳಲ್ಲಿ ಕಾಣಿಸುವ ಪ್ರತಿಯೊಬ್ಬರೂ ನಿನ್ನಂತೆಯೇ ಕಾಣುತಿಹರು!

ಪ್ರಾಣಕೊಟ್ಟೂ ಸೋಲದವನು ನಾನಾದರೆ,

ರಕ್ತ ಚೆಲ್ಲಿಯೂ ಕಾಣದಂತೆ ಉಳಿದವನು ನೀನು!

ಪ್ರಾಣ ಹೋದರೇನು?... ಭಯವಿಲ್ಲ. ನೀನು ನನ್ನ ಪ್ರೇಮಿಯಾಗಿರುವೆ. ಹೃದಯ ಕಳೆದು ಹೋದರೇನು? ನನ್ನೆದೆಯ ಕಣ್ಣಾಗಿ ನೀನಿದ್ದೀಯ!

ಕ್ಷಣಕ್ಷಣದ ನೋವೂ ಹಲವು ರೀತಿಗಳಲ್ಲಿ ನನ್ನ ಎದೆಯನು ಇರಿಯುತಿದ್ದರೂ ನನಗೆ ಚಿಂತೆಯಿಲ್ಲ; ಏಕೆಂದರೆ ಅದಕ್ಕೆಲ್ಲ ಪರಿಹಾರವಾಗಿ ನೀನಿರುವೆ!

ಹಗಲು ನನ್ನ ಕತ್ತಲ ರಾತ್ರಿಗಳಿಂದ ಬೆಳಕನ್ನು ಬೇಡಿ ಬರುತ್ತದೆ, ಏಕೆಂದರೆ ನಿನ್ನ ಚಂದ್ರಕಾಂತಿಯ ಮೊಗವಿದೆ. ಕತ್ತಲ ರಾತ್ರಿಗಳನ್ನು ಬೆಳಗಿಸುವ ಹಣತೆ ನೀನಾಗಿರುವೆ.

ಸಮಾಗಮದ ಮಾರುಕಟ್ಟೆಯಲ್ಲಿ, ನೀನು ನನ್ನನ್ನು ಚಿಕ್ಕಾಸಿಗೂ ಕೊಳ್ಳುವುದಿಲ್ಲ. ಆದರೂ ನೀನೇ ನನ್ನ ಗ್ರಾಹಕನೆಂದು ಬಡಾಯಿಕೊಚ್ಚುವೆ.

"ಜಾಮಿ ನಾನು ನಿನ್ನಯ ಗೆಳೆಯ. ಮತ್ತೊಮ್ಮೆ ಗೆಳೆಯನ ಬೆನ್ನ ಹಿಂದೆ ಬೀಳಬೇಡ" (ನೀನು ಹೇಳಿದಂತೆ) ಓಹೋ ಹಾಗಾದರೆ ನಾನು ನಿನ್ನೊಂದಿಗೆ ಬಹುಕಾಲ ಬಾಳ ಬಲ್ಲೆ. ಏಕೆಂದರೆ ನೀನು ನನ್ನ ಗೆಳೆಯ!

[XLI]5

ಸಂಕಟಗಳ ಬಂದಿಗಳಾಗಿರಬೇಕು, ಇನ್ನೆಷ್ಟು ಕಾಲ, ಈ ಸಮಾಜದಲ್ಲಿ! ದೇವರೆಡೆಗೆ ಮುಖಮಾಡು. ಶಾಂತಿ, ನೆಮ್ಮದಿಗಳು ನಿನ್ನದಾಗುವುದು.

ನಿನ್ನ ಕಣ್ಣ ಮುಂದೆಯೇ ಹಗಲಿರುಳೂ, ಅಮರತ್ವದ ಕಡಲಿನಿಂದೇಳುತ್ತಿದೆ ಅಶಾಂತಿಯಲೆಗಳು. ಅಧ್ಯಾತ್ಮದ ಮನಸು ಲೌಕಿಕ ಸುಖಗಳಿಗೆ ಈಡಾದಲ್ಲಿ ಕಲುಷಗೊಂಡು ಹಾಳಾಗುವುದಲ್ಲ !

ಓ ಗುರುವೆ ಕಾಠಿನ್ಯ ಬೇಡ. ಈ ಕತ್ತಲಿನ ಜಗತ್ತಿನಾಳದಲ್ಲಿ ಕಾಲಡಿಯಲಿಕ್ಕಿ ಮಣ್ಣಾಗಿಸುವರು!

ಪ್ರಾಪಂಚಿಕ ಗುಣಗಳನಷ್ಟು ಕಳೆದುಕೋ; ಕಳೆದುಕೊಂಡರೇನು ಚಂದ್ರನೋಪಾದಿಯಲಿ ಕಳೆದದ್ದು ಮತ್ತೆ ತುಂಬಿಕೊಳ್ಳುವುದಲ್ಲ!

'ಇರುವುದು' ಸುಖ; 'ಇಲ್ಲವಾಗುವುದು' ದುಃಖ ಎಂದು ಭಾವಿಸುವವರೆಗೆ ಆತ್ಮಜ್ಞಾನ ದಾರಿದ್ರ್ಯದ ಗಾಳಿಯನು ನೀ ಸೇವಿಸಬೇಡ 'ಜಾಮಿ.'

# ಹಾತಿಫ್

[೧೮ನೇ ಶತಮಾನದ ಪರ್ಷಿಯನ್ ಕವಿ. ಅವನ ಕವಿತೆಗಳಲ್ಲಿ ದಟ್ಟವಾದ ಅನುಭಾವದ ಛಾಯೆ ಕಾಣಸಿಗುತ್ತದೆ. ತನ್ನ ಕವಿತಾಛಂದಗಳ ಶೈಲಿಯಿಂದ ಪರ್ಷಿಯನ್ ಕಾವ್ಯ ಸಾಮ್ರಾಜ್ಯದಲ್ಲಿ ಅಮರನಾಗಿದ್ದಾನೆ. ತರ್ಜಿ ಎಂಬ ಛಂದೋರೂಪಗಳನ್ನು ಬಳಸಿದ್ದಾನೆ. "ಇದೋ ನಿನಗಾಗಿದೆ ನನ್ನ ಹೃದಯ, ಆತ್ಮಗಳನರ್ಪಿಸುವೆ; ನೀ ಬರುವ ಹಾದಿಯಲಿ ಇವೆರಡನೂ ನಿನ್ನ ನೈವೇದ್ಯಕೆಂದಿರಿಸಿರುವೆ."

ನೀನು ನನ್ನ ಪ್ರಿಯೆ. ನಿನಗಿದೋ ನನ್ನ ಹೃದಯದರ್ಪಣೆ. ನೀ ನನ್ನ ಒಲವು. ಅದಕಿದೋ ನನ್ನಾತ್ಮವೇ ನಿನಗೆ ನೀಡುತಿಹೆ ನೈವೇದ್ಯ.

ನಿನ್ನಿಂದ ಸೆರೆಗೊಂಡ ನನ್ನ ಹೃದಯವನು ಬಿಡಿಸಿಕೊಳ್ಳಲಾರೆನಯ್ಯೋ, ಕಷ್ಟ! ಕಷ್ಟ!! ಇದಕ್ಕಿಂತ ನಿನ್ನ ಚರಣಗಳಿಗೆ ನನ್ನನ್ನರ್ಪಿಸಿಕೊಳ್ಳುವುದೇ ಸುಲಭವೆನಿಸುವುದು.

ನಿನ್ನ ನನ್ನ ಸಮಾಗಮದ ಹಾದಿ ತುಂಬೆಲ್ಲ ಎಷ್ಟೊಂದು ಅಪಾಯ! ನಿನಗಾಗಿ ತುಡಿವ ಎದೆಯ ನೋವು ಅಪಾರ. ಅದಕ್ಕಿಲ್ಲವೇನೊಂದು ಪರಿಹಾರ

ನಾವು ನಿನ್ನ ಗುಲಾಮರು. ಆತ್ಮ ಹೃದಯಗಳೆರಡೂ ಸದಾ ಸಿದ್ಧ ನಿನ್ನ ಕರೆಗೆ ನಿನ್ನಾಜ್ಞೆಯ ದನಿಗೆ ಕಣ್ಣು ಕಿವಿಗಳೆರಡೂ ಎಚ್ಚರ!

ಶಾಂತಿ ನಿನ್ನಯ ಬಯಕೆಯಾದರೆ, ಇದೋ ಇಲ್ಲಿದೆ ಹೃದಯ; ಹೋರಾಟ ನಿನ್ನಯ ಬಯಕೆಯಾದರೆ ಇದೋ ಇಲ್ಲಿದೆ ಆತ್ಮ.

ಹಿಂದಿನ ರಾತ್ರಿ ನಿನ್ನ ಪ್ರೇಮೋನ್ಮಾದದಲ್ಲಿ ದಿಕ್ಕು ದೆಸೆ ಕಾಣದೊಲು ಅಲೆದಾಡುತ್ತಿದ್ದೆ.

***

ಒಳಗಣ್ಣು ತೆರೆ, ಆತ್ಮ ಗೋಚರಿಸುವುದು, ಗೋಚರವಾಗದ್ದೂ, ಗೋಚರಿಸುವುದು. ಪ್ರೀತಿ ಸಾಮ್ರಾಜ್ಯದ ಕಡೆಗೆ ಮುಖಮಾಡು, ಜಗತ್ತೆಲ್ಲವೂ ಒಂದು ಸುಂದರ ತೋಟದಂತೆ ಕಾಣಿಸುವುದು.

ನೀನು ಕಾಣುವುದು ನಿನ್ನ ಹೃದಯ ಬಯಸಿದ್ದನ್ನು. ಹೃದಯ ಬಯಸುವುದು ನೀನು ಕಂಡದ್ದನ್ನು.

ಕೊಟ್ಟು ಬಿಡು ಪ್ರೀತಿಗೆ ನಿನ್ನಲಿರುವುದನೆಲ್ಲ ಇದರಿಂದ ನಿನಗೆ ನಷ್ಟವಾಗುವುದೇನಿಲ್ಲ; ನಷ್ಟ ಎಳ್ಳಷ್ಟೂ ಕಾಣುವುದಿಲ್ಲ!

ಪ್ರೀತಿಯ ಮೂಸೆಯಲಿ ನನ್ನ ಹೃದಯವನು ಕರಗಿಸಿ ನೋಡು, ಆಗ ನಿನ್ನ ಹೃದಯವೇ ಸ್ಪರ್ಷಮಣಿಯಾಗುವುದು.

ನಿನ್ನ ಕಿವಿಗೆ ಕೇಳದ್ದನ್ನು ಕೇಳುವೆ

ನಿನ್ನ ಕಣ್ಣಿಗೆ ಕಾಣದ್ದನ್ನು ಕಾಣುವೆ.

ಓ! ಪ್ರೀತಿಸು ಹೃದಯ, ಆತ್ಮಗಳಿರುವುದನ್ನು, ಖಂಡಿತವಾಗಿಯೂ ಕಣ್ತುಂಬ ಕಾಣುವೆ ಅವುಗಳನ್ನು

ಅವನೊಬ್ಬ; ಅವನೇ ಒಬ್ಬ; ಒಬ್ಬನೇ ದೇವರು; ದೇವರಿಲ್ಲ; ಆದರಿದ್ದಾನೆ 'ಅವನು'

## ಮುಘಲ್ ಕಾವ್ಯ

[ಮುಘಲ್ ಕಾವ್ಯದ ಸೌಂದರ್ಯವಿರುವುದು ಅದರ ಸ್ವರೂಪ ಮತ್ತು ವಿಚಾರಗಳಲ್ಲಿ ಜೊತೆಗೆ ಸ್ವೋಪಜ್ಞತೆ, ಪರಿಕಲ್ಪನೆ, ವಿಡಂಬನೆ, ಹಾಸ್ಯ, ಇತ್ಯಾದಿಗಳೂ ಈ ಕಾವ್ಯದ ವೈಶಿಷ್ಟ್ಯಗಳಾಗಿವೆ.]

–ಬಾಬರ್–

[ಮುಘಲ್ ದೊರೆಗಳಲ್ಲಿ ಬಾಬರ್‌ನ ಹೆಸರು ಪ್ರಮುಖವಾಗಿ ಕೇಳಿ ಬರುತ್ತದೆ. ದೊರೆಯಾಗಿ ಆಡಳಿತ ನಡೆಸುವುದರ ಜೊತೆಗೆ ಅತ್ಯಂತ ಸುಂದರವಾದ ಕವಿತೆಗಳನ್ನೂ ಬರೆಯಬಲ್ಲವನಾಗಿದ್ದ. ಆದರೆ ಬರೆದದ್ದು ಮಾತ್ರ ಅತ್ಯಲ್ಪ.]

ಓ ಚಂದ್ರನೇ (ಕಾಂತಿಹೆಣ್ಣು) ನಿನ್ನೊಂದಿಗೆ ಸಮಾಗಮದ ಕ್ಷಣಗಳು ನನಗೆ ಸಂತಸದ ಕ್ಷಣಗಳು; ಅಗಲಿಕೆಯ ಕ್ಷಣಗಳೇ ಯಾತನೆಯ ಕ್ಷಣಗಳು;

ಓ ಪ್ರೇಯಸಿಯೆ, ನನ್ನೆದೆಯನಿರಿದು ಬಿಡು; ಇರಿದ ಘಾಯವೇ ನನಗೆ ನೆಮ್ಮದಿಯ ಮುಲಾಮು, ಬಳಲಿ ಬೇಸರಾದ ನನ್ನ ಬದುಕಿಗೆ, ನೀ ಕೊಡುವ ನೋವು ಹಿತವಾದ ಕಾವು!

ಟ್ಯುಲಿಪ್‌ಗಳಂತಹ ನಿನ್ನ ಕೆನ್ನೆಗಳ ಮೇಲಿನ ಮಚ್ಚೆ, ಪ್ರೀತಿಯ ಗುರುತಾಗಿಹುದು, ನಿನ್ನ ಪ್ರೇಮಿಗಳಿಗೆ, ಅದನ್ನು ಅಲ್ಲಿಯೇ ಉಳಿಸಿರಿಸು.

ನಿನ್ನ ಪ್ರೇಯಸಿ, ನಿನ್ನ ರಕ್ತವ ಹನಿಸಿದಳೇ? ಇರಲಿ ಬಿಡು, ಖುಷಿ ಪಡು ಬಾಬರ್. ಏಕೆಂದರೆ ಅವಳ ಈ ಕೆಲಸವೂ ನಿನಗೆ ಮಾಡಿದ ಉಪಕಾರವೇ!

XLIV 2

ಹೊಸವರುಷ, ವಸಂತ, ಮಧು, ಪ್ರೇಯಸಿ; – ಅನುಭವಿಸು ಎಲ್ಲವನೂ! ಮರಳಿ ಎರಡನೇ ಬಾರಿಗೆ ದೊರೆಯುವುದಿಲ್ಲ ಬಾಬರ್!

XLI3

ವಸಂತ ಬಂದಿದೆ. ಆದರೆ ಜೊತೆಗಾರರಿಲ್ಲದೆ ಪ್ರೇಮಿಗಳಿಗೆ ಗಂಧ ಗಾಳಿಯಾಗಲೀ, ಸುಂದರ ಟ್ಯುಲಿಪ್ ಉದ್ಯಾನಗಳಾಗಲೀ ರುಚಿಸುವುದಿಲ್ಲ.

ಈ ಭೂಮಿಯ ಮೇಲೆ ಎಷ್ಟೊಂದು ಬಗೆಯ ತುಂಟಾಗಳ ಕಂಡಿದ್ದೇನೆ. ಆದರೆ ನಿನ್ನ ಕಣ್ಣಲ್ಲಿ ಕಂಡ ತುಂಟಾಟಕ್ಕೆ ಎಣೆಯೇ ಇಲ್ಲ!

## ಜಹಾಂಗೀರ್–ನೂರ್ ಜಹಾನ್–ಸಂವಾದ.

ಜಹಾಂಗೀರ್:

ಆರ್ತ ಸ್ವರಗಳನ್ನು ಗಾಳಿಯಲ್ಲಿ ತುಂಬಲು ನಾನು 'ಬುಲ್ ಬುಲ್' ಪಕ್ಷಿಯಲ್ಲ; ಒಂದಣುವಿನಷ್ಟೂ ಗೋಳಾಟ ಗೊಣಗುಗಳಿಲ್ಲದೆ ಸಾಯುವ ಪತಂಗ ಮಾತ್ರ ನೂರ್ ಜಹಾನ್:

ಸುಟ್ಟುಕೊಂಡು ತತ್ ಕ್ಷಣವೇ ಸಾಯುವ ಪತಂಗ ನಾನಲ್ಲ; ಉರಿದುರಿದು ಕ್ಷೀಣವಾಗುತ್ತಾ, ಸಾಯುವೆನೆಂಬ ಗೋಳಿನ ಸ್ವರವಿಲ್ಲದೇ, ರಾತ್ರಿಯೆಲ್ಲವೂ ಕಡೆತನಕ ಉರಿದು ಸಾಯುವ ದೀಪ (ಮೇಣದ ಬತ್ತಿ) ನಾನು.

ಜಹಾಂಗೀರ್; ಮುದುಕರೇಕೆ ಬೆನ್ನುಬಾಗಿ ಜಗತ್ತನ್ನು ನೋಡುತ್ತಾ ಸಾಗುತ್ತಾರೆ?

ನೂರ್ ಜಹಾನ್; ಅವರು ಕಳೆದು ಹೋದ ತಮ್ಮ ಯೌವ್ವನವನ್ನು ಮಣ್ಣಲ್ಲಿ ಹುಡುಕುತ್ತಿದ್ದಾರೆ.

## ಷಾಹ್ ಜಹಾನ್ ಮತ್ತು ಮುಮ್ತಾಜ್‌ಮಹಲ್

[ಷಾಹಜಹಾನ್ ಮತ್ತು ಮುಮ್ತಾಜ್, ಅರಮನೆಯೊಳಗಿಂದಲೇ ಯಮುನಾನದಿ ಚಿಮ್ಮುತ್ತಾ, ಬಂಡೆಗಳಿಗಪ್ಪಳಿಸುತ್ತಾ ಹರಿಯುವುದನ್ನು ನೋಡುತ್ತಿದ್ದರು. ಷಾಹಜಹಾನ್ ಹೆಂಡತಿಯನ್ನು ಮೆಚ್ಚಿಸಲು, ಹೀಗೆಂದ:]

ನಿನ್ನ ಮೊಗದ ಚೆಲುವಿನ ದರ್ಶನಕ್ಕೆಂದು ಯಮುನಾನದಿ ಈ ಕಡೆಗೆ ಬಂದಿದೆ.

ಅದಕ್ಕೆ ಮುಮ್ತಾಜ್ ಹೀಗೆ ಮುಂದುವರೆಸಿದಳು: 'ರಾಜನು ನೀಡಿದ ಕಷ್ಟದಿಂದಾಗಿ ಅದು ಬಂಡೆಗಳನ್ನು ಅಪ್ಪಳಿಸುತ್ತಿದೆ.'

# ಹಾಫಿಜನ ಕವಿತೆಗಳು

## ಹಾಫಿಜ್

ಮಧುವು ಮತ್ತೇರಿಸುತಲಿದೆ
ಬೀಸುತಿಹ ಗಾಳಿಯಲಿ
ಕುಸುಮಗಂಧವು ತುಂಬಿದೆ
ಆ ಧರ್ಮಾಧಿಕಾರಿ ಎಚ್ಚರಿದ್ದಾನೆ
ತಂತಿಗಳ ಮಿಡಿತಕ್ಕೆ
ಮೈಮರೆತು ಕುಡಿಯದಿರು

ಮಧುಪಾತ್ರೆ ಮನವೊಲಿದ ನಲ್ಲೆ
ಬಳಿಯಿರಲು, ಸೇವಿಸು
ಮಧುವ ಎಚ್ಚರದಲಿ
ನಾಳೆಗಳ ಭರವಸೆ
ಎಂತೋ ಏನೋ ಹೇಗೋ
ಹೇಳುವವರಾರು?

ನೀ ತೊಟ್ಟ ನಿಲುವಂಗಿಯ
ತೋಳಿನೊಳಗೆ ಅವಿತಿರಿಸು
ಮಧುವಿನಾ ಬಟ್ಟಲನು
ಸುರಿವುದು ಇಂದು ರಕ್ತ
ಮಧು ಪಾತ್ರೆಯಿಂದಲಿ
ಸುರಿವ ಕೆಂಪು ಮಧುವಿನಂತೆ!

ಉಟ್ಟ ಉಡುಪಿನ ಮೇಲೆ
ನಿಂತ ಮಧುವಿನಾ ಕಲೆಗಳನು
ಕಂಬನಿಯ ಧಾರೆಯಲಿ
ತೊಳೆದು ಕಳೆಯೋಣ

ಉಪವಾಸ ವ್ರತ ನಿಯಮಗಳ
ಸಮಯವಾಗಿಹುದು ಈಗ

***

ನನ್ನ ಹೃದಯವೇ ಅವನ
ಪ್ರೀತಿಯ ನೆಲೆ
ನನ್ನ ಕಣ್ಣುಗಳೇ ಅವನ
ರೂಪ ಬಿಂಬಿಸುವ ಕನ್ನಡಿ

ಎರಡು ಲೋಕಗಳೆದುರು
ಎಂದಿಗೂ ತಲೆಬಾಗಿದವನಲ್ಲ
ಆದರಿಂದವನ ಕೃಪೆಯ
ಭಾರಕ್ಕೆ ಬಾಗುತ್ತೇನೆ ಭಕ್ತಿಯಲಿ

ನಿನಗೆ ಸ್ವರ್ಗ ವೃಕ್ಷ; ನನಗೆ
ನನ್ನ ಗೆಳೆಯನ ಔನ್ನತ್ಯ
ಪ್ರತಿಯೊಬ್ಬ ವ್ಯಕ್ತಿಯ ಗುರಿಯೂ
ಅವನ ಆಕಾಂಕ್ಷೆಗಳ
ಅವಲಂಬಿಸಿರುತ್ತದೆ

ನಾ ತೊಟ್ಟ ಬಟ್ಟೆಯ ಮೇಲೆ
ಪಾಪದ ಕಲೆಯಿದ್ದರೆ ಅಚ್ಚರಿಯಿಲ್ಲ
ಅವನ ಪರಿಶುದ್ಧತೆಗೆ
ಜಗವೇ ಸಾಕ್ಷಿ ಎಂಬುದನು
ಮರೆಯಬೇಡ

ಅವನ ಮೂರ್ತಿ ನನ್ನ
ಕಣ್ಣ ಗಡಿಗಳ ದಾಟದಿರಲಿ
ಏಕೆಂದರೆ ನನ್ನ ಕಣ್ಣ
ಪಾಪೆಗಳೇ ಅವನ
ವಿಶ್ರಾಂತಿಯ ನೆಲೆಯಾಗಿದೆ

ತೋಟದಲಿ ಅರಳುವ
ಒಂದೊಂದು ಹೂವೂ

ಅವನ ವೈಭವ ಸಂಕೇತ
ಅವನ ಸೌರಭ,
ವರ್ಣಮಯತೆಗೆ
ಅದೊಂದು ಪ್ರತ್ಯಕ್ಷ ನಿದರ್ಶನ

ಪ್ರೇಮದ ಸಾಮ್ರಾಜ್ಯವೋ
ಸಂತಸದ ಅಪಾರ ನಿಧಿಯೋ
ಯಾವುದೇ ಆದರೂ ಅವನ
ಅನುಗ್ರಹದಿಂದ ಪ್ರೀತಿಯಿಂದ
ನನಗೆಲ್ಲವೂ ಲಭ್ಯ

ನನಗೋ ನನ್ನ ಮನಸಿಗೋ
ಏನಾದರಾಗಲಿ – ನನಗೆ ಮಾತ್ರ
ಅವನ ಸುರಕ್ಷೆಯ
ಭರವಸೆಯೇ ಮುಖ್ಯವೆಂಬೆ

ಹಾಫಿಜ ಬಡವನಿರಬಹುದು
ಆದರೆ ಅವನು ಪ್ರೀತಿಸುವವರಿಗೆ
ಅವನೆದೆಯ ತುಂಬಾ
ಪ್ರೀತಿಯ ಅಪಾರ ಸಂಪತ್ತಿದೆ

***

ನನ್ನ ಶತ್ರುವೊಬ್ಬ ಸಿಟ್ಟಿನಿಂದ
ದುಃಖದಲಿ ಕಳೆದ
ಕ್ಷಣವೊಂದಕ್ಕೆ ಸಮನಾಗದು
ಸಮಸ್ತ ಜಗತ್ತು!
ಮಾರಿಬಿಡು ಈ ಚಿಂದಿ ಬಟ್ಟೆಯ
ಒಂದು ಬಟ್ಟಲು ಮಧುವಿಗೆ
ಬೇರೆ ಬೆಲೆಯುಂಟೆ
ಹೇಳಿದ – 'ಬಾಗಿಲಾಚೆಯಿರಲಿ
ನಿನ್ನ ಮುಖ' – ಎಂದು
ಆಚೆ ಇರಬೇಕೆ?
ಬಾಗಿಲ ಮೇಲಿನ ಧೂಳಿಗಿಂತಲೂ
ಕಡೆಯೇ ನನ್ನ ಮುಖ?

ಸುಲ್ತಾನನ ತಾಜ್ ಆಕರ್ಷಕ ನಿಜ
ಆದರಡಗಿದೆ ಅದರಲ್ಲಿ
ಪ್ರಾಣಾಪಾಯದ ಭೀತಿ
ಅದರ ಹಿರಿಮೆ ವೈಭವಗಳು
ನಮ್ಮ ತಲೆಯ ಬೆಲೆಗೆ
ಸರಿಸಾಟಿಯಾಗದು, ತಿಳಿ!

ಲಾಭದಾಸೆಯಲಿ ಕಡಲ
ಪಯಣದ ಅಪಾಯವು
ಕ್ಷುಲ್ಲಕವೆಂದು ತಿಳಿದು
ತಪ್ಪು ಮಾಡಿದೆ
ಭಯಂಕರ ಬಿರುಗಾಳಿಗೆ
ಎದ್ದ ಅಲೆಯೆದುರಲ್ಲಿ
ನೂರು ಮುತ್ತುಗಳ
ಬೆಲೆಯೇನಿದೆ?

ದಿಗ್ವಿಜಯದ ಸಂಭ್ರಮದಲಿ
ನಿನ್ನ ಹಾಡಿ ಕೊಂಡಾಡುವವರ
ನೋಡದಿರಬಹುದಾದರೂ
ಸೈನ್ಯವೊಂದನು ನೋಡಿಕೊಳ್ಳುವ
ಹೊಣೆಯ ಕಷ್ಟವನು
ನೋಡದಿರಲಾಗದು!

ಹಾಫಿಜನಂತೆ ಸಂತೃಪ್ತನಾಗಿರು
ಈ ಕೆಟ್ಟ ಜಗತ್ತನ್ನು ಲಕ್ಷಿಸದಿರು
ಕ್ಷುಲ್ಲಕ ವ್ಯಕ್ತಿಗಳ
ಕಾಳಿನಷ್ಟು ಉಪಕಾರದ ಬೆಲೆ
ರಾಶಿ ಚಿನ್ನದ ಬೆಲೆಗೆ ಸಾಟಿಯಿಲ್ಲ

***

ವಸಂತದ ಬರವಿಗೆ
ಸ್ವಾಗತ ಸುಸ್ವಾಗತ

ಈ ಸಮಯದಲ್ಲಿ
ಮಧುಪಾತ್ರೆಯೊಂದು
ಕೈಲಿದ್ದರೆ ಸುಖವೋ ಸುಖ!

ಸಂಭ್ರಮಿಸು ಸಂತವಿಸು
ಚಿಪ್ಪಿನಲಿ ಮುತ್ತು
ಎಂದೆಂದಿಗೂ ಮೆತ್ತಿಕೊಂಡು
ಉಳಿದಿರುವುದಿಲ್ಲ

ಮಧುಪಾನಕ್ಕಿದು ಸುಸಮಯ
ಅರಳಿನಗುವ ಹೂದೋಟದಲ್ಲಿ
ಮಧುವ ಸೇವಿಸು
ಏಕೆಂದರೆ ಈ ಹೂಗಳು
ವಾರಕ್ಕಿಂತ ಹೆಚ್ಚು ಕಾಲ
ಅರಳಿ ಉಳಿಯುವುದಿಲ್ಲ
ಹರಳು ಕೆಂಪಿನ ಮಧುವ
ತುಂಬಿಕೊಂಡಿರುವ
ಸ್ವರ್ಣ ಪಾತ್ರೆಯನು
ಕಳುಹಿಸು ಚಿನ್ನವಿಲ್ಲದ
ವನ ಎಡೆಗೆ

ಬಾ ನನ್ನ ಮಧುಶಾಲೆಗೆ
ಒಂದು ಬಟ್ಟಲ ಮಧುವ
ಸೇವಿಸು ಸಿಗಲಾರದು
ಇಂಥ ಮಧು ಸ್ವರ್ಗದಲೂ
ನೀ ಬಯಸಿದೆಯಾದರೆ

ನಮ್ಮ ಬಳಗಕೆ ಬರುವೆಯಾದರೆ
ಬಾ ನಿನ್ನೆಲ್ಲ ಪುಸ್ತಕಗಳನೆಸೆ
ಇಲ್ಲಿ ಸಿಗುವ ಪ್ರೀತಿಯ
ನೀತಿ ಪಾಠಗಳು ನಿನಗೆಲ್ಲೂ

ಯಾವ ಲೋಕದಲ್ಲೂ
ಸಿಗಲಾರದು ತಿಳಿದಿಕೋ
ನಾ ಹೇಳುವುದನು ಕೇಳು
ನೀಡು ನಿನ್ನ ಹೃದಯವನು
ನೀನೊಲಿದ ಪ್ರೇಯಸಿಗೆ
ಅವಳ ರೂಪ ಚೆಲವುಗಳನ್ನು
ತೊಟ್ಟ ತೊಡವುಗಳನ್ನು
ಹುಡುಕಬೇಡ

ಆತ್ಮಸಾಕ್ಷಿಯಲಿ ಹೇಳುತ್ತೇನೆ
ನಾನು ಉವೀಸನ ನಿಷ್ಠಾವಂತ
ಸೇವಕನಾಗಿಹೆನು
ಆದರೆ ದುರಾದೃಷ್ಟವೆಂದರೆ
ಆತನಿಗೆ ಈ ನಿಷ್ಠಾವಂತನ
ನೆನಪೇ ಉಳಿಯುವುದಿಲ್ಲ

***

ನಾಚಿ ಕೆಂಪೇರುವ ಮುಖ
ವುಳ್ಳವರೆಲ್ಲ ಪ್ರೇಮೋನ್ಮತ್ತರಲ್ಲ
ಕನ್ನಡಿ ಗೋಪುರಗಳ ಕಟ್ಟಿದವರೆಲ್ಲ
ಪ್ರತಿ ಅಲೆಕ್ಸಾಂಡರ್‌ಗಳಾಗುವುದಿಲ್ಲ

ಕೂಲಿಗಾಗಿ ಭಿಕ್ಷುಕರಂತೆ
ದುಡಿಯದಿರಿ ನೀವೆಲ್ಲ
ಮಾಲಿಕನು ಬಲ್ಲ ನಿಮ್ಮೆಲ್ಲ
ರನು ದುಡಿಸಿಕೊಳ್ಳುವ
ಜಾಣ ಪರಿಯ

ಆ ಸಾಹಸಿಗ ಸ್ವೇಚ್ಛಾಚಾರಿ
ವಿಷಯಲಂಪಟ ತನ್ನ
ಬಡತನವನ್ನೂ
ಬಂಡವಾಳವಾಗಿಸಿಕೊಳ್ಳಬಲ್ಲ
ಜಾಣಗಾರನ ಗುಲಾಮನಾನು

ಈವ್ಳ ಮಗಳು ಯಕ್ಷ
ಕಲೆಗಳನರಿತವಳೆಂಬುದನು
ಮರೆತು ಉನ್ಮತ್ತ
ಹೃದಯದೊಡನಾಟವಾಡಿದೆನು

ನಿನ್ನ ಕಪ್ಪು ಕಲೆಗಳು ನನ್ನ
ಕಣ್ಣಿ ಕಪ್ಪು ಪಾಪೆಗಳಿಗೆ
ಕಾಂತಿ ನೀಡಿವೆ
ಕಪ್ಪು ಹರಳಿನ ಬೆಲೆಯ
ಹರಳು ವ್ಯಾಪಾರಿಯೇ
ಬಲ್ಲನಂತೆ ಬಲ್ಲೆ
ಕಪ್ಪು ಕಲೆಗಳ ಬೆಲೆಯ

ರೂಪ ಎತ್ತರ ಗಾತ್ರಗಳಿಂದ
ಸೌಂದರ್ಯರಾಣಿ ಎನಿಸಿಕೊಂಡವಳು
ನ್ಯಾಯ ನೀತಿಗಳನ್ನೂ
ಬಲ್ಲವಳೇ ಆದರೆ ವಿಶ್ವ
ದಿಗ್ವಿಜಯಕ್ಕೂ ಸಜ್ಜಾಗಬಲ್ಲಳು

ಇರಾನಿ ಭಾಷೆ ಕಾವ್ಯ ಸೌಂದರ್ಯ
ಗಳ ಅರಿತವನು ಮಾತ್ರವೇ
ಹಾಫಿಜನ ಮೋಹಕ ಗೀತೆಗಳ
ಮೆಚ್ಚಿಕೊಂಡಾಡಬಲ್ಲರು

***

ದುಃಖದ ದಿನಗಳು ಮುಗಿದಿವೆ
ಎಂಬ ಸಂತಸದ ಸುದ್ದಿಯ
ಆಗಮನವಾಗಿದೆ
ಭೂತ, ವರ್ತಮಾನ ಭವಿಷ್ಯ
ಗಳಲ್ಲಿ ಇದ್ದುದು; ಇರುವುದು
ಇರಲಿರುವುದು – ಏನೆಲ್ಲವೂ
ಕೂಡಾ ಶಾಶ್ವತವಾಗಿ ಇರಲಾರದು
ಎಂಬುದೂ ಕೂಡಾ ಸತ್ಯವೇ!

ಗೆಳೆಯನ ದೃಷ್ಟಿಯಲ್ಲಿ
ಕೆಟ್ಟವನೆಂದಾದರೆ
ಶತ್ರುವಿಗೂ ಕೆಟ್ಟವನೇ
ಅವನ ಗೌರವಕ್ಕೂ
ವಂಚಿತನೇ
ಮಧುವ ಬಟ್ಟಲಿಗೆ ಸುರಿವ
ದಾಸಿ ಹೆಣ್ಣುಗಳ
ಕಣ್ಣ ನೋಟ ಹಳೇ ಕಠಾರಿಗಳಾಗಿ
ಬರುವಾಗಲೇ ಬರುವವರ
ಇರಿದು ಕೊಲ್ಲುತ್ತಿದ್ದರೆ
ಭಕ್ತರು ಒಳನುಗ್ಗಿ ಗರ್ಭ
ಗುಡಿಯ ತಲುಪುವುದಾದರೂ ಹೇಗೆ?

ಬದುಕಿನ ಪಾಪ ಪುಣ್ಯಗಳ
ಲೆಕ್ಕಾಚಾರದ ಪುಟಗಳನ್ನು
ಹರಿದು ಬಿಸಾಡಿದರೆ
ಅವನು ಪುಣ್ಯಕ್ಕೆ ಕೃತಜ್ಞತೆ
ಹೇಳುವುದು ಹೇಗೆ?
ಆದ ಅನ್ಯಾಯಕ್ಕೆ ದೂರು
ನೀಡಿ ನ್ಯಾಯ ಪಡೆಯುವುದೆಂತು?

ಓ ದೀಪವೇ ಪತಂಗದ
ಬಯಕೆಗಳ ಪೂರೈಸು
ನಾಳೆ ಬೆಳಗಾದರೆ
ಮುಗಿಯಿತು ನಿಮ್ಮ
ಬಂಧ ಅನುಬಂಧ

ಎಲೈ ಸಿರಿವಂತನೇ
ದೀನನಿಗೆ ದಯೆ ತೋರು
ನೀ ಕೂಡಿಟ್ಟ ಹಣ ಹೊನ್ನು
ಯಾವುದೂ ಶಾಶ್ವತ
ವಾಗಿ ಉಳಿಯಲಾರದು

ನೋಡು ಈ ನೀಲಾಗಸವ
ಬರೆದಿದೆ ಅಲ್ಲಿ, ಸ್ವರ್ಣಾಕ್ಷರಗಳಲ್ಲಿ
'ಚೆಲುವು, ಅಪಾರ ಲುಲವು
ಚೆಲುವಿದೊಂದೇ ಚಿರಂತನ'!

***

ಮಧುಶಾಲೆಯ ಕದಗಳು
ಮತ್ತೆ
ತೆರೆಯುವುದೇನು?
ಮುನಿಸುಕಿನಿಸುಗಳ
ಗೋಜಲು ಕರಗುವುದೇನು?

ಪವಿತ್ರನಾದ ಪ್ರತಿಷ್ಠಿತನಾದ
ರಾಜನಿಗಾಗಿ ಮಧುಶಾಲೆಯ
ಕದಗಳು ಮುಚ್ಚಿದ್ದರೆ
ಹತಾಶನಾಗಬೇಡ
ಸರ್ವಸಮರ್ಥ ದೇವರಿಗಾಗಿ
ಮತ್ತೊಮ್ಮೆ ಈ ಮುಚ್ಚಿದ್ದ
ಕದಗಳು ತೆರೆದುಕೊಳ್ಳುವುದು

ಮದೋನ್ಮತ್ತ ಮಧು ಪ್ರೇಮಿಗಳ
ಅಂತರಾತ್ಮದ ಪ್ರಾರ್ಥನೆಯ
ಬೀಗದ ಕೈಗಳಿಂದ ಜಡಿದ
ಬೀಗಗಳು
ಕಳಚಿ ಕದಗಳು
ತೆರೆದು ನಿಲ್ಲುತ್ತವೆ

ಶೋಕ ಸಂಕೇತವೆಂಬಂತೆ
ಮದ್ಯದ (ಶುದ್ಧ) ಸಾವಿಗಾಗಿ
ಹಾರ್ಪ್‌ವಾದ್ಯದ ತಂತಿಗಳ
ಕಿತ್ತೊಗೆ; ಆಗಲಾದರೂ
ಪಾನವಿಲಾಸಿಗಳು

ಹರಿಸಿಯಾರು ರಕ್ತ ಕಂಬನಿಗಳ
ಧಾರೆಧಾರೆಯಾಗಿ
ಮಧುಶಾಲೆಯ ಬಾಗಿಲು
ಮುಚ್ಚಿದೆ; ಹಾಗೆಂದು ಅವರ
ಆಷಾಢಭೂತಿತನದ
ಬಾಗಿಲುಗಳು ತೆರೆಯದಿರಲಿ

ನೋಡುತ್ತಿರು ಹಾಫಿಜ್
ನಾಳೆಯೊಳಗಾಗಿ ಆ
ಸರತುಷ್ಟ್ರವಾದಿಗಳು ಹೇಗೆ
ನಿನ್ನ ವಿರುದ್ಧವೇ ನಿರ್ಬಂಧಗಳ
ಸರಪಳಿಯ ಹೆಣೆದು
ಬಿಗಿಯುವರು ನಿನ್ನ
ವಿದ್ರೋಹವೆಸಗಿ

***

ಸುಪ್ರಭಾತದ ಗಂಧ ಗಾಳಿಯ
ಸೇವಿಸಿದವರು
ಆತ್ಮೀಯ ಗೆಳೆಯರಿಂದ
ಬಂದ ಸಂದೇಶಗಳ ಸುಖವ
ಸವಿದಂತೆ ಸವಿದರು
ಓ ಸೌಂದರ್ಯ ರಾಣಿಯೇ
ಈ ಭಿಕ್ಷುಕನೆಡೆಗೆ ನಿನ್ನ
ನೋಟವೊಂದನ್ನು ಬೀರು
ಈ ಕಿವಿಗಳು ದಣಿದಿವೆ
ರಾಜ, ಭಿಕ್ಷುಕರ ಕತೆಗಳನು
ಸಾಕಷ್ಟು ಕೇಳಿ ಕೇಳಿ

ಕ್ರೈಸ್ತ ಮತಗಳ ದೊಗಲೆ
ಅಂಗಿಗಳ ತೊಟ್ಟ ಪಾದ್ರಿಗಳ
ಆಷಾಢ ಭೂತಿತನದಿಂದ
ಬಾಯಿ ಕೆಟ್ಟಿದೆ

ಒಂದಿಷ್ಟು ಮಧುವ ಕುಡಿದು
ಮತ್ತೆ ಪಡೆಯಬೇಕಿದೆ
ನನ್ನ ಬಾಯಿ ರುಚಿಯ
ದೇವರ ರಹಸ್ಯ ದೈವವಾದಿಗಳು
ಯಾರಿಗೂ ಉಸಿರದಿದ್ದರೂ
ಮಧುಶಾಲೆಯ ಮಾಲಿಕನಿಗೆ
ತಿಳಿಯದಿದ್ದಾದರೂ ಹೇಗೆಂಬುದೇ
ಅಚ್ಚರಿ!!

ಓ ದೇವರೇ ನನಗೊಬ್ಬ
ನಂಬಿಕಸ್ಥನ ತೋರಲಾರೆಯಾ!
ನಾನು ಕಂಡದ್ದು ಕೇಳಿದ್ದು
ಎಲ್ಲವನೂ ಅವನಲ್ಲಿ
ಹಂಚಿಕೊಳ್ಳಬೇಕೆಂದಿದ್ದೇನೆ

ಓ ನಂಬಿಕಸ್ಥ ಹೃದಯವೇ
ನಿನ್ನಲಿ ಸಹಾನುಭೂತಿ
ತಳೆದವನೇ ವಿರುದ್ಧವಾಗಿ
ಅಪನಂಬಿಕೆ, ಅವಿಶ್ವಾಸದ
ಮಾತುಗಳನಾಡಬಾರದಿತ್ತು!
ಅವಳಿರುವ ಬೀದಿಯಲ್ಲಿ
ಓಡಾಡಲು ಸಾಧ್ಯವಿಲ್ಲವೆಂದರೂ
ಚಿಂತೆಯಿಲ್ಲ ನನಗೆ
ಜಗವೆಂಬ ತೋಟದಲಿ
ಪ್ರಾಮಾಣಿಕತೆಯ
ಪರಿಮಳವ ಆಘ್ರಾಣಿಸುವ
ಅವಕಾಶ ಎಂದೆಂದಿಗೂ
ಗಳಿಸಿಕೊಂಡವನಿಗೆ
ಸಂತರ ಸೋಗಿನಲ್ಲಿ
ಸೇವಿಸುವುದು ಇಂದೇನು
ಹೊಸತಲ್ಲ ಹೆಂಡದಂಗಡಿಯ

ಮಾಲಿಕ ಇದೇ ನಮ್ಮ
ಬದುಕಿನ ರೀತಿಯೆಂಬುದನು
ನೂರು ಬಾರಿ ಕೇಳಿ ಬಲ್ಲ
ಓ ಹಾಫಿಜ ಒಳ್ಳೆಯದನ್ನು
ಉಪದೇಶಿಸು
ಇದೇ ನನ್ನ ಕರ್ತವ್ಯ
ಕೇಳಿದ್ದನ್ನು ಕೇಳದುದನ್ನು
ತಿಳಿಯಲು ಪ್ರಯತ್ನಿಸುವರೆಷ್ಟು
ಎಂಬುದನು ತಿಳಿ

***

ನಲ್ಲೆಯ ಕೈಬಿಡುವುದಾಗಲಿ
ಮಧುವನ್ನು ಬಿಡುವುದಾಗಲಿ
ನನ್ನಿಂದ ಸಾಧ್ಯವಿಲ್ಲ
ಆ ಧರ್ಮದೇವತೆಯೇ ಬಲ್ಲ
ನಾನು ನೀತಿಗೆಟ್ಟವನಲ್ಲ

ಪಶ್ಚಾತ್ತಾಪ ಪಡುವುದನ್ನು
ಟೀಕಿಸುವ ನಾನು ಈ ವಸಂತದಲಿ
ಮಧುವ ಸೇವಿಸಿಹೆನೆಂದು
ಪಶ್ಚಾತ್ತಾಪ ಪಡುವುದಾದರೆ
ಹುಚ್ಚನೇ ಸರಿ!
ಪ್ರೇಮವೆಂಬುದು ಮುತ್ತು
ನಾನೊಬ್ಬ ಮುಳುಕ
ಹೆಂಡದಂಗಡಿಯೇ ಕಡಲು
ತಲೆ ಕೆಳಗಾಗಿ ಆಳದವರೆಗೆ
ಮುಳುಗಿರಲು
ತಲೆಯೆತ್ತಿ ತೇಲುವುದಾದರೂ ಹೇಗೆ?
ಟ್ಯುಲಿಪ್ ಬಟ್ಟಲಿಂದ
ಸ್ವಮೋಹದ ಮಧುವ
ಸೇವಿಸಿ ಮತ್ತೇರಿ
ಪ್ರಲೋಭಿತನಾಗಿ

ಕಾನೂನು ಮೀರಿದವನು
ಎಷ್ಟೊಂದು ಆರೋಪಗಳ
ಎದುರಿಸಬೇಕಿದೆ ನನಗೆ
ಓ ದೇವರೇ ನಾನು ಯಾವ
ನ್ಯಾಯವಾದಿಯ ನೇಮಿಸಲಿ?

ನಗರದ ಶಾಂತಿ ಕದಡುವ
ಸವಾರನೇ ಸ್ವಲ್ಪ ನಿನ್ನ
ಲಗಾಮನ್ನು ತಡೆ ಹಿಡಿ
ಹಾದಿ ಬೀದಿಗಳನ್ನು ನನ್ನ
ಕಂಬನಿಯ ಮುತ್ತುಗಳಿಂದ
ಮೊಗದ ಪಾಂಡುವರ್ಣದ
ಸ್ವರ್ಣಕಾಂತಿಯಿಂದ ಸಿಂಗರಿಸಬೇಕಿದೆ

ಕಂಬನಿಯ ಮುತ್ತು ರತ್ನಗಳ
ರಾಶಿ ಸಂಪದಕೆ ನಾ ಒಡೆಯನಾಗಿರಲು
ಕೈ ಚಾಚಿ ನಾನೇಕೆ
ಕುಬೇರನ ಬೇಡಲಿ
ನನ್ನ ಮುಂದೆಯೇ ನನ್ನ
ಸ್ವರ್ಗ ಕುಳಿತಿರುವಾಗ
ನಾಳಿನ ಸ್ವರ್ಗದ ಕನಸು
ನನಗೇಕೆ? ನಾ ನಂಬಲೇಕೆ?
ಅವಳಿಗೆ ಅವಳ ಪ್ರೇಮಿಗಳು
ಬೆಂಕಿಯಲಿ ಬೇಯುವುದು
ಸಂತಸವ ನೀಡುವುದಾದರೆ
ಸ್ವರ್ಗದ ತಿಳಿ ನೀರಿನತ್ತ
ಆಸೆ ಕಂಗಳ ನೋಟ ಬೀರುವ
ಅಪರಾಧವನ್ನೆಸಗಲಾರೆ

ಹೋದಿರುಳು ನನ್ನ ಸೆಳೆಯಲು
ಎಷ್ಟೊಂದು ಸಂಕೇತಗಳ ಕಳುಹಿದಳು

ಆದರೆ ತಂತ್ರಗಳನು ಅರ್ಥ ಮಾಡಿ
ಕೊಳ್ಳಲಾಗದಷ್ಟು ಮೂರ್ಖನಲ್ಲ
***

ನನ್ನ ಗೆಳೆಯನಿಂದಲೇ
ನನಗೆ ನೋವು: ನೆಮ್ಮದಿಗಳು
ಅದಕೆಂದೇ ಅವನಿಗೆ
ನನ್ನಾತ್ಮ ಹೃದಯಗಳನೆಲ್ಲ
ಅರ್ಪಿಸಿಬಿಟ್ಟಿದ್ದೇನೆ

ಸೌಂದರ್ಯ ಮೀಮಾಂಸಕರು
ಸೌಂದರ್ಯದಲ್ಲಿ ಯಾವುದು
ಚೆನ್ನ ಚೆನ್ನವಲ್ಲ
ಗುರುತಿಸಿ ಹೇಳುತ್ತಾರೆ
ಆದರೆ ನನ್ನ ಗೆಳೆಯನಲ್ಲಿ
ಅದು ಚೆನ್ನವೋ ಇದು ಚೆನ್ನವೋ
ಎಂಬುದನು ಅರಸಿ ಹೋಗಲಾರೆ

ಕೊಟ್ಟ ಮಾತು ಮೀರಿದವಳು
ಪ್ರತಿಜ್ಞೆಯನ್ನೇ ಮರೆತವಳು
ಆದರೂ ಅವಳು ನನ್ನ
ನೆನಪಲ್ಲಿ ಉಳಿದಿರಲಿ
ಅದೃಷ್ಟದ ಬೆನ್ನಲ್ಲಿ
ಸಮಾಗಮದ ಸುಂದರ
ರಾತ್ರಿಗಳು ಬಂದಿಹವು
ವಿರಹದ ಘೋರ ಕತ್ತಲ
ದಿನಗಳೆಲ್ಲಾ ಮುಗಿದಿವೆ

ಆ ಧರ್ಮದೇವತೆ ಬಲ್ಲ
ಈ 'ಹಾಫಿಜ' ಒಬ್ಬ ಪ್ರೇಮಿಯೆಂದು
ಹಾಗೆಯೇ ಸಾಲೋಮನ್
ಸಾಮ್ರಾಜ್ಯದ ಆಸಫನೂ ಇದ ಬಲ್ಲ

ಮದ್ಯದಂಗಡಿ ಕದಗಳು ತೆರೆದಿವೆ
ಗುಡಿಸಿ ಸಾರಿಸಿ ಸ್ವಚ್ಛವಾಗಿರಿಸಿದೆ
ಅಂಗಡಿಯ ಮಾಲಿಕನೂ
ಬರುವ ಎಲ್ಲಾ ಗಿರಾಕಿಗಳನ್ನೂ
ಹಿರಿಕಿರಿಯರೆನ್ನದೆ
ಕುಳಿತೆಡೆಯೆಂದಲೇ ಸ್ವಾಗತಿಹನು

ಮದೋನ್ಮತ್ತ ಪಾನವಿಲಾಸಿಗಳು
ಅವನ ಸೇವೆಗಾಗಿ ಅವನ
ಬಳಸಿನಿಂದಿಹರು
ಅವರು ಧರಿಸಿದ ಪೇಟಗಳು
ಬಿಚ್ಚಿಕೊಂಡು ಕೊಡೆಯಾಗಿ
ದಳದಳಿಸಿವೆ

ಮಧುವ ಸೋಸುವ ಅವನು
ಹಿಡಿದ ಮಧುಪಾತ್ರೆಯ
ಕಾಂತಿಯೆದುರು ಚಂದ್ರನೇ
ಮಂಕಾಗಿ ತೋರುತಿಹನು
ಮಧುವ ತಂದೀವ ಸೇವಕರ
ಕೆನ್ನೆಗಳೋ! ಸೂರ್ಯನ
ಅರುಣಕಾಂತಿಯನೇ ಕದ್ದಿಹವು
ವಧುವಿನ ಶೃಂಗಾರ ಕೋಣೆಯಲಿ
ಅದೃಷ್ಟವೇ ಅವಳ ಹೆರಳ
ಹೆಣೆದು ಇರಿಸಿದ್ದಾಳೆ ಕಲೆಯಾಗಿ
ಅವಳ ಕೆನ್ನೆಯ ಗುಲಾಬಿ
ದಳಗಳೆಲ್ಲಾ ಅತ್ತರಲ್ಲಿ ತೊಯ್ದಿವೆ

ಅವಳ ಹಿತರಕ್ಷಣೆಯ ದೇವತೆ
ಸಂತಸದ ಬಟ್ಟಲ ಹಿಡಿದಿದ್ದಾಳೆ
ಯಕ್ಷ ಕಿನ್ನರಿ ನಾಚಿ
ಕೆಂಪಾದ ಕೆನ್ನೆಗಳ ಮೇಲೆ
ಗುಲಾಬಿ ಗಂಧವನ್ನೇ ಸುರಿದಿದ್ದಾಳೆ

ಪ್ರೇಯಸಿಯ ಸಿಟ್ಟು ಸೆಡವಿನ
ಗದ್ದಲದ ಸವಿಯೆದರು
ಸಕ್ಕರೆಯ ಸವಿಯು ಸಾಟಿಯಲ್ಲ
ಪುಟ್ಟ ಹೂಗಳು ದಳ ಕಳಚುತ್ತಿವೆ
ಹಾಡುವ ಹಕ್ಕಿ ಅನಂತರಾಗಗಳ ಹಾಡುತ್ತಿದೆ

ಕ್ಷಮಿಸು ಅದೃಷ್ಟ ಇನ್ನು
ನಿನ್ನ ಪಾಲಿಗಿಲ್ಲವಾಗಿದೆ
ಅದು ಒಲಿದು ನಿನ್ನ ಬಾಗಿಲಿಗೆ
ಬಂದಾಗ ಮುಳುಗಿದ್ದೆ
ಮೈಮರೆತು ನಿದ್ದೆಗಡಲಿನಾಳದಲ್ಲಿ

ಹಾಫಿಜ್ ಬಾ ಈ ಹೆಂಡದಂಗಡಿಗೆ
ಪ್ರಾರ್ಥನೆಯ ರೀತಿಗಳನು
ಅಲ್ಲಿ ಕಲಿಸುತ್ತೇನೆ ನಿನಗೆ
ನಾ ಕಲಿಸುವ ಆ ಪ್ರಾರ್ಥನೆಗಳು
ಎಂದೂ ವ್ಯರ್ಥವಾದುದನು ಅರಿಯೆ

ಹೋದಿರುಳು ಹೋಗಿದ್ದೆ
ಹೆಂಡದ ಗಡಂಗಿಗೆ
ನಾನುಟ್ಟ ಸಂತವೇಷದ
ನಿಲುವಂಗಿ ಪ್ರಾರ್ಥನೆಯ
ಕಂಬಳಿ ಎಲ್ಲವೂ
ಹೆಂಡಮಯವಾಗಿ ತೊಯ್ದಿದ್ದವು

"ಅಯ್ಯಾ ನಿದ್ದೆಗಣ್ಣಿನ
ಯಾತ್ರಿಕನೆ ಸ್ವಲ್ಪ ಜಾಗರೂಕತೆಯಿಂದಿರು"
– ಎಂದ ಸೇವಕನ ನುಡಿಗೆ
ನಾಚಿ ನೀರಾದೆ; ಮೌನವಾದೆ

ಬರುವಾಗ ಮೈ ತೊಳೆದು
ಶುಚಿಯಾಗಿ ಬಾ ಒಳಗೆ
ಇಲ್ಲವಾದಲ್ಲಿ ಈ ಹೆಂಡದಂಗಡಿ
ನಿನ್ನಿಂದ ಅಪವಿತ್ರವಾದೀತು

ಎಷ್ಟು ದಿನ ಹೀಗೆ ಈ ಲೋಕದ
ಚೆಲುವೆಯರ ತುಟಿಯ
ಮುತ್ತುಗಳಿಗೆ ಹಂಬಲಿಸುತ್ತ
ನಿನ್ನ ಆತ್ಮದ ಕನ್ನೆತನದ ಪವಿತ್ರತೆಯನ್ನು
ಕಳಂಕಿತವಾಗಿಸುವೆ

ನಿನ್ನ ಬದುಕಿನ ಸಂಜೆಗಳನ್ನು
ಪರಿಶುದ್ಧವಾಗಿ ಪವಿತ್ರವಾಗಿರಿಸು
ಮುಪ್ಪಿನ ಈ ವಸ್ತ್ರಗಳನ್ನು
ಯೌವ್ವನದ ಹುಚ್ಚಾಟಗಳಿಂದ
ಹಾಳುಗೆಡವದಿರು
ಸ್ವಾರ್ಥದ ಪಾತಾಳದಿಂದೆದ್ದು ಬಾ
ಶುದ್ಧ ಸಾತ್ವಿಕ ಬದುಕನ್ನು ಬಾಳು
ತಿಳಿ ನೀರು ತೊಳೆದು ಶುಚಿ
ಮಾಡಬಲ್ಲುದೆ ಹೊರತು
ರಾಡಿ ನೀರಲ್ಲ
ನಾನೆಂದೆ – 'ಜಗದಾತ್ಮವೇ
ಬಿಡು; ವಸಂತದ ಈ ಸುಂದರ
ದಿನಗಳಲ್ಲಿ ಬದುಕೆಂಬ
ಪುಸ್ತಕಕೆ ತಾಜಾ ಮಧುವಿನಿಂದ
ಒಂದಿಷ್ಟು ಕಲೆ ಅಂಟಿದರೆ
ನಷ್ಟವೆನಿಸುವುದಿಲ್ಲ ನನಗೆ

ಪ್ರೀತಿಯ ಹಾದಿ ಬಲ್ಲವರು
ಎಷ್ಟೇ ಆಳದಲಿ ಮುಳುಗಿದರೂ
ಪಾಚಿಯಂಟಿ ವ್ಯಕ್ತಿತ್ವ ಕೆಡುವುದಿಲ್ಲ

ಅವನೆಂದ ಹಾಫಿಜ್ ನಿನ್ನ ಜಾಣ
ಮೋಸಗಳಿಂದ ಮೋಹಕ
ಸೂಕ್ಷ್ಮ ಮಾತುಗಳಿಂದ
ನಿನ್ನ ಗೆಳೆಯರನ್ನು ವಂಚಿಸಬೇಡ
'ಆಹಾ ವಿನಯದ ಈ ಉತ್ತರದಲ್ಲಿ
ಕೋಪದ ಎಷ್ಟು ರೀತಿಗಳು ಬೆರೆತಿವೆ?
(ದೈವಭಕ್ತಿ ಮತ್ತು ಪರಿಶುದ್ಧತೆ ಕುರಿತು)

ಸೃಷ್ಟಿಕರ್ತನೇ ನನ್ನ ಪಾಪಗಳನ್ನು
ಅಪರಾಧಗಳನ್ನು ಶಿಕ್ಷಾರ್ಹವಲ್ಲ –
– ಎಂದು ತೀರ್ಮಾನಿಸಿದ್ದಾರೆ
ಕೃಪೆ ಮತ್ತು ಅನುಗ್ರಹಗಳನ್ನು
ಪ್ರದಾನ ಮಾಡಲು ಹೇಗೆ ಸಾಧ್ಯ?

ದೈವಭಕ್ತಿ ಸಾಮ್ರಾಜ್ಯದಿಂದ
ಬಹಿಷ್ಕೃತನಾದವನು ನಾನೊಬ್ಬನೇ ಅಲ್ಲ
ನನ್ನ ವಂಶದ ಪೂರ್ವಜರೆಲ್ಲರೂ
ಹೀಗೆಯೇ ಮಾಡಿ ಸ್ವರ್ಗ
ವಂಚಿತರಾಗಿದ್ದರು
ಪವಿತ್ರತೆ ಪರಿಶುದ್ಧತೆ ಇಲ್ಲವಾದಲ್ಲಿ
ಕಾಬಾ ಮತ್ತು ಗುಡಿ ಒಂದೇ;
ಪವಿತ್ರತೆ ಇಲ್ಲವಾದೆಡೆಯಲ್ಲಿ
ಸದ್ಗುಣಗಳಿಗೆ ಜಾಗವೇ ಇರುವುದಿಲ್ಲ

ಓ ನನ್ನ ಹೃದಯವೇ ಆ
ಧರ್ಮದೇವತೆಯಿಂದ ಪಾನ
ಸೇವನೆಯ ಕಲೆಯನ್ನು ಕಲಿತುಕೋ;
ಕಂಠಪೂರ್ತಿ ಕುಡಿದಿದ್ದರೂ
ಅವನನ್ನು ಯಾರೂ ಕುಡಿದವನೆಂದು
ಸಂದೇಹಿಸಲು ಸಾಧ್ಯವಿದೆಯೇ!!

ಧರ್ಮೋಪದೇಶ ಮಾಡುವವರೆಲ್ಲ
ಧರ್ಮಪೀಠದ ಮೇಲಿದ್ದಾಗ
ಕಾಣಿಸುವುದೇ ಬೇರೆ!
ಅಂತರಾಳದಲಿ ಅವರ ರೀತಿಯೇ ಬೇರೆ!!

ಮಾನ ಅವಮಾನಗಳ ಕುರಿತು
ಮಾತಾಡದಿರು; ನಮಗೆ ಮಾನವೇ
ಅವಮಾನ – ಅವಮಾನವೇ ಮಾನ
ನಿನ್ನ ಅಭಿವೃದ್ಧಿಗೆ ತಂತ್ರವೊಂದನು
ತಿಳಿಸಿಕೊಡುವೆನು ಬಾ;
ಕೇಡಿಗರ ಸಹವಾಸ ಬೇಡವೇ ಬೇಡ

## (ಉನ್ನತ ವಿಚಾರಗಳ ಕುರಿತು)

ನಿನ್ನಂಥ ಶ್ರೇಷ್ಠ ಅಪರೂಪದವನು
ಫೀನಿಕ್ಸ್ ಪ್ರೀತಿಯ ಎಲುಬುಗಳನ್ನು
ಎಲ್ಲಿಯವರೆಗೆ ನಂಬಿ ಬದುಕ ಬಲ್ಲೆ?
ಅದರ ನೆರಳ ಕೃಪೆಯಿಂದ
ಅಯೋಗ್ಯರೆಲ್ಲರೂ ರಾಜಯೋಗದಲಿ
ಮೆರೆದು ಬಾಳಿಹರಲ್ಲ!
ಕಪ್ಪುಕಲ್ಲು ಎಷ್ಟೇ ಪ್ರಯತ್ನಿಸಿ
ಪ್ರಾಣ ತೆತ್ತರೂ ರತ್ನವಾಗುವುದಿಲ್ಲ
ಹೀನ ಜಾತರು ಏನೇ ಮಾಡಿದರೂ
ಶ್ರೇಷ್ಠತೆಯು ಸಾಧ್ಯವಾಗುವುದಿಲ್ಲ

ಬದುಕಬೇಕು ಹೇಗೆಂದರೆ
ನಾವಿಲ್ಲದಾಗಲೂ ನಾವು
ಜೀವಂತವಿದ್ದೇವೆಂಬ ನಂಬುಗೆಗೆ
ದಾರಿ ಮಾಡುವಂತೆ!

(ಪ್ರೇಮ, ಪ್ರೇಮಿ, ನಲ್ಲೆ – ಕುರಿತು)

ನೀನು ರಕ್ಷಿಸಲು ಬಯಸುವ
ಸ್ಮಾರಕಗಳೂ ಶಾಶ್ವತವಲ್ಲ
ಆದರೆ ಪ್ರೀತಿ ಪ್ರೇಮ ಸ್ಮಾರಕಗಳಿಗೆ
ಸಾವೆಂಬುದೇ ಇಲ್ಲ

ನನ್ನ ಶಬ್ದಗಳೆಲ್ಲ ನನ್ನದೆಯ
ಬೆಂಕಿಯೆಷ್ಟೆಂದು ತೋರಿರಲು
ನನ್ನ ಆ ಅವಸ್ಥೆಗೆ ಯಾವ
ಹೆಸರಿಟ್ಟು ಕರೆಯಲಿ?

ಬನ್ನಿ ನನ್ನ ಕೆಲ ಮಾತುಗಳಿಂದಲೇ
ಪ್ರೇಮಿಗಳ ಸ್ಥಿತಿಯೇನೆಂದು
ತಿಳಿಯಪಡಿಸುತ್ತೇನೆ
ಹಾಗೆಯೇ ಅದರ ಮಹತ್ವವನ್ನು
ತೋರಿಸಿ ಕೊಡುತ್ತೇನೆ
ಹೃದಯವನು ದೂರವಿಡಲು
ನೆಮ್ಮದಿಯು ಸಿಗುವುದೆಂದು
ದೂರವಿಟ್ಟರೂ ಹೃದಯ
ಬೇಯುತಿದೆ; ಅಶಾಂತವಾಗಿದೆ
"ಬೇಡವೇನು ಅವಳ ಕೆಂಪಿನ
ತುಟಿಯ ಚುಂಬನ?" – ಕೇಳಿದ
ಆದರೆ ನನಗೋ ಚುಂಬನದ
ಬಯಕೆಯೇ ಕೊಲ್ಲುವಂತಾಗಿದೆ
ಏನುಮಾಡಲಿ? ನನಗೆಲ್ಲಿದೆ ಅಧಿಕಾರ?

ಕಹಿಯಾದ ಆ ಮಧುವು
ನನ್ನೊಳಗಿನ ಬಯಕೆಗಳ
ಕೊಲ್ಲಬಹುದಷ್ಟೆ! ನನ್ನ
ಬದುಕಿನ ಆಧಾರವನ್ನೇ ಅಲುಗಾಡಿಸಿ

ನಾಶ ಮಾಡಬಲ್ಲುದೇ!
ಮಧುಪಾತ್ರೆ ಹಿಡಿದ ಹೆಣ್ಣೇ
ಬಾ ನಿನ್ನ ತುಟಿಗಳ ನನ್ನ
ತುಟಿಗಳ ಮೇಲಿರಿಸು
ನನ್ನ ಆತ್ಮ ಮಧುವನ್ನು
ಒಡಲಿನಿಂದ ಹೀರಿಬಿಡು

ಹೃದಯವೇ ಪ್ರೀತಿ ಮಾಡಲು
ಛಲ, ಸಹನೆಗಳು ಬೇಕಿವೆ
ನೋವಿದ್ದಲ್ಲಿ ಇರಿಸಿಕೋ
ದೋಷವಿದ್ದಲ್ಲಿ ತೊರೆದು ಬಿಡು

ಒಂದೇ ಒಂದು ಮುತ್ತಿಗೆ
ಪ್ರಾಣವನ್ನೇ ಬೆಲೆಯಾಗಿ ಬೇಡುತ್ತಾರೆ
ಅಬ್ಬ! ಈ ನಲ್ಲೆಯರ
ನಲ್ಮೆಯ ಸವಿಯೋ ಸವಿಯ
ಬಣ್ಣಿಸಲು ಬಲ್ಲೆನೆಂತು!

ಅಚ್ಚರಿಯೋ ಅಚ್ಚರಿ!
ಎಷ್ಟೋ ಸಲ ಕಂಬನಿಯಲ್ಲಿ
ಕರಗಿಸಿ ಅಳಿಸಿ ಬಿಡಬೇಕೆಂದಿದ್ದೆ
ಆದರೆ ಇಂದಿಗೂ ಅವಳ
ಆ ಮೂರ್ತಿ ಕುಳಿತಿದೆ ನನ್ನ
ಕಣ್ಣಲ್ಲಿ ಜೀವಂತವಾಗಿ!

ನಾ ಹರಿಸಿದ ನಿರಂತರ
ಕಂಬನಿಯ ಧಾರೆಗಳ ಕಂಡವರು
ಕೇಳಿದರು ತಡೆದು ನನ್ನ –
ಈ ಹೊಸ ನದಿಗಳು ಯಾವುವು?
ಅವುಗಳ ಹೆಸರೇನು?' ಎಂದು!

# ಅನುಬಂಧ ೧

ಜನವರಿ ೮೨ರ ಮೊದಲವಾರದಲ್ಲಿ ಶ್ರೀಮತಿ ವಿಜಯಲಕ್ಷ್ಮಿ (ವಿಜಯಾ ಸುಬ್ಬರಾಜ್) ತಮ್ಮ ಮೊಟ್ಟ ಮೊದಲ ಕವನ ಸಂಕಲನದ ಅಚ್ಚಾದ ಪದ್ಯಗಳನ್ನು ನಮ್ಮ ಮನೆಗೆ ತಲುಪಿಸಿ 'ತ್ರಿಶಂಕು' ಕೃತಿಗೆ ಒಂದು ಮುನ್ನುಡಿ ಬರೆಯಲು ಸೂಚಿಸಿ ಹೋಗಿದ್ದರು. ನಾನು ಊರಲ್ಲಿರಲಿಲ್ಲ. ಅಂದಿನಿಂದ ಇಂದಿನವರೆಗೆ ನಾನು ಒಂದೆಡೆ ಸರಿಯಾಗಿ ನೆಲೆ ನಿಲ್ಲದೆ ನಾನಂತೂ ನನ್ನ ಪ್ರವಾಸದ ನಡುವೆಯೂ ಮತ್ತೆ ಮತ್ತೆ ಈ ಕವಿತೆಗಳನ್ನು ಓದಿ ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ್ದೇನೆ.

ಇಂದು ಕವಿತೆಗಳನ್ನು ಬರೆಯಲು ಕಬ್ಬಿಗಿತಿಯರಿಗೆ ಬರವೇನೂ ಇಲ್ಲ... ಆದರೆ ಸಾರ್ಥಕ ಕವನಗಳನ್ನು ಬರೆದವರು ಮಾತ್ರ ಎಲ್ಲೋ ಕೆಲವರು. ಆದರೆ ಗದ್ಯವನ್ನು ಬರೆಯುವ ಬರಹಗಾರ್ತಿಯರ ಜೊತೆ ಹೋಲಿಸಿದರೆ ಕಾವ್ಯ ಕೃಷಿ ಮಾಡುವವರ ಸಂಖ್ಯೆ ಕಡಿಮೆಯೇ! ಅದರಲ್ಲೂ ಭಾವುಕವಾಗಿ ಬರೆಯುವ ಲೇಖಕಿಯರೇ ಹೆಚ್ಚು. ಇಂಥ ಸಂದರ್ಭದಲ್ಲಿ ಕವಯತ್ರಿ ಶ್ರೀಮತಿ ಸಿ.ಎಸ್. ವಿಜಯಲಕ್ಷ್ಮಿ (ವಿಜಯಾ ಸುಬ್ಬರಾಜ್) ಅವರು ವೈಚಾರಿಕ ಕವಿತೆಗಳನ್ನು ಬರೆಯ ಹೊರಟಿರುವುದು ಶ್ಲಾಘ್ಯ.

೧೯೭೬ರಿಂದಲೂ ನಾನೂ ವಿಜಯಾ ಸುಬ್ಬರಾಜ್‌ರನ್ನು ಅವರ ಬರವಣಿಗೆಯನ್ನು ಬಲ್ಲೆನಾದುದರಿಂದ ಈ ಸಂಕಲನದ ಕವಿತೆಗಳನ್ನು ಅರಗಿಸಿಕೊಳ್ಳಲು ಕಷ್ಟವೇನಾಗಲಿಲ್ಲ. ನಾನು ಆಗಲೇ ಅವರ ರಮ್ಯ ಸಂಪ್ರದಾಯದ ಪದ್ಯಗಳನ್ನು ಓದಿದ್ದೆ. ಬೇರೆ ಬೇರೆ ಭಾಷೆಗಳನ್ನು ಕಲಿಯುವುದರ ಬಗ್ಗೆ ಅವರಿಗೆ ಬಹಳ ಉತ್ಸಾಹ. ವಿಜ್ಞಾನ ಪದವೀಧರೆ ಆಗಿದ್ದ ಅವರು ಸಾಹಿತ್ಯ ಕ್ಷೇತ್ರಕ್ಕೆ ಹೊರಳಿ ಕನ್ನಡದಲ್ಲಿ ಎಂ.ಎ. ಮಾಡಿ ಅಧ್ಯಾಪಕಿ ಆದಮೇಲೂ ಸಹ ತಮ್ಮ ಕಲಿಕೆಯನ್ನೇನೂ ನಿಲ್ಲಿಸಿಲ್ಲ. ಹಿಂದಿಯಲ್ಲೂ ಇಂಗ್ಲೀಷಿನಲ್ಲೂ ಸಾಕಷ್ಟು ಪರಿಣತಿ ಪಡೆದಿರುವ ಅವರು ಸಂಗೀತ ಫ್ರೆಂಚ್ ಭಾಷೆಗಳ ಬಗೆಗೂ ಆಸಕ್ತಿ ತಳೆದು ಮತ್ತೆ ವಿದ್ಯಾರ್ಥಿಯಾಗಿದ್ದಾರೆ. ಇದಲ್ಲದೆ ಅವರಿಗೆ ರಂಗ ಭೂಮಿಯ ಪರಿಶ್ರಮವೂ ಸಾಕಷ್ಟಿದೆ. ನಾಟಕಗಳಲ್ಲಿ ಪಾತ್ರವಹಿಸುವ ಗೀಳು ಅವರಿಗೆ ಕಟ್ಟಿಟ್ಟದ್ದು. 'ಬೊಕ್ಕತಲೆಯ ನರ್ತಕಿ' 'ಎತ್ತಿದ ಕೈ' ನಾಟಕಗಳಲ್ಲಿ ಅವರು ಪಾತ್ರವಹಿಸುವಾಗ ಅತ್ಯಂತ ನಾಟಕೀಯವಾಗಿ ಸಂಭಾಷಣೆ ಹೇಳುತ್ತಿದ್ದ ಧಾಟಿಯನ್ನು ನಾನಿನ್ನೂ ಮರೆಯಲಾಗಿಲ್ಲ...

ಈ ಎಲ್ಲ ಹಿನ್ನೆಲೆಗಳಲ್ಲಿ ನಾನು ಶ್ರೀಮತಿ ವಿಜಯಲಕ್ಷ್ಮಿ ಅವರನ್ನೂ ಅವರ ಕವಿತೆಗಳನ್ನೂ ಅರಿಯ ಹೊರಟು, ನನಗೆ ತಿಳಿದಂತೆ ಇಲ್ಲಿನ ಪದ್ಯಗಳನ್ನು ವ್ಯಾಖ್ಯಾನಿಸಿದ್ದೇನೆ –

ಸಂಕಲನಕ್ಕೆ ಕೊಟ್ಟ ಶೀರ್ಷಿಕೆ 'ತ್ರಿಶಂಕು' ಎನ್ನುವ ಹೆಸರೇ ನಮಗೆ ಪೌರಾಣಿಕ ಪಾತ್ರವನ್ನು ಆವರಣವನ್ನು ಸೂಚಿಸುತ್ತೆ. ಈ ಕೃತಿಯಲ್ಲಿ ಉದ್ದಕ್ಕೂ ಪೌರಾಣಿಕ ಪ್ರತಿಮೆಗಳು ಓದುಗನ ಮನಸ್ಸನ್ನು ಆವರಿಸಿಕೊಳ್ಳುತ್ತವೆ. ಇದು ಈ ಕವಯತ್ರಿ ಪೌರಾಣಿಕ ಪ್ರಪಂಚದ ಬಗ್ಗೆ ತಳೆದಿರುವ ಆಸ್ಥೆಯನ್ನ – ನಮ್ಮ ಮಹಾಕಾವ್ಯಗಳನ್ನು ಈಕೆ ಓದಿಕೊಂಡಿರುವ ರೀತಿಯನ್ನು ನಿಚ್ಚಳವಾಗಿ ಬಿಂಬಿಸುತ್ತೆ. ಇದು ಕಬ್ಬಿಗಿತಿಯ ಚೊಚ್ಚಲ ಹೊತ್ತಿಗೆ. ಇದರಲ್ಲಿನ ಇಪ್ಪತ್ತೆರಡು ಪದ್ಯಗಳೂ ಓದಿಸಿಕೊಳ್ಳುತ್ತವೆ. ಒಬ್ಬ ಕವಯತ್ರಿಯ ಮೊದಲ ಕೃತಿಯ ಎಲ್ಲ ಪದ್ಯಗಳೂ ಈ ಗುಣವನ್ನು ಹೊಂದಿರುವುದು ನಿಜಕ್ಕೂ ಆರೋಗ್ಯಕರವೇ! ಪದ್ಯ ಬರೆಯುವುದನ್ನು ಪ್ರಾರಂಭಿಸಿ ಹತ್ತು ಹನ್ನೆರಡು ವರ್ಷಗಳು ಕಳೆದನಂತರ ಅವರು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದು ಕೂಡ ಅವರ ಸಂಯಮವನ್ನೇ ತೋರಿಸಿದೆ.

ಈ ಸಂಕಲನದ ಬೇರುಗಳು, ಬಯಕೆ, ಪರಕೀಯ, ನೆನಪುಗಳು, ಪ್ರೇಯಸಿಗೆ, ಇನಿಯನಿಗೊಂದು ಕಿವಿ ಮಾತು, ನಮಗೇನಿದೆ ಕೊರತೆ? ಗಾಂಧೀಜಿ ಪದ್ಯಗಳು ಬೇರೆ ಪದ್ಯಗಳಿಗಿನ್ನ ವಿಶಿಷ್ಟವಾಗಿವೆ. ಇವುಗಳ ವಿಶೇಷತೆ ಅಡಗಿರುವುದು ನಿರೂಪಣೆಯ ಸೊಗಸುಗಾರಿಕೆಯಿಂದಲೇ! ಯಶಸ್ವಿ ಅನ್ನಿಸಿಕೊಂಡ ಪದ್ಯಗಳಲ್ಲೂ ಸಹ ಕಾವ್ಯಾಭ್ಯಾಸಿಯ ದೃಷ್ಟಿಗೆ ಕೆಲವೆಡೆ ಭಾವನೆಗಳು ಇನ್ನೂ ಪ್ರಖರವಾಗಬೇಕಿತ್ತು ಅನ್ನಿಸಬಹುದು. ಆದರೆ ಅವರು ಬರೆಯುತ್ತಿರುವ ಇಂದಿನ ಕಾಲವನ್ನೂ ನಾವು ಗಮನಿಸಬೇಕಾಗುತ್ತದೆ. ಈಗಂತೂ ಕನ್ನಡ ಕಾವ್ಯ ಕ್ಷೇತ್ರ ತನ್ನ ಹೆಗ್ಗಳಿಕೆಯನ್ನೇನೂ ಸಾರುತ್ತಿಲ್ಲ. ರಮ್ಯ, ನವ್ಯ, ಗ–ಪದ್ಯ, ಬಂಡಾಯ–ಎಲ್ಲವುಗಳ 'ಕಲಬೆರಕೆ–ಕಾಲ' ಹೊಸ ಜಾಡಿನತ್ತ ಬಂಡಾಯ ಕಾವ್ಯ ಮುಖಮಾಡುತ್ತಿದೆ, ನಿಜ... ಆದರೂ ಸ್ಪಷ್ಟವಾಗಿ ಈಗ ಯಾವೊಂದು ಕಾವ್ಯ ಶೈಲಿಯೂ ಅದ್ದೂರಿಯಾಗಿ ವಿಜೃಂಭಿಸಿಲ್ಲ ಎಂಬುದನ್ನು ಯಾರೂ ತಳ್ಳಿಹಾಕುವಹಾಗಿಲ್ಲ. ಇಂಥ ಪರಿಸರದಲ್ಲಿ ವಿಜಯಲಕ್ಷ್ಮಿ ಬರೆಯುತ್ತಿದ್ದಾರೆ. ವಾಸ್ತವದ ಬೆಂಕಿ ಉರಿಯಮೇಲೆ ನಡೆಯುತ್ತಾ, ಸ್ವಚ್ಛ ಬದುಕಿಗಾಗಿ ಚಡಪಡಿಸುತ್ತಾ, ಸುಂದರವಾದ ಸ್ವಪ್ನಗಳನ್ನು ಅವರು ಕಾಣುತ್ತ ಹೋಗುತ್ತಿದ್ದಾರೆ. ಈ ಅಂಶಗಳನ್ನು ಅವರ ಕವಿತೆಗಳ ಅಂತರ್ಯದಲ್ಲಿ ಕಾವ್ಯಾಭಿಮಾನಿ ಇಣುಕಿ ನೋಡಬಹುದು.

ನವೀನ ಬದುಕಿನ ಸಂಕೀರ್ಣತೆ ಈ ಕವಯತ್ರಿಯ ಮನೋಮಂಡಲವನ್ನು ಕಲಕಿದೆ; ಚಿಂತನೆಗೆ ಇಂಬುದೊರಕಿದೆ. ವಿಜಯಾ ಸುಬ್ಬರಾಜ್ ಅವರ ಸ್ವೋಪಜ್ಞತೆಯ ಮಿಂಚಿನಗೆರೆ ಅಲ್ಲಲ್ಲಿ ಮೂಡಿ ಓದುಗನಿಗೆ ಇವರ ಕಾವ್ಯ ತುಣುಕು–ಹೆಜ್ಜೆ ಗುರುತುಗಳು

ಗೋಚರಿಸುತ್ತವೆ. ಈ ಕಬ್ಬಿಗಿತಿಗೆ ತನ್ನ ಇತಿ-ಮಿತಿಗಳೂ ಗೊತ್ತಿರುವುದು ಸಂತೋಷದ ಸಂಗತಿ.

"ಹಾಳು ಬೇರುಗಳು
ಇಲ್ಲದ ಜಾಗವೇ ಇಲ್ಲ-
ನಾಕಟ್ಟುವ
ಭವನ
ಬಿರುಕು ಬಿಟ್ಟೀತೆಂಬ
ಹೆದರಿಕೆ
ಸೋಲೊಪ್ಪಿಕೊಂಡು
ಸುಮ್ಮನಾದೆ-"

(ಬೇರುಗಳು)

-ಈ ನುಡಿಗಳು ಕವಯತ್ರಿಯ ಆರೋಗ್ಯಕರ ಆಲೋಚನೆಯನ್ನೇ ಎತ್ತಿ ಹಿಡಿದಿವೆ.

ವಿಜಯಾ ಸುಬ್ಬರಾಜ್ ಅವರು ತಾನು ಬಾಳಿನಲ್ಲಿ ಕಂಡ ಅನುಭವ, ನಿರೀಕ್ಷಿಸಿದ ಅಪೇಕ್ಷೆ, ಕಳೆದ ಭೂತ ಕಾಲ-ಎಲ್ಲವುಗಳನ್ನೂ ಒಮ್ಮೆಗೇ ತಮ್ಮ ಪದ್ಯಗಳಲ್ಲಿ ಹೇಳ ಹೊರಟ ಅರ್ಥದ ಒತ್ತು ನಿಚ್ಚಳವಾಗುವ ಬದಲು ಶಬ್ದಗಳ ಸುಂದರ ಮೆರವಣಿಗೆ ಹೊರೆಯಾಗಿ ನೋಟಕ್ಕೆ ಮೋಹಕವಾಗಿ ಕಾಣಿಸಿಕೊಳ್ಳುತ್ತವೆ.

"ಕಣ್ಣು ಬಿಟ್ಟೆದ್ದಾಗ
ಯಾವುದಕ್ಕೂ ಎಟುಕದ
ಕುಬ್ಜ ಕೈಗಳಿಗೆ
ಕತ್ತಲುಬ್ಬರದಲ್ಲಿ
ರಾತ್ರಿ ಸಮತೆಯಲಿ
ಹರ್ಕ್ಯುಲಸ್ ಶಕ್ತಿ!
ಫಾಸ್ಟಸ್ ಬಯಕೆಗೆ
ಪೂರ್ಣ ತೃಪ್ತಿ!!"

(ಬಯಕೆ)

... ಹೀಗೆ ಹತಾಶೆ -ಹಠ, ಹಂಬಲ-ದೌರ್ಬಲ್ಯ, ಇಂಥ ಭಾವನೆಗಳು ಮತ್ತು ಮತ್ತೆ ಬಂದರೂ ಹೊಸದನಿಯಲ್ಲಿ ಅಲಂಕಾರಿಕವಾಗಿ ಅನುಕರಿಸಿವೆ... ಎಲಿಯಟ್ ಹೇಳುವಂತೆ "Perfect concord between word. and meaning" ಮಾಡಲು ವಿಜಯಲಕ್ಷ್ಮಿ ಅವರ ಕವಿತೆಗಳಲ್ಲಿ ವಾಗರ್ಥಗಳ ಸಾಮರಸ್ಯ ಇನ್ನೂ ಹೆಚ್ಚಿನ ರೀತಿಯಲ್ಲಿ ಅಂತರ್ಗತವಾಗಿ ಪೋಣಿತವಾಗಬೇಕಾಗುತ್ತದೆ. ಆ ದಿಸೆಯಲ್ಲಿ ಈ ಲೇಖಕಿ ಇನ್ನೂ ಕಲಿಯುವುದು ಬೇಕಾದಷ್ಟಿದೆ.

ಭಾಷೆಯನ್ನು ಬಳಸುವ ದೃಷ್ಟಿಗಿಂತ–ವಿಷಯದ ಆಯ್ಕೆಯ ದೃಷ್ಟಿಯಿಂದ ಇವರು ಪ್ರಯೋಗಗಳ ಕಡೆಗೆ ಹಾತೊರೆಯುತ್ತಾರೆ. ನಿದರ್ಶನಕ್ಕೆ ನಾವು "ಡೈವೋರ್ಸ್" ಎಂಬ ಕವಿತೆಯನ್ನೇ ಓದಿ ನೋಡಬಹುದು.

**"ಮುಂಡೆಯಾದ ಮೇಲೆ**
**ಭಾನುಮತಿಯ ಬಸಿರು ಕಮ್ಮಾರ ಕುಲುಮೆ**
**ಇದ್ದೊಬ್ಬ ಗಂಡನೂ ಇಲ್ಲದಾದಾಗ**
**ಐವರಪ್ಪುಗೆಯ ಸುಖದ ದ್ರೌಪದಿಯ**
**ಉರಿವ ಕಿಚ್ಚು**
**ಕುರುಭೂಮಿ ಕೆಸರಲ್ಲಿ**
**ಅಂದದರಮನೆಯೊಂದು**
**ಮಂದಹಾಸದಿ ನಿಂತು**
**ಅಣಕಿಸಿತ್ತು**
**ಕೊಬ್ಬಿದ ಖಂಡಗಳನುಬ್ಬಿಸುತ್ತ**
**ಕಸರತ್ತಿನಲಿ ಮಸ್ತ**
**ಭೀಮನೆದೆ ಮೆದುಳಲ್ಲಿ**
**ಬುಳ ಬುಳನೆ ಹರಿವ ಹುಳು–**
**ಕೌರವನ ಬೀಳಿಗೆ**
**ಮೀಸೆ ಧ್ವಜ ಹಾರಾಟ**
**ರಸಿಕ ರಂಡೆ ಗಂಡನಿಗೆ,**
**ನನ್ನವಳ ಮೇಲೆ ಅವನಿಗೆ ಕಣ್ಣು**
**ತಪ್ಪೇನು?**
**ಹಣ್ಣು ಚೆನ್ನಿದ್ದಲ್ಲಿ ಕಣ್ಣು ಚುರುಕು"**

(ಡೈವೋರ್ಸ್)

... ಇಂಥ ಇನ್ನೂ ಕೆಲವು ವಾಕ್ಯ ಖಂಡಗಳನ್ನು ಸಹೃದಯರು ಪರಿಶೀಲನೆ ಮಾಡಬಹುದು. ಕವಯತ್ರಿಗೆ ಕೆಲವು ಪದಪುಂಜಗಳನ್ನು ಉಪಯೋಗಿಸುವುದರಲ್ಲಿ ಯಾವ ನಿರ್ಭಿಡೆಯೂ ಇಲ್ಲ. ಕವಿತೆ ಬರೆಯುತ್ತಿರುವವಳು ಒಂದು ಹೆಣ್ಣು ಆದರೂ ಮುಕ್ತ ಸೃಜನೆಯ ಕಡೆಗೆ ವಿಜಯಲಕ್ಷ್ಮಿ ಆಶಿಸುವುದರಿಂದ ನುಡಿ ಸ್ವಚ್ಛಂದ. ತನ್ಮೂಲಕ ಲೇಖಕಿಯ ತೆರೆದ ಪುಸ್ತಕದಂಥ ಮನವೂ ಪ್ರಕಟಿತ. ಇಲ್ಲೂ ಸಹ ವಾಚಕರು ತಪ್ಪದೆ ಒಂದು ಸಂಗತಿ ಗಮನಿಸಬಹುದು. ಕವಯತ್ರಿಗೆ ಪೌರಾಣಿಕ ಪಾತ್ರಗಳ, ಸಂಗತಿಗಳ ಬಹಳ ಇಷ್ಟವಾಗಿ ಅವರ ಕವಿತೆಗಳಲ್ಲಿ ಪೌರಾಣಿಕ ಪ್ರತಿಮೆಗಳೇ ಮುಂಖಾನುಮುಂಖವಾಗಿ ಧಾಳಿಮಾಡುತ್ತವೆ.

ಇಷ್ಟಾದರೂ ವಿಜಯಾ ಸುಬ್ಬರಾಜ್ ಅವರಿಗೆ ಅರಿವಿಲ್ಲದಂತೆಯೇ-ಕೆಲವೊಮ್ಮೆ ಶಬ್ದಾರ್ಥಗಳ ಕುಶಲ ನಿಯೋಜನೆಯಿಂದ ರಸೌಭಾವ ಸೃಷ್ಟಿ ಸಾಧಿತವಾಗಿದೆ. ಉದಾಹರಣೆಗೆ 'ಪರಕೀಯ' ಪದ್ಯದ ಈ ಸಾಲುಗಳನ್ನು ನಾವು ನೋಡಬಹುದು.

"ನನ್ನ ಪಾಲಿನ ಮನೆಗೆ ನಾನೇ
ಅಭ್ಯಾಗತ."
"ನಾಟ ಮಣ್ಣೊಳಗೆ
ಕಸಿಯಾದ ನಾನು
ಪರಕೀಯದ ಸ್ಪೃಶ್ಯತೆಯ ಧಾಳಿಗೆ
ಕುಸಿದು ಕುಳಿತಿದ್ದೇನೆ."

ಕವಿತೆಯಲ್ಲಿ ಒಂದು ಮನ ಇನ್ನೊಂದನ್ನು ಹಂಬಲಿಸಿ ಅಳಲ ವಿನಿಮಯಿಸಿಕೊಳ್ಳುವ ರಂಗಿನ ಮಾತುಗಳಿವೆ...

"ಸದ್ದಡಗಿ ನಿದ್ದೆಯಲಿ ಬಿದ್ದಾಗ
ರೋಮಾಂಚನಗಳ
ಕಳೆಕೀಲುತ್ತೇನೆ–
ಮಾದಕ ಮುತ್ತುಗಳ
ದ್ರಾಕ್ಷಿ ಗೊಂಚಲು ನೀನು"

('ಪ್ರೇಯಸಿಗೆ–')

ಇಲ್ಲಿಯ ಭಾವ ವೈಭವ ಸೊಗಸಾಗಿದೆ. ಹೀಗೆ ವಿಜಯಲಕ್ಷ್ಮಿ ಅವರ ಪ್ರತಿಭೆ ಆಗೊಮ್ಮೆ ಈಗೊಮ್ಮೆ ಸೌಮ್ಯವಾಗಿ ಮಿನುಗಿದೆ. ಇಲ್ಲಿ ಅರ್ಥದ ಕೆನೆಯಿದೆ. ನಡಿಗೆಯಲ್ಲಿ ಆಂತರಿಕ ಪ್ರಾಸದ ತೂಗುವ ತೆನೆಯಿದೆ.

ಇದೇ ರೀತಿ 'ಇನಿಯನಿಗೊಂದು ಕಿವಿಮಾತು' –ವಿನಲ್ಲಿ ನಮ್ಮ ಚಿತ್ತವನ್ನೇ ಮುತ್ತಿಬಿಡುವ ರಾಗದ ರಸಿಕತೆಯಿದೆ.

"ಧರ್ಮೇಚ ಅರ್ಥೇಚ ಕಾಮೇಚ
ಎಂದು ಹೇಳಿಸಿ
ಮಂತ್ರ ತಂತಿಯಲಿ
ಬಿಗಿದಿದ್ದಾರೆಂದುಕೊಳ್ಳಬೇಡಿ
ನೀವು ಚಂದ್ರ ನಾನು ಬೆಳಕು
ನೀವು ಹೂವು–ನಾನು ಗಂಧ"

ಕವಯಿತ್ರಿಯ ಹಾರೈಕೆ ಸಂಪದ ಅರ್ಥಪೂರ್ಣವಾಗಿದೆ. ಈ ಮನೋಧರ್ಮ ಒಳಿತಾದದ್ದೇ, ಇನ್ನೂ ಮುಂದುವರೆದು ವಿಜಯಾ ಸುಬ್ಬರಾಜ್ ಹೇಳುವ "ನನ್ನ ಹಡಗನ್ನ ನಾನೇ ನಡೆಸುತ್ತೇನೆ" ಎಂಬ ಬದುಕಿನ ಬಗೆಗಿನ ಧೋರಣೆ ಉತ್ತಮವಾಗಿದೆ.

ಈ ಇಪ್ಪತ್ತನೆ ಶತಮಾನ ವ್ಯಂಗ್ಯದ ಯುಗ... ಕಾವ್ಯದಲ್ಲಿ ವ್ಯಂಗ್ಯ, ಧ್ವನಿ, ಇದ್ದಾಗ ಮನಸ್ಸಿಗೆ ನಾಟುವುದು ಹೆಚ್ಚು, "ನಮಗೇನಿದೆ ಕೊರತೆ?" ಎಂಬುದು ವ್ಯಂಗ್ಯದ ಧಾಟಿಗೆ ಸೇರುವಂತಾದದ್ದು. ಇಡೀ ಪದ್ಯದಲ್ಲಿ ವಿಡಂಬನೆ ಹೆಚ್ಚು ಮೊನಚಾಗಿದೆ. ಅದೇ ರೀತಿ 'ಗಾಂಧೀಜಿ' ಪದ್ಯ ವ್ಯಂಗ್ಯಲೇಪನದಿಂದ ಸಹೃದಯನ ಗಮನ ಕದಿಯುತ್ತದೆ.

ಒಟ್ಟಾರೆ ವಿಜಯಾ ಸುಬ್ಬರಾಜ್ ಅವರ ಕವಿತೆಗಳನ್ನು ಓದಿದಾಗ –ವಸ್ತುಕೋಶ ಓದಿದಂತೆ ಹಲವು ಹನ್ನೊಂದು ವಿಶೇಷ ಪದಪುಂಜಗಳು ವಾಚಕನ ಆಸಕ್ತಗಾಳಕ್ಕೆ ಸಿಗುತ್ತವಾದರೂ ಮೌಲ್ಯಯುಕ್ತ ಫಲ ದೊರೆಯುವುದು ಕಡಿಮೆಯೇ! ಕವಯತ್ರಿಯ ಜ್ಞಾನ–ಪರಿಧಿ ಮಾತ್ರ ವಿಸ್ತೃತವಾಗಿದೆ. ಆದರೆ ಅದು ಕಾವ್ಯಸ್ಪರ್ಶ ಪಡೆಯುವುದು ಅಪರೂಪ! ವಿಜಯಲಕ್ಷ್ಮಿ ಅವರು ತಮ್ಮ ದಿನನಿತ್ಯದ ಅನಿಸಿಕೆಗಳಿಗೆ ಕವಿತೆಗಳ ಮೂಲಕ ಆಕಾರಕೊಡುವ ಶೋಧನೆಯಲ್ಲಿ ತೊಡಗಿದ್ದಾರೆ. ಅವರಿಗೇನೋ ತಮ್ಮ ಮನದಾಳದ ವಿಚಾರಗಳು ಪರಿಪಕ್ವಗೊಂಡು ಸ್ಪಷ್ಟರೂಪ ಪಡೆಯುತ್ತಿವೆಯೆಂಬ ವಿಶ್ವಾಸ... ಆದರೆ ಅವರ ಕೆಲವು ಪದ್ಯಗಳ ವೈಫಲ್ಯ ಅವರ ಶ್ರಮವನ್ನು ಇನ್ನೂ ಸಾರ್ಥಕಗೊಳಿಸಬೇಕಾಗಿದೆ. ಕವಯತ್ರಿ ಶಬ್ದಗಳ ಸಂಗಡ ಪ್ರತಿಮೆ ರೂಪಕಗಳ ಸಂಗಡ ಹೋರಾಟವನ್ನೇ ನಡೆಸಿ ಆಂಶಿಕ ಸಾಧನಾ ಬಾವುಟ ಹಾರಿಸಿದ್ದಾರೆ. ಇಷ್ಟಾದರೂ ಈ ಸಂಕಲನ ಬೇರುಗಳು, ಬಯಕೆ, ನೆನಪುಗಳು, ಪ್ರೇಯಸಿಗೆ ಎಂಬಂಥ ನಾಲ್ಕೈದು ಪದ್ಯಗಳಲ್ಲಿ ಕಬ್ಬಿಗಿತಿಯ ಒಳದನಿಯನ್ನು ಆಲಿಸಬಹುದು.

ಶ್ರೀಮತಿ ವಿಜಯಾ ಸುಬ್ಬರಾಜ್ ಅವರ ಅನುಭವ ಹಾಗೂ ಅಭಿವ್ಯಕ್ತಿಯ ವರ್ತುಲ ವಿಸ್ತಾರವಾದಾಗ ಪದಗಳ ಅತಿಯಾದ ಬಳಕೆಗೊಂದು ಕಡಿವಾಣವನ್ನು ಅವರು ಕಂಡುಕೊಂಡಾಗ ಇಲ್ಲಿನ ಕವಿತೆಗಳಿಗಿಂತ ಮಿಗಿಲಾದ ಅರ್ಥಪೂರ್ಣ ಕಾವ್ಯ ಹೊರಹೊಮ್ಮುವ ಸಾಧ್ಯತೆಯುಂಟು. ಆ ನಿಟ್ಟಿನಲ್ಲಿ ಅವರು ನಡೆಯುವಂತಾಗಲಿ ಎಂದು ಅವರ ಒಬ್ಬ ಆತ್ಮೀಯ ಸ್ನೇಹಿತನಾಗಿ ಮುಕ್ತ ಮನಸ್ಸಿನಿಂದ ಹಾರೈಸುತ್ತೇನೆ.

**–ದೊಡ್ಡ ರಂಗೇಗೌಡ**

ಕನ್ನಡ ವಿಭಾಗ
ಎಸ್.ಎಲ್. ಎನ್. ಕಾಲೇಜು
ಕೋಟೆ, ಬೆಂಗಳೂರು – ೫೬೦೦೦೨

# ಅನುಬಂಧ ೨

ವಿಜಯಾ ಸುಬ್ಬರಾಜ್ ತಮ್ಮ 'ತ್ರಿಶಂಕು' ಕವನ ಸಂಕಲನದ ಅನಂತರ ಇದೀಗ ಎರಡನೆಯ ಕವನ ಸಂಕಲನವನ್ನು ಪ್ರಕಟಿಸುತ್ತಿದ್ದಾರೆ. ಸುಮಾರು ಎರಡು ದಶಕಗಳಿಂದಲೂ ಕವಿತೆಗಳ ರಚನೆಯಲ್ಲಿ ತೊಡಗಿದ್ದಾರಾಗಿ, ಈ ಅವಧಿ ಕನ್ನಡ ಕವಿತೆಯ ಅವಸ್ಥಾಂತರಗಳ ಪರಿಣಾಮಗಳು ಇವರ ಕವಿತೆಗಳಲ್ಲಿ ಬಗೆಬಗೆಯಾಗಿ ಕಾಣಸಿಗುತ್ತದೆ. ಈ ಅವಧಿಯಲ್ಲಿ ಕವಿತೆ ಬರೆಯುವ ಹೆಂಗಸರ ಸಂಖ್ಯೆ ಹೆಚ್ಚಾಗಿರುವುದು ಕೂಡ ಗಮನಿಸಬೇಕಾದ ಸಂಗತಿ. ಕವಿತೆಯ ಮೂಲಕ ಪುರುಷ ಪ್ರಧಾನವಾದ ಹಾಗೂ ಭಾಷಿಕ ಜಗತ್ತನ್ನು ಒಳಗಿಂದ ಸ್ಫೋಟಿಸುವ ಯತ್ನದಲ್ಲಿ ಈ ಎಲ್ಲ ಹೆಣ್ಣು ಕವಿಗಳು ತಮ್ಮ ತಮ್ಮ ಸಾಮರ್ಥ್ಯಕ್ಕೆ ಅನುಗುಣವಾಗಿ ತೊಡಗಿದ್ದಾರೆ. ಈ ಸಂಗತಿಗಳ ಹಿನ್ನೆಲೆಯಲ್ಲಿ ಈ ಕವನ ಸಂಕಲನವನ್ನು ನೋಡಬೇಕಾಗಿದೆ.

ಇಲ್ಲಿನ ಬಹುಪಾಲು ಕವಿತೆಗಳು ತಮ್ಮ ಕೇಂದ್ರದ ದನಿಯಾಗಿ ಹೊಂದಿರುವ ಹೆಣ್ಣು ತಪ್ತ ನಿರೀಕ್ಷಕಿಯಂತೆ ಕಾಣುತ್ತಾಳೆ. ಸಾಮಾಜಿಕವಾಗಿ ಇಂಥ ಹೆಣ್ಣು ಕ್ರಿಯಾತ್ಮಕವಾಗುವ ಮೊದಲಿನ ಆತಂಕ ಕ್ಷಣಗಳಲ್ಲಿರುವುದು ಢಾಳಾಗಿ ಕಾಣುತ್ತಿದೆ. ಇದು ಸಮಯದ ಸಮಸ್ಯೆ. ಈ ಕವಿತೆಗಳ ನಿರೂಪಕಿ ಕೂಡ ಸಾಮಾಜಿಕ ಸಂರಚನೆಯ ಭಾಗವಾಗಿದ್ದಾಳೆ. ಹೀಗಾಗಿ ಇಲ್ಲಿ ಕವಿತೆ ಉದ್ವೇಗ, ಆತಂಕಗಳೊಡನೆ ಭಾವ ನಿವೇದನೆಯನ್ನು ನಿರ್ವಹಿಸುವ ಹಾದಿಯನ್ನು ? ಆಯ್ದುಕೊಳ್ಳುತ್ತದೆ. 'ಮೃಗಜಲ,' 'ಕುಬ್ಜೆ,' 'ಸ್ತ್ರೀ,' ನೀಲಾಂಜನೆಗೆ' – ಇವೇ ಕವಿತೆಗಳನ್ನು ನಿದರ್ಶನಗಳಾಗಿ ಓದಿ ನೋಡಬಹುದು. ಕವಿತೆ ಆಯ್ದ ನಿವೇದನೆಯ ಹಾದಿ ಒಂದು ರೀತಿಯಲ್ಲಿ ಇಕ್ಕಟ್ಟಿನದು. ಏಕೆಂದರೆ ಅದಕ್ಕೆ ಅನುವಾಗುವ ಭಾಷಿಕ ಶರೀರ, ಲಭ್ಯವಾದಾಗಲೇ ಆಯ್ಕೆಯ ಸೋಲುಗೆಲವುಗಳು ನಿರ್ಧಾರವಾಗುವುದು. ವಿಜಯಾ ಸುಬ್ಬರಾಜ್ ಅವರ ಕವಿತೆಗಳ ಸಮಸ್ಯೆಗಳ ಪ್ರಾರಂಭವಾಗುವುದು ನಿಜವಾಗಿ ಇಲ್ಲಿಂದಲೇ.

ಪ್ರತೀಕ, ಸಂಕೇತಗಳ ಮೂಲಕ ಸ್ವಗತಗಳ ನೆಲೆಯನ್ನು ಈ ಕವಿತೆಗಳು ಅನುಸರಿಸಿವೆ. ಇದು ಹೇಳಿ ನವ್ಯ ಕವಿಗಳಲ್ಲಿ ಕೆಲವರು ರೂಢಿಸಿ ಬಳಸಿದ ಧಾಟಿ. ಕೇಂದ್ರರೂಪಕ ಇಲ್ಲವೇ ರೂಪಕಗಳ ಸರಣೀಯೊಂದರ ಮೂಲಕವೇ ಕವಿತೆಗೆ ಕಟ್ಟಡವನ್ನು ನೀಡುವುದು

ಈ ಧಾಟಿಯ ಒಂದು ವಿಧವಾದರೆ, ಕೇಂದ್ರ ವಿವರವೊಂದನ್ನು ಪರಸ್ಪರ ಅಷ್ಟೇನೂ ಸಂಬಂಧವಲ್ಲದ ಆದರೆ ವಿವರಗಳಿಗೆ ಹೊಂದುವ ಸಂಕೇತಗಳ ಮೂಲಕ ಕವಿತೆ ಕಟ್ಟುವುದು ಇನ್ನೊಂದು ವಿಧ. ವಿಜಯಾ ಅವರು ಎರಡನೆಯ ಹಾದಿ ಹಿಡಿದಿದ್ದಾರೆ. ಈ ಹಾದಿ ಕವಿತೆ ಹಾಗೂ ರೆಟರಿಕ್ಕುಗಳ ನಡುವಣ ಅಂತರವನ್ನು ಕಡಿಮೆ ಮಾಡಿಬಿಡುತ್ತದೆ. ಅಲ್ಲದೆ ಕವಿತೆಯ ಗುಣವೆಂಬುದು ಕೃತಿಯಿಡೀ ವ್ಯಾಪಿಸದೇ ವ್ಯಕ್ತಿಗಳಲ್ಲಿ, ವಿವರಗಳ ಗ್ರಹಿಕೆಯಲ್ಲಿ ಮಾತ್ರ ಕೇಂದ್ರಿಕೃತವಾಗುವ ಸಾಧ್ಯತೆ ಇದೆ. ಇಲ್ಲಿನ ಕವಿತೆಗಳಲ್ಲೂ ಈ ಲಕ್ಷಣ ಕಾಣಸಿಗುತ್ತದೆ.

ಈ ಮಾತನ್ನು ವಿವರಿಸಲು ಇಲ್ಲಿನ ವಾಕ್ಯ ಸಂಯೋಜನೆಯನ್ನು ಗಮನಿಸಬಹುದು. ಕೆಲವು ಅಪೂರ್ಣ ಕ್ರಿಯಾಪದಗಳೊಡನೆ ಹತ್ತಾರು ಇಂಥ ಕ್ರಿಯಾ ಪದಗಳಿರುವ ವಾಕ್ಯಗಳು ಇವೆ. ಉದಾಹರಣೆಗೆ 'ಮಂಡುಕೋಪನಿಷತ್ತು' ಕವಿತೆಯ ೩, ೫ ಹಾಗೂ ೬ನೇ ವಾಕ್ಯಗಳನ್ನು ಓದಿ ನೋಡಿ – ಪೂರ್ಣ ಕ್ರಿಯಾಪದದ ಮೂಲಕ ವಾಕ್ಯ ಕಟ್ಟುವ ಬಗೆಯನ್ನು ಹೆಚ್ಚಾಗಿ ಬಳಸಿದ್ದಾರೆ. ಈ ಕ್ರಿಯಾಸರಣಿ ಭಾವನೆಯ ವಿಚಾರದ ವಿವಿಧ ನೆಲೆಗಳನ್ನು ಕಟ್ಟುವಲ್ಲಿ ತಾರ್ಕಿಕವಾಗಿ ನೆರವಾಗುತ್ತದೆ. ಆದರೆ ಕಾವ್ಯವೆಂಬುದು ವಾಕ್ಯದ ಒಳಗಿನ ಉಪವಾಕ್ಯಗಳಲ್ಲಿ ಉಳಿಯುತ್ತದೆ. ವಿವರಣೆಗೆಂದು 'ದೀಪಾವಳಿ' ಕವಿತೆ ನೋಡೋಣ. ಈ ಕವಿತೆಯ ಮೊದಲ ವಾಕ್ಯ ಕವಿತೆಯ ಮುಖ್ಯ ಧೋರಣೆಯನ್ನು ಹೇಳಿಬಿಡುತ್ತದೆ.

**ಲೆಕ್ಕವಿಲ್ಲದ ಲಕ್ಷ**
**ನಕ್ಷತ್ರ ದೀಪಗಳ ತಂಪು ಬೆಳಕಿನಲಿ**
**ಒಳಗೊಳಗೆ ಸ್ಫೋಟ**
**ಸುರಸುರ ಬತ್ತಿ**
**ಸರ ಸರ ಉರಿವ ಬೂದಿ ಮನಸು**

ಮುಂದಿನ ಸಾಲುಗಳಲ್ಲಿ ಈ ಭಾವವೇ ಪೋಷಿತವಾಗುತ್ತದೆ. ಆ ಸಾಲುಗಳಲ್ಲಿ ಕಾವ್ಯವೆಂಬುದು 'ಬಯಕೆ ಕ್ಷಿಪಣಿ,' 'ಉಬ್ಬರದುತ್ಸಾಹ ಚಿನಕುರುಳಿ,' 'ಚಿಗಿವ ಹೂ ಸದ್ದಿನುಲ್ಲಾಸ' ಎಂಬ ಮಾತುಗಳಲ್ಲಿ ಮಾತ್ರ ಲಭ್ಯ. ಕವಿತೆಯ ಕೊನೆಗೆ ಈ ಧಾಟಿ ಕೊಂಚ ಬದಲಾಗುತ್ತದೆ ಎಂಬುದನ್ನು ಗಮನಿಸಬೇಕು. ಒಂದು ಬಗೆಯ ನಿರೀಕ್ಷೆಯನ್ನು ಒಪ್ಪುವ ಹಂತಕ್ಕೆ ಹೋಗಿ ಕವಿತೆ ನಿಲ್ಲುತ್ತದೆ.

ಹೀಗೆ ಹಲವು ನಿದರ್ಶನಗಳನ್ನು ಆಯ್ದು ನನ್ನ ಮಾತನ್ನು ವಿವರಿಸಬಹುದಾದರೂ ಅದಿಲ್ಲಿ ಮುಖ್ಯವಲ್ಲ. ಕವಿತೆಯ ಕಟ್ಟೋಣದಲ್ಲಿ ವಿಜಯಾ ಅವರು ಆಯ್ದ ಮಾರ್ಗದ ತೊಡಕುಗಳನ್ನು ಬಿಡಿಸಿ ಹೇಳುವುದಷ್ಟೇ ನನ್ನ ಉದ್ದೇಶವಾಗಿತ್ತು. ಹೀಗಿದ್ದರೂ ಚಿತ್ರ ಕಲ್ಪನೆಯಲ್ಲಿ, ರೂಪಕ ನಿಯೋಜನೆಯಲ್ಲಿ ಇಲ್ಲಿನ ಕವಿತೆಗಳು ಅಸ್ಪಷ್ಟತೆಯ ಕಡೆಗೆ

ಓಲುವುದಿಲ್ಲ ಎಂಬುದನ್ನು ಗಮನಿಸಬಹುದು. ವಾಕ್ಯದ ತಾರ್ಕಿಕ ಅರ್ಥದ ಜತೆಗೆ ಭಾವನಾತ್ಮಕ ವಿನ್ಯಾಸವೂ ಓದಿನೊಡನೆ ಗೋಚರವಾಗುವುದೇ ಬಹುಮಟ್ಟಿಗೆ ಕಾಣುತ್ತದೆ. ಇದು ಇವರು ಪಡೆದ ಯಶಸ್ಸು ಎಂದೇ ಹೇಳಬೇಕು.

ಇಲ್ಲಿ ಸಾಮಾಜಿಕ ಎನ್ನಬಹುದಾದ ವಸ್ತುಗಳನ್ನು ಆಯ್ದು ತೆಗೆದು ತೋರಿಸುವುದು ಕಷ್ಟ. ಏಕೆಂದರೆ ಕವಿತೆಗೆ ಮೀಟುಗೋಲುಗಳು ಸಾಮಾಜಿಕವಾದ ನೆಲೆಗಳಿಂದ ಬಂದಿದ್ದರೂ ಅವು ವ್ಯಕ್ತಿಗತ ಜಗತ್ತಿನೊಡನೆ ಸಂವಾದಿಸುತ್ತಲೇ ಮುಂದುವರಿಯುತ್ತವೆ.

ಹಾಗಾಗಿ ಮುಖ್ಯ ಪರಿಪ್ರೇಕ್ಷೆವೆಂಬುದು ವ್ಯಕ್ತಿಯೇ ಸರಿ. 'ನಾವು' ಎಂಬ ಸರ್ವನಾಮ ಬಳಕೆಯಾಗಿರುವ 'ರಾಮಾ ನೀ ಬರಬೇಕು' ಎನ್ನುವ ಕವಿತೆಯಲ್ಲೂ ಈ ಬಹುವಚನ ತಾತ್ಪೂರ್ವಿಕವಾದುದೆಂದೇ ನನ್ನ ಅನಿಸಿಕೆ. ಆದ್ದರಿಂದ ಕವಿ ಎಲ್ಲೂ ಒಂದು ಸಮುದಾಯದ ಅಥವಾ ಇಡೀ ಸಮಾಜದ ಮುಖವಾಣಿಯಾಗುವ ಧೀರೋದಾತ್ತ ನಿಲುವನ್ನು ತಳೆಯುವುದಿಲ್ಲ. ಇದನ್ನು ದೋಷವೆಂದು ನಾನು ಸೂಚಿಸುತ್ತಿಲ್ಲ, ಇದು ಇಲ್ಲಿನ ಲಕ್ಷಣವೆಂದಷ್ಟೇ ಸೂಚಿಸುತ್ತಿದ್ದೇನೆ.

ಹೀಗೆ ಆತ್ಮ ಸಂಮುಖವಾಗುವ ಈ ಕವಿತೆಗಳು ರೆಟರಿಕ್ಕಿನ ಅಂಶವನ್ನು ಹೊರಗಿಟ್ಟಷ್ಟು ಯಶ ಪಡೆಯುವ ಸಾಧ್ಯತೆಗಳು ಹೆಚ್ಚು ಅಂಥ ಹಲವು ಸಾಧ್ಯತೆಗಳನ್ನು ಇಲ್ಲಿನ ಕವಿತೆಗಳಲ್ಲಿ ಕಾಣಬಹುದು. ಕವಿ ಆಯ್ದ ಮಾರ್ಗದ ಇಕ್ಕಟ್ಟುಗಳನ್ನು ಗಮನಿಸಿದರೆ ಈ ಸಾಧನೆ ಕೂಡ ಗಣನೀಯವೆಂದೆನ್ನಬೇಕು.

ಕವಿತೆಯ ಬರೆಯುವ ಹೆಂಗಸರಲ್ಲಿ ಇಂದು ವೈವಿಧ್ಯದ ದನಿಗಳಿವೆ. ಆ ವೈವಿಧ್ಯವನ್ನು ಹೆಚ್ಚಿಸುವಲ್ಲಿ ವಿಜಯಾ ಸುಬ್ಬರಾಜ್ ಅವರ ಕವಿತೆಗಳೂ ಕಾರಣವಾಗಬಲ್ಲವು. ಇದಕ್ಕೆ ಇನ್ನೊಂದು ಅಂಶವನ್ನು ಮಾತ್ರ ಸೇರಿಸಬಹುದೆಂದು ತೋರುತ್ತದೆ. ಅದೆಂದರೆ ಕವಿತೆಗಳು ಸಾಮಾಜಿಕ ಸಂರಚನೆಗೆ ಪೂರಕವಾಗಿರಬೇಕೋ ಅಥವಾ ಆ ಸಂರಚನೆಯನ್ನು ಒಳಗಿಂದಲೇ ಮುರಿಯುವ ಭಾಷಿಕ ಸಾಧ್ಯತೆಗಳನ್ನು ಅನ್ವೇಷಿಸಬೇಕೋ ಎಂಬ ಬಗ್ಗೆ ಕವಿ ತೀವ್ರವಾಗಿ ಆಲೋಚಿಸಬೇಕಾಗಿದೆ. ಈ ದಿಕ್ಕಿನಲ್ಲಿ ವಿಜಯ ಸುಬ್ಬರಾಜ್ ಅವರ ಮುಂದಿನ ಕವಿತೆಗಳು ತಿರುವು ಪಡೆದಾವೆಂಬ ಆಶಯದೊಡನೆ ಈ ಕೆಲವು ಮಾತುಗಳನ್ನು ಮುಗಿಸುತ್ತಿದ್ದೇನೆ.

**–ಕೆ.ವಿ. ನಾರಾಯಣ**

# ಅನುಬಂಧ ೩

ಹದಿನೆಂಟು ವರ್ಷಗಳ ಹಿಂದೆ, ಮುಂದೆ ಹೀಗಾಗಬಹುದು ಎಂಬ ಸುಳಿವು ಸೂಚನೆಯೂ ಇದ್ದಂತೆ ನೆನಪಿಲ್ಲ. ಕಣ್ಣಮಿಂಚಿನ ತುಂಟನಗೆಯ ಮರೆಯಲ್ಲಿ ಇಂಥ ಸೂಕ್ಷ್ಮ ಸಂವೇದನೆ ಅಡಗಿರಬಹುದು ಎನಿಸಿರಲಿಲ್ಲ. ಡಾ. ವಿಜಯಾ ಸುಬ್ಬರಾಜ್ ಅವರ 'ಏನು ಹೇಳಲಿ ಗೆಳೆಯ?' ಸಂಗ್ರಹದ ಕವನಗಳನ್ನು ಓದಿದಾಗ ಮೊದಲು ಮನಸ್ಸಿಗೆ ಅನಿಸಿದ್ದು ಹೀಗೆ. ಈಗಾಗಲೇ ಅವರು ಹಲವು ಸಣ್ಣ ಕಥೆಗಳನ್ನು ಬರೆದಿದ್ದಾರೆ. ಕಾದಂಬರಿಯನ್ನೂ ಬರೆದಿದ್ದಾರೆ. ಅವು ಪ್ರಕಟವಾಗಿವೆ. ಆಗಾಗ್ಗೆ ಅಲ್ಲಿ ಇಲ್ಲಿ ಪ್ರಕಟವಾಗಿದ್ದ ಕವನಗಳನ್ನು ಓದಿದ್ದೆ. ಈಗ ಒಂದೆಡೆ ಎಲ್ಲ ಕವನಗಳನ್ನು ಸಂಕಲನವಾಗಿ ಹೊರತರುತ್ತಿರುವುದು ಬೆಳವಣಿಗೆಯನ್ನು ಗುರುತಿಸಲು, ಒಳದನಿಯ ಭಾವಸೂತ್ರವನ್ನು ತಿಳಿಯಲು ಅನುಕೂಲವಾಗಿದೆ. ಇದು ಅವರ ಎರಡನೆಯ ಕವನ ಸಂಗ್ರಹ.

ಸಮಾಜ ಕಾಲಾಂತರದಿಂದ ಒಡ್ಡಿದ ಮೌಲ್ಯಗಳನ್ನು ವ್ಯಕ್ತಿಯನ್ನು ಆವರಣವಾಗಿ ಕವಿದು ಕಾಡಿಸುತ್ತವೆ. ದೃಗ್ಗೋಚರವಾದ ವಾಸ್ತವತೆಯ ಕಾಲಾಚಶ್ಮದಾಚೆಗಿನ ವಸ್ತುನಿಷ್ಠ ರೂಪಬಣ್ಣ ಮೌಲ್ಯಗಳನ್ನು ಗುರುತಿಸಲು ವ್ಯಕ್ತಿ ಹೆಣಗಬೇಕಾಗುತ್ತದೆ. ಕಣ್ಣಿನ ಒಳತೆರೆಯ ವರ್ಣದ್ರವ್ಯಗಳಿಂದ ವ್ಯಕ್ತಿಗೆ ವಿಶಿಷ್ಟ ನೋಟ ಲಭಿಸುತ್ತದೆ. ಇತರರಿಂದ ಭಿನ್ನವಾಗಲು ಸಾಧ್ಯವಾಗುತ್ತದೆ. ಆಗ ಎರಡು ಬಗೆಯ ಮೌಲ್ಯಗಳ ತಾಕಲಾಟಕ್ಕೂ ತೊಡಗುತ್ತದೆ. ಹೆಣ್ಣಾಗಿ ತನ್ನ ಭಿನ್ನ ಧ್ವನಿಯನ್ನು ಗುರುತಿಸಿ, ಮೇಳದೊಡನೆ ಬೆರತೂ, ಕರಗಿ ಹೋಗದೆ ಉಳಿದು ಬೆಳೆಯುವಲ್ಲಿ, ಸಂವೇದನೆಯ ಸೂಕ್ಷ್ಮತೆಗಳಿಗೆ ರೂಪಕೊಡುವಲ್ಲಿ ರಚನೆಗಳ ಸಾರ್ಥಕತೆ ಇದೆ. ಕನ್ನಡದಲ್ಲಿ ಬೆರಳೆಣಿಕೆಯಷ್ಟು ಕವಿಯತ್ರಿಯರು ಮಾತ್ರ ಇಂಥ ಪ್ರಯತ್ನದಲ್ಲಿ ತೊಡಗಿರುವುದನ್ನು ಕಾಣುತ್ತೇವೆ. ಅಂಥ ನಿಲುವನ್ನು ಕೆಲವು ಕವನಗಳಲ್ಲಿ ಗುರುತಿಸಬಹುದು.

ಭಾವಗಳನ್ನು ಹರಳುಗಟ್ಟಿಸುವಲ್ಲಿ ಶಬ್ದಗಳ ಬಿಡಿಸುವಲ್ಲಿ ಇವರು ಸಮರ್ಥರು: 'ಕಾವಿಭಾವಗಳ ಕೊಟ್ಟ ಹೊರಟ ಜೀವದ ಸರಸಿನೊಳಗೂ, ಬಿರು ಗಾಳಿಯಲೆ ಕೆರಳಿ,' 'ದಣಿದ ಬೆಳಕನ್ನೇ ಕತ್ತಲಿಗೊಪ್ಪಿಸಿಕೊಂಡು, ಶತಪಥಿಸಿ ಸೋತಿದ್ದೇವೆ,' 'ಗಾಜು ನೀರಿನ ಗಂಗೆಯಂಗದಲಿ ಎದ್ದ ಹೆಣ್ಣ ರೂಪದು ಮೈಯ ಪಡೆದು,' ಜೋಲು ಮುಖದ

ಜೂಲುನಾಯಂತೆ ಸೆರಗ ಹಿಡಿದೇ ಸುತ್ತಿಕೊಂಡು,' 'ಕಪ್ಪು ಕಣ್ಣಿನ ಮೋಡದಲಿ ಮಳೆಯೊಡೆದು ಧುಮುಕುವುದು ಜೋಗ ಜಲಪಾತ!' – ಕವನಗಳ ಉದ್ದಕ್ಕೂ ಇಂತಹ ಸುಂದರ ಸಾಲುಗಳು ಕಾಣುತ್ತವೆ. ಕವನಗಳು ದೀರ್ಘವಾದಾಗ ಭಾವ ಲಯಗಳ ನಡೆ, ತಟ್ಟಕ್ಕನೆ ಬರುವ ಶ್ರುತಿಗೊಡದ ಪದಗಳು ಹಾಗೂ ಮುರಿತದಿಂದಾಗಿ, ಒಮ್ಮೊಮ್ಮೆ ತಪ್ಪುವುದುಂಟು, ತೀವ್ರತೆ ಜಾಳಾಗುವುದುಂಟು. ರಾಜಕೀಯ ಪ್ರಜ್ಞೆ ದಟ್ಟವಾದ ಅನುಭವವಾಗಿ ಮಿಡಿಯುವುದಕ್ಕೆ ಬದಲು ನಡುನಡುವೆ ಶಬ್ದ ಮೋಡಿಯಲ್ಲಿ ತೇಲಿಸಿ ಬಿಡುವುದುಮಟು.

ಶಂತನು, ಅಕ್ಟೋಬರ್ ೩೧, ವಾರ್ಡಿನ ಕಿಟಕಿಯಂತಹ ಕವನಗಳು ಮನಸ್ಸಿನಾಳದ ಮಬ್ಬುಗತ್ತಲೆಯ ಅಸ್ಫುಟ ವಿಷಾದದ ಸ್ತರಗಳನ್ನು ಕಲಕುತ್ತವೆ. ವ್ಯಕ್ತಿ ವ್ಯಕ್ತಿಗಳ ಸಂಬಂಧ ತೀರ ವೈಯಕ್ತಿಕ ಅನುಭವ, ಅನಿಸಿಕೆಗಳಲ್ಲಾಗಲೀ, ಇಲ್ಲವೆ, ವೇದನೆಯ ಏರಿಳಿತಗಳಿಗೆ ದನಿಗೊಡುವಲ್ಲಾಗಲೀ ನಗೆಯ ಸಹನೆಯನ್ನೂ, ಲವಲವಿಕೆಯನ್ನೂ ತೋರುವುದು ಇವರ ವಿಶಿಷ್ಟ ಗುಣವಾಗಿ ಸಮಾಧಾನ ಮೂಡಿಸುತ್ತದೆ. ಒಂದೆರಡು ಅಪವಾದಗಳನ್ನು ಬಿಟ್ಟರೆ ಮಹಿಳೆಯರು ಕವನದ ರೂಪದ ಬಗ್ಗೆ ಏಕೆ ಚಿಂತಿಸುವುದಿಲ್ಲ. ಪ್ರಯೋಗ ನಡೆಸುವುದಿಲ್ಲ ಎಂಬುದು ಆಶ್ಚರ್ಯವುಂಟು ಮಾಡುತ್ತದೆ. ವಸ್ತು ಭಾವಗಳಷ್ಟೆ ಕಟ್ಟಣೆಯೂ ಕವನದಲ್ಲಿ ತುಂಬ ಪರಿಣಾಮ ಬೀರುತ್ತದೆ. 'ಅಮೀಬ' ದಂತಹ ಕವನದ ವಸ್ತು ಎಷ್ಟೊಂದು ಆಯಾಮಗಳನ್ನು ಪಡೆದು ಒತ್ತಾಗಿ ಸೂಚ್ಯರೂಪ ತಳೆಯಬೇಕಾದ್ದು ವ್ಯವಧಾನದ ಕೊರತೆಯಿಂದ, ಕೊನೆಕೊನೆಗೆ ಅತಿ ಸ್ಪಷ್ಟತೆಯಿಂದ ತೆಳುವಾಗಿ ಬಿಡುತ್ತದೆ. ಹೀಗೆ ಹಲವು ಸಂಕೋಚಗಳ ನಡುವೆಯೂ ಡಾ. ವಿಜಯಾ ಸುಬ್ಬರಾಜ್ ಅವರು ತಮ್ಮ ರಚನೆಗಳಲ್ಲಿ ಹುಡುಕುಗಣ್ಣಿನ ಭರವಸೆಯನ್ನು ನೀಡುತ್ತಿರುವುದು ಸಂತೋಷದ ವಿಷಯ

–ಎಂ.ಎಚ್. ಕೃಷ್ಣಯ್ಯ

# ಅನುಬಂಧ ೪

'ವಸುಂಧರೆಯ ಪ್ರಾಯ' ವಿಜಯಾ ಸುಬ್ಬರಾಜ್ ಅವರ ಐದನೆಯ ಕವನ ಸಂಕಲನ ಕಾವ್ಯ ರಚನೆ ಹಾದಿಯಲ್ಲಿ ಬಹಳ ದೂರ ಕ್ರಮಿಸಿರುವ ಇವರಿಗೆ ಮುನ್ನುಡಿಯ ಊರುಗೋಲಿನ ಅಗತ್ಯವಿಲ್ಲ. ಆದರೆ ಮುನ್ನುಡಿ ಎಂಬ ಶಿಷ್ಟಾಚಾರದ ಬರಹಕ್ಕಿಂತ ಆತ್ಮೀಯಭಾವದ ಕೆಲವು ನುಡಿಗಳನ್ನು ಇಲ್ಲಿ ಹಂಚಿಕೊಳ್ಳಬಯಸುತ್ತೇನೆ.

ವಿಜಯಾ ಅವರು ನನಗೊಂದು ವಿಸ್ಮಯ. ಇವರು ಶ್ರದ್ಧಾಪೂರ್ಣ ಅಧ್ಯಾಪಕಿ, ಸಾಹಿತ್ಯ ಪರಿಚಾರಕಿ; ಕಥೆ, ಕವನ ಕಾದಂಬರಿ, ವಿಮರ್ಶೆ, ನಾಟಕ, ಪ್ರವಾಸ ಸಾಹಿತ್ಯ ಇತ್ಯಾದಿ ಹಲವು ಪ್ರಕಾರಗಳಲ್ಲಿ ತಮ್ಮ ಆಸಕ್ತಿಯನ್ನು ದುಡಿಸಿಕೊಳ್ಳುತ್ತಿರುವವರು. ಇದರ ನಡುವೆ ಮಹಿಳಾ ಸಂಘಟನೆ, ಸಾಹಿತ್ಯ ಕಮ್ಮಟಗಳಲ್ಲಿ ಕ್ರಿಯಾತ್ಮಕವಾಗಿ ತೊಡಗಿಸಿಕೊಂಡವರು. ಈ ಎಲ್ಲಾ ಚಟುವಟಿಕೆಗಳ ಜೊತೆಗೆ ಕುಲೀನ ಗೃಹಿಣಿ. ಇಷ್ಟೆಲ್ಲ ಕಾರ್ಯಗೌರವಗಳನ್ನೂ ಒಂದೇ ನೆಲೆಯ ಆಸಕ್ತಿ ಕ್ಷೇತ್ರಗಳಂತೆ ಪರಿಭಾವಿಸಿ ತಮ್ಮ ಸಮಯವನ್ನು ದುಡಿಸಿಕೊಳ್ಳುತ್ತಿರುವವರು. .ಇದು ನನ್ನ ವಿಸ್ಮಯಕ್ಕೆ ಕಾರಣವಾದ ಅಂಶ. ಇವರ ಆಸಕ್ತಿಯ ತೀವ್ರತೆ ಹಾಗೂ ಬದ್ಧತೆಗೆ ಒಂದು ಉದಾಹರಣೆಯನ್ನು ಇದೇ ಸಂಕಲನದಿಂದ ಕೊಡಬಯಸುತ್ತೇನೆ. 'ಅಡಿಗೆ ಮನೆ' – ಕವನದಲ್ಲಿ.

**ಅಡಿಗೆ ಮನೆ ನನ್ನ ಪುಟ್ಟ**
**ಜಗತ್ತು ಕನಸಿನ ಗೋಳ**
**ಅರಳಿನಿಲ್ಲುವ ಆಸೆಗಳ**
**ಹೂ ದೋಟ**
**ಕಿಲಕಿಲನೆ ನಗುವ**
**ಭಾವತರಂಗ ರಂಗ**

ಅಡಿಗೆ ಮನೆಗೂ ಹೆಣ್ಣಿಗೂ ಅಂಟಿದ ನಂಟು ನಮ್ಮ ಭಾರತೀಯ ಸಾಮಾಜಿಕ ಸಂದರ್ಭದಲ್ಲಿ ಒಂದು ನಂಬಿಕೆಯಾಗಿ ಬೆಳೆದ ಬದುಕಾಗಿದೆ. ಸ್ತ್ರೀವಾದಿ ನೆಲೆಯಲ್ಲಿ ಇದು ಸಾಕಷ್ಟು ಚರ್ಚೆಗೆ ಒಳಗಾದ ಅನುಭವ ಪ್ರಪಂಚ. ಆದರೆ ಇಲ್ಲಿ ವಿಜಯಾ ಅವರು ಅಡಿಗೆ ಮನೆಯನ್ನು ಕಲಾತ್ಮಕ ಭಾವದಲ್ಲಿ ಇತ್ಯಾತ್ಮಕ ದೃಷ್ಟಿಯಲ್ಲಿ

ಅನುಭವಿಸಿದ್ದಾರೆ. ಅಡಿಗೆ ಮನೆ ಹೆಣ್ಣಿನ ಸ್ವಾತಂತ್ರ್ಯ ಹರಣದ ಸೆರೆಬೀಡಾಗದೆ ಕುಣಿವ ಹೆಜ್ಜೆ ಗತಿಯ ರಂಗಶಾಲೆಯಾಗಿ ಸೃಜನಕರ್ಮದ ಕಮ್ಮಟ ಭೂಮಿಯಾಗಿ ಇವರ ಅನುಭವಕ್ಕೆ ಒಳಗಾಗಿದೆ.

**ಇದೇ ನನ್ನ ಕರ್ಮಭೂಮಿ**
**ನನ್ನ ಇದರ ನಡುವೆ**
**ಬೆಸುಗೆ ಮೀರಿ ಮಾತು ಸಂಗೀತ**
**ಈ ಭೂಮಿ ಕರ್ತಾರನ ಕಮ್ಮಟ**
**ಅದರಲ್ಲಿ ನಡೆಯುತ್ತದೆ**
**ನನ್ನ ಕನಸಿನಾಟ**
**ಉಣಿಸುತ್ತದೆ ಇದು ನನಗೆ**
**ರಸಕಾವ್ಯದ ಊಟ**
**ಕೆರಳುತ್ತವೆ ರುಚಿಗಳು**
**ಹೊಮ್ಮುತ್ತವೆ ರಸಗಳು**
**ಅರಳುತ್ತವೆ ಕವಿತೆಗಳು**
**ಉಲಿಯುತ್ತವೆ ಭಾವಗಳು**

ಇದು ವಿಜಯಾ ಅವರ ವ್ಯಕ್ತಿ ವಿಶಿಷ್ಟತೆ, ಸಿದ್ಧಾಂತಗಳಿಗೆ ಬದ್ಧವಾಗಿ ಬರಹವನ್ನು ಕಟ್ಟುವುದಕ್ಕಿಂತ ಅನುಭವದ ಪ್ರಾಮಾಣಿಕ ಪರಿಭಾವನೆಗೆ ಸ್ಪಂದಿಸಿದಾಗ ಈ ರೀತಿಯ ರಚನೆಗಳ ಮುಖವನ್ನು ನಾನು ಇಲ್ಲಿ ಸಮರ್ಥಿಸಿ ಮಾತನಾಡುತ್ತಿಲ್ಲ; ವಿಜಯಾ ಅವರ ಕಾರ್ಯಕ್ಷೇತ್ರಗಳಲ್ಲಿನ ಬದ್ಧತೆಯ ಹಿಂದಿನ ಕಾಳಜಿಪೂರ್ಣ ಸೃಜನಶೀಲ ವ್ಯಕ್ತಿತ್ವವನ್ನು ಗುರುತಿಸುವುದಕ್ಕಾಗಿ ಮಾತ್ರ ಕೊಟ್ಟುಕೊಂಡ ಉದಾಹರಣೆ ಇದು ಅಷ್ಟೆ. ಈಗ ಇದೇ ಪ್ರಶ್ನೆಯ ಜಾಡು ಹಿಡಿದಂತೆ ಇವರ ಇನ್ನೆರಡು ಕವನಗಳನ್ನು ಇಲ್ಲಿ ಪ್ರಸ್ತಾಪಿಸುವುದು ಸೂಕ್ತ. ಬುದ್ಧ ಹಾಗೂ ಯಶೋಧರೆಯ ಬದುಕಿಗೆ ಸಂಬಂಧಿಸಿದಂತೆ ನಮ್ಮಲ್ಲಿ ಕಥೆ ನಾಟಕ ಕವನಗಳ ರಚನೆ ಸಾಕಷ್ಟು ಬಂದಿವೆ. ವಿಜಯಾ ಅವರೂ ಈ ಸಂಕಲನದ ಎರಡು ಕವನಗಳಲ್ಲಿ ಈ ಸಂಬಂಧವಾದ ತರ್ಕವನ್ನು ಮುಂದು ಮಾಡಿಕೊಂಡಂತೆ ಪ್ರಶ್ನೆಗಳನ್ನು ಎತ್ತಿದ್ದಾರೆ. 'ನಿನಗರ್ಥವಾಗಲಿಲ್ಲ' ಕವನದಲ್ಲಿ ಈ ಸಾಲುಗಳನ್ನು ನೋಡಿ.

**ಕಪಿಲವಸ್ತುವಿನರಮನೆಯ**
**ಗೋಡೆ ಕಿಟಕಿಗಳ**
**ಬಿರುಕುಗಳಲ್ಲಿ ಬಿಕ್ಕುಗಳು**
**ಅನುರಣಿಸುತ್ತಿವೆ**
**ನೆನಪು ಚೂರಿಗಳೂ ಇರಿಯುತ್ತಿವೆ**
**ಕತ್ತಲು ರಾತ್ರಿಗಳು**
**ಕನವರಿಸುತ್ತಿವೆ ಹಗಲುಗಳ**

ಇಂದು ಯಶೋಧರೆಯ ಬಾಳಿನ ಒಳಸಂಕಟ. ಅವಳ ನೋವಿನ ಸಾಧನೆಯನ್ನು ಹಾಗೂ ಗೂಢತೆಯನ್ನು ಈ ಸಾಲುಗಳು ಸಮರ್ಥವಾಗಿ ವ್ಯಂಜಿಸಿವೆ. ಈ ಸಾಲುಗಳು ದೀಪದ ಕೆಳಗಿನ ಕತ್ತಲನ್ನು ನೆನಪಿಸುತ್ತಿವೆ. ಬೆಳಕಿನಂಗಳದಲ್ಲಿ ಕಂಡದ್ದನ್ನು ಎಲ್ಲರೂ ಹೇಳುತ್ತಾರೆ. ಆದರೆ ಅಷ್ಟೇ ಸೂಕ್ಷ್ಮವಾಗಿ ದೀಪದ ಬುಡದ ಕತ್ತಲಿನ ಬಗ್ಗೆಯೂ ಕಾಳಜಿ ಸಂಪನ್ನ ಭಾವದಲ್ಲಿ ಮಿಡಿಯುವುದು ಮುಖ್ಯವಾಗುತ್ತದೆ. ಇವರ ಕಾವ್ಯದಲ್ಲಿ ಇಂಥ ನೋಟಗಳು ವಿಶೇಷ ಗಮನ ಸೆಳೆಯುತ್ತವೆ. ಆದರೆ ಈ ನೋಟ ಮೆಚ್ಚುಗೆಗೆ ಪಾತ್ರವಾದಷ್ಟೇ ಪ್ರಶ್ನೆಗಳನ್ನೂ ಎತ್ತುತ್ತದೆ. ಇದೇ ಭಾವದ ಇನ್ನೊಂದು ಕವನ 'ಸದ್ದುಗಳ ಬೆನ್ನಲ್ಲಿ'ಯ ಕೆಲವು ಸಾಲುಗಳು ಹೀಗಿವೆ–

**ಹದ್ದುಗಳು ಕದ್ದ ನಿದ್ದೆ**
**ಅಸ್ಪಷ್ಟ ಕನಸುಗಳ**
**ಮುಳ್ಳನಿರಿತದ ನೋವು**
**.....................**
**ಭೀತಿಯಿರಿತದ ಮೌನ**
**ರಾತ್ರಿಯಲಿ ಇದ್ದಕಿದ್ದಂತೆ**
**ಸದ್ದುಗಳ ಗುದ್ದು**
**.....................**
**ಇಂಥ ಸದ್ದುಗಳು**
**ಕಾಡುವ ನಿದ್ದೆಗಳು**
**ಆ ಯಶೋಧರೆಗೆ ಇರಬಾರದಿತ್ತೇ?**

ಇಂಥ ಪ್ರಶ್ನೆಗಳು ಎರಡು ನೆಲೆಯಲ್ಲಿ ವಿಷಯವನ್ನು ಚಿಂತನೆಗೆ ಹಚ್ಚುತ್ತವೆ. ಪ್ರಶ್ನೆಗಳೇ ಪ್ರಶ್ನಾರ್ಹವೂ ಆಗಬಹುದು. ಸದ್ದುಗಳ ಬೆನ್ನಲ್ಲಿ ಕವನದಲ್ಲಿ ಅನುಭವ ಜಗತ್ತಿನಲ್ಲಿ ತುಂಬಿರುವ ಹಿಂಸೆ ಕ್ರೌರ್ಯ ಕೋಮುದಳ್ಳುರಿಯ ಭಯಾನಕತೆ ಪರಿಸರ ನಾಶದ ವಿಕಾರತೆ ಇತ್ಯಾದಿಗಳ ನೆಲೆಯಲ್ಲಿ ತುಂಬಾ ಸೂಕ್ಷ್ಮವಾಗಿ ವ್ಯಕ್ತಿಯ ಸಂಕಟವನ್ನು ಬಿಚ್ಚಿಡುತ್ತಿದೆ. ಕೊನೆಯಲ್ಲಿ ಸಾಲುಗಳು ಥಟ್ಟನೆ ಬುದ್ಧನ ಸಂಸಾರ ತ್ಯಾಗದ ಕಡೆಗೆ ಎಸೆದ ಕವಣೆ ಕಲ್ಲುಗಳಂತಿವೆ. ಸಿದ್ಧಾರ್ಥನ ಬದುಕಿನಲ್ಲಿ ಸಂಸಾರ ತ್ಯಾಗವೆಂಬುದು 'ತ್ಯಾಗ' ಎಂಬ ಪರಿಭಾವನೆಗೆ ಒಳಗಾಗುವುದು ಆ ಗುರುವಿನ ಬುದ್ಧ ಸ್ಥಿತಿಯ ಪರಿವೇಶದಲ್ಲಿ. ಆದರೆ ಯಶೋಧರೆಯ ನೆಲೆಯಲ್ಲಿ ನಿಂತಾಗ ಅದು ಪ್ರಶ್ನಾರ್ಹವೇ! ಇನ್ನೊಂದು ಮಗ್ಗುಲಿಗೆ ಕುರುಡಾದಂತೆ. ಸಿದ್ಧಾರ್ಥ ಬುದ್ಧನಾಗಿರುವುದು ಜಗತ್ತಿನ ದೃಷ್ಟಿಯಲ್ಲಿ ಬೆಳಕಿನ ದಾರಿಯಾದರೆ, ಯಶೋಧರೆಯ ಪರಿಮಿತಿಯಲ್ಲಿ

**ಯಾರ ನೋವಿಗೋ ನುಲಿದು**
**ಮೋಕ್ಷ ಬೇಕೆಂದೊಲಿದು**
**ಮುದ್ದು ಕಂದನ ಪ್ರೀತಿಗೆ**
**ಎರವಾಗಬಹುದೇ ಹೀಗೆ!**
**.....................**
**.....................**
**ನಿನ್ನ ನೆಚ್ಚಿನ ಮೆಚ್ಚಿನ**
**ಜೀವಿಗಳ ವಂಚಿಸಿ**
**ಪರಾರಿಯಾದದ್ದು**
**ನನಗೂ ಅರ್ಥವಾಗುವುದಿಲ್ಲ!**

ಈ ಪ್ರಶ್ನೆಗೆ ಪರಿಮಿತಿ ಇರುವಷ್ಟೇ ನೈತಿಕ ಬಲವೂ ಇದೆ. ಸಹಜವಾಗಿ ಹೆಣ್ಣಿನ ಒಳ ಸಂಕಟವನ್ನು ಜವಾಬ್ದಾರಿಯ ಭಾರದೂರವನ್ನು ಪರಿಭಾವಿಸಿ ಹುಟ್ಟಿಕೊಂಡ ಪ್ರಶ್ನೆ ಇದಾಗಿದೆ;

ಇದರ ಎಲ್ಲ ಸ್ಥಿತಿ ಸಂಕಟಗಳನ್ನು ಗೌರವಿಸುತ್ತಲೇ ಒಂದು ವಿಚಾರ ನಮ್ಮೆದುರು ನಿಲ್ಲುತ್ತದೆ. ನಿರಾಕರಿಸುವುದು ಎಷ್ಟು ಸರಿ? ಕಾವ್ಯದಲ್ಲಿ ತರ್ಕ ಮಾತನಾಡತೊಡಗಿದಾಗ ಇಂಥ ಪ್ರಶ್ನೆಗಳು ಹುಟ್ಟುತ್ತವೆ. ಕಾವ್ಯ ತರ್ಕದಾಚೆಗಿನ ಅನುಭೂತಿ.

'ಒಂದು ಸಂವಾದ'– ಬುದ್ಧ ಆನಂದರ ನಡುವೆ ನಡೆದ ಮಾತುಕತೆ. ಇತ್ತೀಚಿನ ಮನುಷ್ಯ ಪ್ರಪಂಚದ ಎಲ್ಲ ವಿದ್ಯಮಾನಗಳ ಹಿನ್ನಲೆಯಲ್ಲಿ ಬುದ್ಧನ ಮರು ಆಗಮನವನ್ನು ಆಶಿಸುವ ಕವನ. ಜಗತ್ತಿನ ಕಣ್ಣೀರಿನ ಕಡೆಗೆ ಅಂತಃಕರಣ ಕಡಲುಕ್ಕಿಸಿ ಹರಿವ ಬುದ್ಧಪ್ರಜ್ಞೆಯನ್ನು ವಿಜಯಾ ಇಲ್ಲಿ ಸೊಗಸಾಗಿ ನಿರೀಕ್ಷಿಸಿದ್ದಾರೆ. ಆನಂದನ ಕಳವಳ ತಲ್ಲಣ ಬೇಗುದಿ ತುಂಬಿದ ಮಾತುಗಳಿಗೆ ಬುದ್ಧಕೊಡುವ ಉತ್ತರ ಜಗತ್ತಿನಲ್ಲಿ ಸದಾ ಸುಖ ಶಾಂತಿ ಬಯಸುವ ಹಾರೈಕೆಯ ಭಾವದ್ದು. 'ಬರುವೆಯಾದರೆ ಬಾ ಗಾಂಧಿ'ಯೂ ಇದೇ ಭಾವದ ಮತ್ತೊಂದು ಕವನ.

ವಿಜಯಾ ಅವರ ಕಾವ್ಯ ಹಲಸಿನ ಹಣ್ಣನ್ನು ಹಿಡಿದು ಸೊಲೆ ಬಿಡಿಸಿ ತೊಳೆಯೊಳಗಿನ ಬೀಜವನ್ನೂ ತೆಗೆದು ತೊಳೆಯನ್ನು ಸೀಳು ಮಾಡಿ ತಿನ್ನಲು ಬಾಯಿಗಿಟ್ಟ ರೀತಿಯದು. ಹಾಗೆಯೇ ಇವರ ಕಾವ್ಯದಲ್ಲಿನ ಸ್ತ್ರೀಪರ ನಿಲವು ಉಗ್ರಭಾವದ ವಾದಮಂಡನೆ ಜಾಡಿನದಲ್ಲ, ಪಿಸುಮಾತಿನಲ್ಲಿ ಅನುನಯಿಸಿ ಕೇಳುವ ಆಪ್ತಭಾವದ ಆರ್ದ್ರ ಸ್ವಭಾವದ್ದು.

**ಕೋಟಿ ಕಣ್ಣುಗಳಲ್ಲಿ**
**ಕಾರಿರುಳು ಕವಿದಿರಲು**

ಎದೆಯ ಬತ್ತಿಗಳುರಿದು
ಬೆಳಕು ಮೂಡುವುದೇನು?

ಹೀಗೆ ಇವರ ಕಾವ್ಯದಲ್ಲಿ ವಸ್ತುಸ್ಥಿತಿಯನ್ನು ಕುರಿತು ವಿಸಂಗತಿಗಳ ವಿಚಾರಗಳ ಪ್ರಶ್ನೆಯಾಗಿ ಮೂಡುತ್ತದೆ. ಉತ್ತರದ ಹುಡುಕಾಟಕ್ಕಿಂತ ಉತ್ತರವನ್ನು ಮುಂದಿಟ್ಟುಕೊಂಡೇ ನಡೆಯ ಬಗೆಗೆ ಆಲೋಚಿಸುವಂತೆ ಒತ್ತಾಯಿಸುತ್ತದೆ. ಇತ್ತೀಚಿನ ಬದುಕಿನಲ್ಲಿ ನಿತ್ಯ ರಾಮಾಯಣ ತಪ್ಪಿದ್ದಲ್ಲ. ಸೋಲುಗೆಲವುಗಳಿಗಿಂತ ಸಾವು ನೋವಿನ ಸಂಕಟಾನುಭವಗಳು ನಿತ್ಯದ ವಿದ್ಯಮಾನಗಳಾಗಿವೆ. ಗಂಜಿಗೂ ಗತಿಯಿಲ್ಲದ ಬದುಕಿನ ಎದುರು ಗೆದ್ದವರ ವಿಜಯೋತ್ಸವ ಗೆಲುವಿನ ಆಚರಣೆಯಾಗಿ ಆನಂದದ ಭಾಗವಾಗದೆ ಭಯದ ಕರಿ ನೆರಳ ಬಲೆ ಬೀಸಿದೆ.

**ಎಡೆ ಎಡೆಗೆ ಹೊದರೆದ್ದ**
**ಹುತ್ತಗಳ ಭಯದಲ್ಲಿ**
**ಸಾವಿನೂಟದ ನೆನಪು**
**ಬತ್ತಲೂ ಕತ್ತಲೂ**
**ಕೋಟೆಗಳ ಸೆರೆಯಲ್ಲಿ**
**ಉಸಿರುಗಟ್ಟುತ್ತ ಸಾಯುತಿರುವಲ್ಲಿ**
**ಯಾವ ಗೆಲುವಿಗೆ ಈಗ**
**ವಿಜಯದುತ್ಸವದ ಉತ್ಸಾಹ**
**ದಾಳಿ ಮಾಡಿದೆ ಒಂದೇ ಭಯದ ಭಾವ**

ಹೀಗೆ ಇವರ ಕವಿಭಾವ ಸುತ್ತಲಿನ ಸಂದಿಗ್ಧಗಳಿಗೆ ಅಂತಃಕರಣ ತೆರೆದ ಆಪ್ತಭಾವದಲ್ಲಿ ಸ್ಪಂದಿಸಿದೆ. ಮದರ್ ಥೆರೇಸ ಅವರನ್ನು ಕುರಿತು ಇವರು ಬರೆದ ಪದ್ಯ ವ್ಯಕ್ತಿ ಚಿತ್ರಣದ ಸುಂದರ ಭಾವಗೀತೆ. ಮಾತು ಮಾತು ರೂಪಕದ ಪರಿಭಾಷೆಯಲ್ಲಿ ಬೆಳೆದು ಥೆರೇಸಾ ಅವರ ವ್ಯಕ್ತಿತ್ವ ಸೌಂದರ್ಯವನ್ನು ಸೊಗಸಾಗಿ ಚಿತ್ರಿಸಿದೆ. ಆದರೆ ಕೊನೆಯ ಪದ್ಯಭಾಗದ–

**ಅನಾಥ ಆಂದೋಲನದ**
**ಎದೆಯಲ್ಲಿ ಮೂಡಿ ನಿಂತಿದೆ**
**ಮದರ್‌ಥೆರೇಸಾ ಚಿತ್ತ ಚೇತನ**
**ನೋಟ ಮಾಟಗಳಲ್ಲಿ**
**ನೆಲೆಗೊಂಡಿದೆ**
**ದಿವ್ಯಕರುಣೆಯ ನವವಿಧಾನ**
**ನೊಂದು ಬೆಂದವರೆದೆಯಲ್ಲಿ**
**ನಡೆದಿದೆ ಈ ಮನುಜ**
**ದೈವದ ಆರಾಧನಾ**

ಸಾಲುಗಳು ವಾಚ್ಯದ ಜಾಡಿಗೆ ಬಿದ್ದು ಕಾವ್ಯದ ಸೌಷ್ಠವಕ್ಕೆ ಕುಂದುಂಟು ಮಾಡಿವೆ. ವಿಜಯಾ ಅವರ ಕಾವ್ಯದ ಗೆಲವು ಸೋಲಿನತ್ತ ಮುಖ ಮಾಡುವುದು ಇಂಥ ಮಾತುಗಾರಿಕೆಯ ವಾಚಕಗಳನ್ನು ಹಾಗೂ ಸ್ವಗತಾತ್ಮಕ 'ನಾನು'ವನ್ನು ಅತಿಯಾಗಿ ಪ್ರಯೋಗಿಸುವುದರಲ್ಲಿ. ಸಹಸ್ರಮಾನದ ಶಿಶುಪುರುಷ. ಸಂಕ್ರಾಂತಿ ಗೀತೆ, ನೆನಪಾಗದೆ ದೊರೆ ಕವನಗಳು ಅಂತಃಕರಣದ ಆರ್ದ್ರಭಾವ ತುಂಬಿಕೊಂಡು ಸುಂದರ ಭಾವಗೀತೆಗಳಾಗಿವೆ. ಭಾವತೀವ್ರತೆಯ ಪರಿಣಾಮವಾಗಿ ರಚನೆಯಲ್ಲಿ ಲಯವೈವಿಧ್ಯ ಸಾಧಿತವಾಗಿದೆ. ಇಲ್ಲಿ ಉಲ್ಲೇಖಿಸಬಹುದಾದ ಮತ್ತೊಂದು ಪದ್ಯ 'ಪುತಿನ ನೆನಪಿನಲ್ಲಿ'. ಪು.ತಿ.ನ ಅವರ ಕೃಷ್ಣ ಪ್ರೇಮದ ವ್ಯಕ್ತಿತ್ವವನ್ನು ಸೊಗಸಾಗಿ ಪರಿಭಾವಿಸಿದ ಅಭಿವ್ಯಕ್ತಿಯಿದು.

**ನೆಲಕಂಟದ ಬೇರು**
**ದಿವದತ್ತಿದೆ ದೃಷ್ಟಿಯ ತೇರು**
**ಅಡಿ ಅಡಿಗೂ ಆಲೋಕಿತ**
**ಪಥ ಸಾಗಿದೆ ಆನಂದದ ನೆಲೆಗೆ**
**ಮನ ಮುಗುಳಿನ**
**ತುಟ ತೆರೆದಿದೆ ನವ**
**ಶಾರದ ಸೊಗಕೆ**

..................

**ಗರಿಗೆದರುವ ಋತುಹಾಸಕೆ**
**ನಲಿದಾಡಿದೆ ಬಗೆ ನವಿಲು**
**ಬ್ರಹ್ಮಾಂಡವ ತೆಗೆದಪ್ಪಿದೆ**
**ಇವರೆದೆಯೊಲವು**

ಪು.ತಿ.ನ ಅವರ ಜೀವನ ಹಾಗೂ ಕಾವ್ಯಜೀವನಗಳ ಸಮರಸ ಪೂರ್ಣ ದೃಷ್ಟಿ ಧೋರಣೆಗಳನ್ನು ಸುಂದರವಾಗಿ ಅನಾವರಣಗೊಳಿಸಿರುವ ಸಾಲುಗಳಿವೆ. ವಸ್ತುಸ್ಥಿತಿಯ ವಿಸಂಗತಿಗಳ ಅರಿವು ಇವರ ಬಹುತೇಕ ರಚನೆಗಳ ಧಾತುದ್ರವ್ಯವಾಗಿರುವ ವಿಚಾರವನ್ನು ಪ್ರಸ್ತಾಪಿಸಿದೆ. ಈ ವಿಸಂಗತಿಗಳಿಗೆ ಎದುರಾಗುವ ಇವರ ಭಾವ ನಿರಾಶೆಯಲ್ಲಿ ಕುಸಿದ ಮನೋಸ್ಥಿತಿಯದಲ್ಲ. ಬದಲಾಗಿ ಈ ವಿಷಮತೆಗಳನ್ನು ಗೆಲ್ಲುವ ಛಲ ಎಲ್ಲರಲ್ಲೂ ಮೂಢ ಬೇಕೆಂಬ ಅದಮ್ಯ ಹಂಬಲ ಇವರದು.

ಈ ವಿಷಮತೆಗಳನ್ನು ದಾಟುವಂತೆ ಹೊಸಬಾಳೀನ ಕನಸು ಕಾಣುತ್ತಾರೆ. ಆ ಕನಸು ಎಲ್ಲರ ಬಾಳಿಗೆ ಸುಖ ಸಂತೋಷ ತರಲಿರುವ ನಿರೀಕ್ಷೆಯಾಗಿ ಬೆಳೆಯುತ್ತದೆ. ಇವರ ಬಹುತೇಕ ಕವನಗಳ ಅಂತರಂಗದ ಆಪ್ತನುಡಿ ಇದು. ಕತ್ತಲು, ಗಾಳಿ ಇಲ್ಲದ ಸ್ಥಿತಿ, ಆಯುಧಗಳು ಸೆಣಸಾಟ ಬೆಂಕಿಯುಂಡೆ ಇತ್ಯಾದಿ ಪರಿಭಾಷೆಗಳು ವಿಷಮ ಸನ್ನಿವೇಷವನ್ನು ಚಿತ್ರಿಸಿದರೆ ಇದಕ್ಕೆ ಪರ್ಯಾಯವಾಗಿ ದೀಪ, ಗಂಧಮಾದನ ಗಾಳಿ,

ನಕ್ಷತ್ರ ಮಲ್ಲಿಗೆ ಫೀನಿಕ್ಸ್ ಇತ್ಯಾದಿ ಪರಿಭಾಷೆಗಳು ಹೊಸಬಾಳಿನ ಹಂಬಲದ ಬಿಂಬರೂಪಗಳಾಗಿ ಒಡಮೂಡಿವೆ. 'ಕಿತ್ತುಹೋದ ತಾಳಿ ಸರ' – ಇಡೀ ಪದ್ಯ ವ್ಯಂಗ್ಯಾತ್ಮಕ ಭಾವದಲ್ಲಿ ಹರಿದಿದೆ. ಸಂಕಲನದ ಹಲವು ಕವನಗಳು ಸಖಿನ ನೆನಪಿನಲ್ಲಿ ನಿರೀಕ್ಷೆ ಪ್ರತೀಕ್ಷೆಗಳ ಒಳಸುಳಿಯಲ್ಲಿ ಬೆಂದ ಮನಸ್ಸಿಗೆ ಬಿಂಬರೂಪಿಗಳಾಗಿ ಒಡಮೂಡಿವೆ. 'ಇದೇ ಲಕ್ಷ್ಮಣ ರೇಖೆಯ ಪರಿಧಿಯಲಿ ನನ್ನ ಬದುಕ ಬಿಡು' – ಎಂಬ ವಿಷಣ್ಣಭಾವದ ಮೊರೆ ಒಂದೆಡೆಯಾದರೆ,

**ಛಲವ ಬಿಡೆನು ಪ್ರೀತಿಗಾಗಿ**
**ಬೆಂಕಿ ತುಳಿವೆ ಸಂಗಕಾಗಿ**
**ಮಡಿವೆನೆಂಬ ಮಾತು ಬೇಡ**
**ಸೆಣಸಾಡುವೆ ನಿನ್ನ ಕೂಡ**

ಎಂಬ ಧೃಡ ಮನದ ಅಭಯಭಾವ ಮತ್ತೊಂದೆಡೆ ಮೊಳಗಿದೆ. ಮಾತಿಲ್ಲದ ಮೌನದಲ್ಲಿ ನೂರು ಕವಿತೆ ಹಣತೆಗಳನ್ನು ಉರಿಸಿದ ಈ ಸಖ್ಯ

**ಮಾಯವಾಗದಂತೆ ಮತ್ತೆ**
**ಬಂಧಿಸಿಡುವೆ ಒಲವಿನೆಳೆಯಲಿ**
**ನೋಡ ನೋಡುತ**
**ಕಳೆವ ಯುಗಗಳ**
**.........**
**ಬಾರದಿರಲಿ ಬಳಿಗೆ ಬನ್ನ**
**ಸಾವಾಗದಿರಲೋ ವಿರಹ ನಿನ್ನ**

ಎಂಬ ನೀಳ ನಿರೀಕ್ಷೆಯುಲಿ ಭಾವಧಾಳದಲ್ಲಿ ಅನುರಣಿತವಾಗುವ ಸ್ವರಮೂಲವಾಗಿದೆ.

**ತುಂಬಿದೆನ್ನೆದೆ ಕಾಡಕತ್ತಲು**
**ಹರಿದು ಕಿರಣಗಳುದಿಸಿ ಬರಲಿ**
**ಸುಪ್ರಭಾತವೇ ಎನ್ನದಾಗಲಿ**
**ಜೀವ ಕುಸುಮವು ನಿನ್ನದಾಗಲಿ**

ಬತ್ತಿ ಸುಟ್ಟುಕೊಂಡೂ ಬೆಳಕ ನೀಡುವಂತೆ ಪ್ರೀತಿಸಿದ ಮನಸ್ಸಿನ ಸ್ಥಿತಿ. ನೋವು ಒಳಗನ್ನು ಸುಟ್ಟರೂ ಪ್ರೀತಿಸಿದ ಜೀವದ ಬಗ್ಗೆ ಹರಿವ ಒಲವಿನ ಹಾರೈಕೆಯ ಮಹಾಪೂರ ಅದಮ್ಯವಾದದ್ದು.

ಒಂದು ಓದಿಗೆ ದಕ್ಕಿದ ಅನುಭವದ ಚಪ್ಪರಿಕೆಗಳನ್ನು ಇಲ್ಲಿ ಆತ್ಮೀಯವಾಗಿ ನಿವೇದಿಸಿದ್ದೇನೆ. ಕವಿಯತ್ರಿ ವಿಜಯಾ ಅವರ ಕಾವ್ಯ ಕೃಷಿಯ ಬೆಳೆ ಕನ್ನಡ ಸಹೃದಯ ಪ್ರಪಂಚದಲ್ಲಿ ಆದರಣೀಯ ಸ್ಥಾನ ಗಳಿಸಿದೆ. ಈ ಕೃತಿ ಆ ಸ್ಥಾನದ ಉನ್ನತಿಕೆಯಾಗಲಿ ಎಂದು ಹಾರೈಸುತ್ತೇನೆ.

**–ಎಸ್.ಜಿ. ಸಿದ್ಧರಾಮಯ್ಯ**

# ಅನುಬಂಧ ೫

ಡಾ. ವಿಜಯಾ ಸುಬ್ಬರಾಜ್ ಬೆಂಗಳೂರಿನ ಪ್ರತಿಷ್ಠಿತ ಎಂ.ಇ.ಎಸ್. ಕಾಲೇಜಿನ ಕನ್ನಡ ಪ್ರಾಧ್ಯಾಪಕಿ, ಆಸ್ಖಲಿತವಾಣೀಯ ಉತ್ತಮ ವಾಗ್ಮಿಯಾಗಿ ಹಲವು ಕೃತಿಗಳ ಲೇಖಕಿ. ಅವರ ಇದುವರೆಗಿನ ಸಾಹಿತ್ಯ ಸಾಧನೆಯ ಸೃಜನ ಸಾಮರ್ಥ್ಯದ ಮುಡಿಯ ಮಾಣಿಕ್ಯವಾಗಿ ಹೊರ ಬರುತ್ತಿರುವ ಈ 'ಹಾಡೇನ ಪಾಡೇನ' ಸಂಕಲನ ಕುರಿತು ಕೆಲವು ಮಾತುಗಳನ್ನು ನಾನು ಹೇಳಬೇಕೆಂಬ ಅಪೇಕ್ಷೆಗೆ ಸ್ಪಂದಿಸಿ ಇಲ್ಲಿ ನನ್ನ ಭಾವನೆಗಳನ್ನು ಹರಳುಗೊಳಿಸಿದ್ದೇನೆ. ನನ್ನ ಈ ಅಭಿಪ್ರಾಯಗಳು ಈ ಸಂಕಲನದ ಮೊದಲ ಓದಿನ ತಕ್ಷಣದ ಪ್ರಾಮಾಣಿಕ ಅನಿಸಿಕೆಗಳೂ ಹೌದು.

ಈ ಸಂಕಲನದ ಎಲ್ಲ ಕವನಗಳ ಪ್ರಾಯೋಗಿಕ ವಿಮರ್ಶೆ ಮಾಡುವ ಉತ್ಸಾಹದ ಪ್ರತಿಕ್ರಿಯೆಯನ್ನು ನಿಯಂತ್ರಿಸಿಕೊಂಡು, ಪ್ರಾತಿನಿಧಿಕ ಸ್ವರೂಪದ ಕೆಲವು ಕವಿತೆಗಳನ್ನು ನಾವು ಅರ್ಥೈಸಿಕೊಂಡಿರುವ ಪರಿಯನ್ನಷ್ಟೆ ದಾಖಲಿಸುತ್ತೇನೆ.

ಎಲ್ಲ ಕಾಲದ, ಎಲ್ಲ ಭಾಷೆಯ ಸೃಷ್ಟಿ ಶಕ್ತಿಗೆ ಸವಾಲಾಗಿ ಕಾಡಿರುವ ಪ್ರಬಲ ಭಾವನೆಗಳಲ್ಲಿ ಸಾವಿಗೆ ಅಗ್ರಪಟ್ಟ, ಸಾವನ್ನು ಕುರಿತು ಅನೇಕ ಚಿಕ್ಕ ದೊಡ್ಡ ಕವಿಗಳು ಕವನಿಸಿದ್ದಾರೆ. ಡಾ. ವಿಜಯಾಸು ಅವರ ಪ್ರತಿಭೆ 'ಅರಸ ಮತ್ತು ಸಾವು' ಎಂಬ ನೀಳ್ಗವನದಲ್ಲಿ ಸಾವಿಗೆ ಮುಖಾಮುಖಿಯಾಗಿರುವ ಪರೀಕ್ಷಿತ ರಾಜನ ಭಯ ಭೀತಿ ತಲ್ಲಣ ಹಳವಂಡಗಳಲ್ಲಿ ಕಂಡರಿಸಿದೆ. ಸಾವಿನ ಸೀಮೆಯನ್ನು ಸೀಮೋಲ್ಲಂಘನ ಮಾಡುವ ಇರಾದೆಯಿರುವ ಅರಸ ತಾನು ಇನ್ನೂ ಅಮರ ಎಂಬ ಭ್ರಮೆ ಆವರಿಸಿ, ಆಮೋದ ಪ್ರಮೋದಗಳ ಪ್ರಮತ್ತತೆಯಲ್ಲಿ ಚಡಪಡಿಸುತ್ತ ಬಡಬಡಿಸುತ್ತಾನೆ. ಕಡೆಗೆ ಮೈಮನಗಳ ಸುಳಿಯಲ್ಲಿ ತನ್ನೊಳಗಿನದೇ ಆದ ತಳಮಳಕ್ಕೆ ಹೇಗೆ ಜೀವ ತೆತ್ತನೆಂಬುದನ್ನು ಪ್ರತಿಮೆ ಪ್ರತೀಕಗಳಲ್ಲಿ ಅದ್ದಿ ತೆಗೆದ ಸಾಲುಗಳಲ್ಲಿ ಬಿಡಿಸಲಾಗಿದೆ. ಮಹಾಭಾರತದಲ್ಲಿ ಬರುವ ಪ್ರಸಂಗದ ಹಿನ್ನಲೆ ತಿಳಿದಿರುವ ಹದಗೊಂಡ ಎದೆಗಳಿಗೆ ಈ ಕವನದ ಅರ್ಥ–ಪರಿಣಾಮ ತೀವ್ರತರವಾಗಿ ಆಗುತ್ತದೆ.

'ಮನೆಯೊಳಗೆ ಮನೆಯೊಡೆಯ' ಕವನದಲ್ಲಿ, ಸಮರ್ಥನಾದ ಮೇಲಾಳುವಿಲ್ಲದ ಅರಾಜಕ ಸ್ಥಿತಿಯನ್ನು ಪ್ರತಿಮಿಸಲಾಗಿದೆ. ಮುಂದಾಳುವೊಬ್ಬ ಬರುವತನಕ ಅಂಕೆಯಿಲ್ಲದೆ ನಡೆಯುವ ಸೂರೆ ಸುಲಿಗೆಯನ್ನು ಕವನದ ವ್ಯಾಖ್ಯಾನ ನಿರಪೇಕ್ಷ ಪಂಕ್ತಿಗಳು ಸಾರುತ್ತವೆ;

ಹೀಗೆ ಹೀಗೇ ಸಾಗುವುದು ಇವರ ಕಳ್ಳಾಟ
ಮನೆ ಮುರಿದು ಸೂರಿರಿದು
ಕೋಟೆ ಕೊತ್ತಲ ಬಿಡದೆ ಕೊಳ್ಳೆ ಹೊಡೆಯುತ್ತಾರೆ
ಗಿಳಿಯ ಗುಂಡಿಟ್ಟು
ಉಸಿರ ಹೊಸಕುತ್ತಾರೆ
ಜೀವ ಹೂಳುತ್ತಾರೆ
ಮನೆಯೊಡೆಯನಿಲ್ಲದ ಮನೆಯೊಳಗೆ
ನಿರಾತಂಕ ನಡೆದಿದೆ ಕಳ್ಳ ಸಂತೆ

ಇದೇ ಕವನದೊಂದಿಗೆ 'ಕಿಷ್ಕಿಂಧೆ' ಎಂಬ ಕವನವನ್ನು ಹೋಲಿಸಿ ನೋಡಬಹುದು. ಅಲ್ಲಿನ ರಾಜನಿಲ್ಲದ ರಾಜ್ಯ ಗದ್ದಲದ ಸಂತೆ, ಅರಾಜಕತೆಯ ವ್ರಣಕೆ ಮುತ್ತಿದೆ ನೊಣ, ಬರುವ ಹಕೀಮನ ನಿರೀಕ್ಷೆಯಲಿ! ಎದೆಯೊತ್ತುವ ಭಾರದ ಹೊರೆಯ! ಇಳುಹ ಬರುವವನ ಕನಸಿನಲಿ–ಎಂಬ ಸಾಲುಗಳನ್ನು ಇಲ್ಲಿಗೆ ಮೆಲಕು ಹಾಕಬಹುದು.

ಗತ ಮಹಾಭಾರತದೊಳಗಿನ ಚಿತ್ರಾಂಗದೆ ಚಿತ್ರಿಸುತ್ತಿರುವಂತೆ ಮೇಲು ಮೇಲಿನ ತೇಲು ನೋಟಕ್ಕೆ ತೋರಿದರೂ, ಓದುತ್ತ ಓದುತ್ತ ಅದು ವರ್ತಮಾನದ ರಾಷ್ಟ್ರ ನಾಯಕಿ ಪ್ರಧಾನಿ ಇಂದಿರಾಗಾಂಧಿಯ ಚಿತ್ರಣವೂ ಆಗಬಹುದೆಂದು ಮನವರಿಕೆಯಾಗುತ್ತದೆ. ಈ ಹೊಸ ಹೋಲಿಕೆ ತಗುಳ್ಚಿದರೆ ಸಾಕು, ಇಡೀ ಕವನದ ಸಾಲುಗಳು ವರ್ತಮಾನದ ಭಾರತದ ಪರಿಸ್ಥಿತಿಯನ್ನು ಹೊಮ್ಮಿಸುತ್ತ ಕಚಗುಳಿ ಇಡುತ್ತವೆ, ಮರುಚಿಂತನೆಗೆ ದೂಡುತ್ತವೆ:

ಈ ದೊಡ್ಡ ದೇಶಕ್ಕೆ
ಈ ದೇಶದ ದಡ್ಡ ಮಕ್ಕಳಿಗೆ
ದೀಪವಾಗುತ್ತಾಳೆ
ಭವಿಷ್ಯದ ರೂವಾರಿಯಾಗುತ್ತಾಳೆ
ಅವರೆಲ್ಲರ ಹಣೆ ಬರಹಕ್ಕೆ ಹೊಣೆಯಾಗುತ್ತಾಳೆ
ಕಾಗದದ ಹೂಗಳಿಗೆ ಗಂಧ ತುಂಬಿ
ಅವರೆದೆಯ ಗೂಡುಗಳಲಿ ಗೂಡುಕಟ್ಟಿ
ಅಂಗುಲಂಗುಲ ಕೊನರಿ
ನೆಲ ಬಾನು ಬಯಲಲ್ಲಿ ಇವಳೆ ಇವಳು
ಸರ್ವೇಜನಾ ಸುಖಿನೋ ಭವಂತು

ಈ ಕವಿತೆಯ ಇನ್ನೊಂದು ಮುಖವಾಗಬಲ್ಲದು 'ಅತ್ತೆಯ ಅಂತರಂಗದ ಹಾಡು' ಕವನ ನಮ್ಮ ನಾಡಿನಲ್ಲಿಂದು ಮೌಲ್ಯಗಳ ಮಾನ ಹೋಗಿ, ಬದುಕು ದಿನದಿಂದ ದಿನಕ್ಕೆ ದುಃಖ ದುಮ್ಮಾನ ತುಂಬಿಕೊಂಡು ದುರ್ಭರವಾಗುತ್ತ ಮ್ಲಾನ

ಮಲಿನವಾಗಿರುವುದನ್ನು 'ಓ ಬಂಧು,' 'ಸ್ವಾತಂತ್ರ್ಯ ಗೀತೆ' ಮತ್ತು 'ನಮ್ಮಪ್ಪನ ನೆಲ' ಕವನಗಳು ಚೆನ್ನಾಗಿ ಕನ್ನಡಿಸಿವೆ. 'ಷೋಕೇಸಿನ ಮಹಿಳೆಯ ಸ್ವಗತ'ವೆಂಬುದು ಈ ಸಂಕಲನ ಯಶಸ್ವಿ ಕವನಗಳಲ್ಲೊಂದು. ಕವಿ ಡಾ. ವಿಜಯಾಸು ಅವರಿಗಿರುವ ಕಾವ್ಯಾಸಕ್ತಿ, ಭಾಷಾ ಪ್ರಭುತ್ವ, ಕಲ್ಪನಾ ಶ್ರೀಮಂತಿಗೆ ಮತ್ತು ಸಾಮಾಜಿಕ ವಿಡಂಬನೆ ಮೊನಚು– ಇವು ಈ ಕವಿತೆಯಲ್ಲಿ ಪ್ರಭಾವ ಶಾಲಿಯಾಗಿ ಪ್ರಕಟವಾಗಿವೆ:

ಹಾದಿ ಹೋಕರ ಆಸೆ
ಕೆರಳಿಸುವ ಹವಣಿಕೆಯಲ್ಲಿ
ತೊಗಲ ಸುಕ್ಕಿನ ಹವಣಿಕೆಯಲ್ಲಿ
ಪದರದಡಿಯಲ್ಲಿ ಹರಿವ ರುಚಿಯ ಬಿಸಿಗೆ
ಸ್ವಚ್ಛಂದ ಕುದುರೆಯೇರಿ
ಪೋಲಿ ನಗೆ ನಕ್ಕು
ಹೋರಿ ನೋಟಗಳನ್ನು ಮೇಯಬಿಟ್ಟು
ಹದ್ದು ಮೀರಿದ ಬಯಕೆ
ನಾಲಗೆ ಚಾಚುವವರು
ಹೊಸ ಪ್ರೇಮದ ಸವಿಗನಸಿನ
ಚಿಗರೆ ಕಣ್ಣಿನ
ಜೇನು ಕನಸಿನ ಪ್ರೇಯಸಿ
ನನ್ನ ನೋಟಕ್ಕೆ
ಮಾಟಕ್ಕೆ
ಮನ ತೆತ್ತು ಹಣ ತೆತ್ತು
ತನ್ನೊಳಗೆ ನನ್ನ ಕಂಡು ಬೇಡಿ ಬತ್ತಲಾಗಿಸುತ್ತಾರೆ
ಸುಲಿದ ಸೀರೆಯ
ಅಂದದತ್ತರು ಗಂಧ
ಸೋರಿ ಹೋಗದಂತೆ
ಎದೆಗವಚಿ ನಡೆದು
ಗೆದ್ದಂತೆ ಕಣ್ಣ ಹೊಡೆದು
ಮುಸಿ ಮುಸಿ ನಗುತ್ತಾರೆ.

ಆನುಭಾವಿಕ ಶೃಂಗಗಳಲ್ಲಿ ವಿಹರಿಸುವ ಕವಿ–ಯೋಗಿಣಿ ಅಕ್ಕಮಹಾದೇವಿಯ ಜೀವನ ಗಾಥೆಯಷ್ಟು ಒಂದು ಪಕ್ವಮನಃ ಸ್ಥಿತಿ ಪರಿಭಾವನೆಯ ಲಹರಿಯಲ್ಲಿ ಅರಳಿ ನಿಂತ ಚೊಕ್ಕ ಭಾವಗೀತೆ 'ಅಕ್ಕನಂತರಂಗದ ಹಾಡು' ಈ ಸಂಕಲನದ ಇನ್ನೊಂದು ಕವಿತೆ' ನನ್ನ ಹಾಡು ನನ್ನ ಪಾಡು' ಕವನ ಹೆಣ್ಣಿನ ಶೋಷಣೇ ಬವಣೆಯೊಂದಿಗೆ ಹೊಗಳಿಕೆಯ ಹೊನ್ನ ಶೂಲದಿಂದ ಬಿಡಿಸಿಕೊಳ್ಳುತ್ತ, ಸ್ವಂತ ವ್ಯಕ್ತಿತ್ವ ಪ್ರಕಾಶನ ಸ್ವಾತಂತ್ರ್ಯಕ್ಕಾಗಿ ಹಂಬಲಿಸುವ ಜೀವದ ಬಯಕೆ ಜೀವಂತವಾಗಿ ಒಡ ಮೂಡಿದೆ.

ಡಾ. ವಿಜಯಾಸು ಕನ್ನಡ ಕವಯಿತ್ರಿಯರಲ್ಲಿ ಎದ್ದು ಕಾಣುವಂಥ ಸಾಧನೆಯ ಹೆಸರು. ಪುರಾಣ ಪಾತ್ರ ಪ್ರತಿಮೆಗಳನ್ನು ಪರಿಣಾಮಕಾರಿಯಾಗಿಸಲು ಇಂದಿನ ಸಂಗತಿಗಳೊಂದಿಗೆ ಇರುವ ಸಾಂಗತ್ಯವನ್ನು ಧ್ವನಿಸುತ್ತಾರೆ. ಸುಭಗವಾದ ಲಲಿತ ಶೈಲಿಯ ನಿರರ್ಗಳ ಓಟ ಓಘದ ಕವಚ ತೊಟ್ಟ ಅವರ ಕವನಗಳು ಸುಲಭವಾಗಿ ಸಂವಹನವಾಗುತ್ತವೆ. ವ್ಯಾಖ್ಯಾನ ನಿರಪೇಕ್ಷ ಸಾಲುಗಳಲ್ಲಿ ಅರಳುವ ಚಿತ್ರಕ ಶಕ್ತಿಗೆ ಸಾಕ್ಷಿಯಾಗಿ ಮೂರು ದೃಷ್ಟಾಂತಗಳನ್ನು ಕೊಡುತ್ತೇನೆ:

೧. ಗಳಿಗೆ ಗಳಿಗೆಗೆ ಬದಲಿಸುವ
ಹವಾಮಾನದ ಹಾವಳಿಯ ಸಂಚು
ಗೂಳಿ ಪೊಗರಿನ ಬೀಸುವ ಬಿರುಸುಗಾಳಿ
ಕದಡಿದ ಕಡಲ ಎದೆಯಾಳದಲಿ
ನಡುವೆ ಹೇಗೋ ಇಷ್ಟು ಇನಿದನಿಯ ಕಂಪು
ಉಡುಗಿದ ಉಸಿರನೆಬ್ಬಿಸುವ ನೆರಳ ತಂಪು (ಬದುಕುತ್ತೇವೆ)

೨. ಒಳಗೆ ಉರಿ ಹೊರಗೆ ಉರಿ
ಸುಟ್ಟು ಕರಿಕಾದ ಕಪ್ಪು ತೊಗಲು
ಸುಕ್ಕುಗಳ ನಡುವೆ ಬಿಕ್ಕುಗಳ ನಡುವೆ
ಹಣೆಗೆ ಕೈಯಿಟ್ಟು ಆಸೆ ಕಣ್ಣು ಆಗಸಕೆ ನೆಟ್ಟ ಮುದುಕ
ಕರಿ ಮೋಡಗಳ ಕರೆಯುತ್ತಾನೆ

ಬೂದಿಗೆ ಜೀವ ಕೊಡಲು ಭಗೀರಥನ ಬೇಡುತ್ತಾನೆ
ಮುಗಿಲು ಮುಕ್ಕಳಿಸೊಗೆಯೆ ಭೂಮಿ ಬೆಸಲಾದೀತು ಹಸಿರುಚಿತ್ತಾರ ಮೂಡೀತು!
ಯುಗದ ಕೊಳೆ, ಜಗದ ಕೊಳೆ
ಕೊಚ್ಚಿ, ಕಮನೀಯ ಕನಸುಗಳು
ಹೊಗರಿಡುವ ಕನಸುಗಳು
ಗಂಧರ್ವ ಲೋಕಗಳು ಇಳಿದಾವು (ಮಳೆ)

೩. ಅವರವರ ವಯಸು ಕನಸಿಗೆ ತಕ್ಕ
ಜರತಾರಿ ಮೇಲಂಗಿ ಜರಿ ಪಂಚೆ ಸೀರೆಗಳು
ಮಿಂಚು ಬೆಳಕಲಿ ಹೊಳೆವ ಗಿಲೀಟನೊಡವೆಗಳು ಸೆಳೆವ ಚುಂಬಕದ ತೊಡವು
ತಲೆ ಪೇಟಗಳು
ಸಂತ ಸೈತಾನ ದೇವ ದಾನವರೊಗೆದ
ಕಾಮಣ್ಣ ಕೋಡಂಗಿ ವೇಷಗಳಿಗೆಷ್ಟೊ ಲೆಕ್ಕವಿಲ್ಲ
ಒಂದೊಂದರಲ್ಲೂ ರೂಪಾಂತರದ ರೂಪ ಕಲ್ಪಿಸಿಕೊಂಡೆ
ದಿನ ನಿತ್ಯದ ನಾಟಕಕೆ ಒಂದೆಲ್ಲಿ ಸಾಕು
ಇಂದೊಂದು
ನಾಳೆ ನಾಳಿದ್ದು ಒಂದೊಂದು
ವೇಷದಂಗಡಿಯನ್ನೇ ಕೊಳ್ಳುವ ಬಯಕೆ

ವರುಷ ವರುಷಕ್ಕೊಂದು ಸ್ಪರ್ಧೆ ಇದ್ದೇ ಇದೆ
ಇರಲಿಷ್ಟು ವೇಷಗಳು ಬಣ್ಣದ ಮುಖವಾಡಗಳು
ಎನಿಸಿ ಅಂಗಡಿಯವನಿಗೆ ಕೇಳಿದೆ
ನಕ್ಕವನು ನುಡಿದ ಯಾವ ವೇಷವೂ ಖಾಲಿಯಿಲ್ಲ–ಫ್ಯಾನ್ಸಿಡ್ರೆಸ್)

ಡಾ. ವಿಜಯಾಸು ಸಮಕಾಲೀನ ಲೇಖಕಿಯರ ನಡುವೆ ಸ್ವಂತಿಕೆಯ ಮೊಹರು ಒತ್ತಿ ನಿಂತಿದ್ದಾರೆ. ಅವರ ಠಸ್ಸೆ ಇರುವ 'ಹಾಡೇನ ಪಾಡೇನ' ಕನ್ನಡ ಕಾವ್ಯ ಕ್ಷೇತ್ರದಲ್ಲಿ ಹೊರ ಬಂದಿರುವ ಈ ದಶಕದ ಮಹತ್ವದ ಸಂಕಲನ. ಅವರ ಪ್ರಬುದ್ಧ ಹಾಗೂ ಯಶಸ್ವಿ ಕವಿತೆಗಳು ಈ ಸಂಕಲನದಲ್ಲಿ ಸೇರ್ಪಡೆಯಾಗಿದ್ದು ಒಮ್ಮಲೇ ಅವರನ್ನು ಗಣ್ಯ ಕವಿಗಳ ಗಮನಾರ್ಹವಾದ ಸಿರಿಬೆಳೆ. ಲಿಂಗಭೇದದ ತಾರತಮ್ಯವಾಗಿ, ರಿಯಾಯಿತಿ ಆಗಲಿ ಅಗತ್ಯವಿಲ್ಲದೆ, ತನ್ನ ಸಹಜ ಕಾವ್ಯ ಸತ್ವದಿಂದಲೇ ತೇಜಸ್ವಿಯಾಗಿರುವ ಈ ಸಂಕಲನಕ್ಕೆ ಹಲವು ಗೌರವ ಪುರಸ್ಕಾರಗಳ ಗರಿಗಳು ಸೇರುತ್ತವೆಂಬ ನಂಬಿಕೆ ನನಗಿದೆ.

**ಡಾ. ಕಮಲಾ ಹಂಪನಾ**

೧೧ನೇ ನವೆಂಬರ್ ೧೯೯೬

# ಅನುಬಂಧ ೬

ಡಾ. ವಿಜಯಾ ಸುಬ್ಬರಾಜ್ ತಮ್ಮ ಕವಿತೆ ವಿಮರ್ಶೆಯಿಂದ ಹೆಸರು ಮಾಡಿರುವ ಲೇಖಕಿ. ಅವರ ಹೊಸ ಕವಿತಾ ಸಂಗ್ರಹಕ್ಕೆ ಸಹಚಾರಿಯಾಗಿ ಕೆಲವು ಮಾತು ಬರೆಯಲು ನನ್ನನ್ನು ಕೇಳಿದ್ದಾರೆ. ಇದು ಅವರಿಗೆ ನನ್ನ ಬಗ್ಗೆ ಇರುವ ವಿಶ್ವಾಸವನ್ನು ಸೂಚಿಸುತ್ತದೆ. ಅವರ ವಿಶ್ವಾಸಕ್ಕೆ ಋಣಿಯಾಗಿದ್ದೇನೆ.

ಡಾ. ವಿಜಯಾ ಅವರ ಹೊಸ ಸಂಗ್ರಹದಲ್ಲಿ ನಾನಾ ಅವಸ್ಥಾಂತರಗಳಲ್ಲಿ ಹೆಣ್ಣಿನ ಅಂತರಂಗದ ದನಿಯ ಅಭಿವ್ಯಕ್ತಿ ಕಂಡುಬರುತ್ತಿದೆ. ಆ ದನಿಯಲ್ಲಿ ಮುಖ್ಯವಾಗಿ ನ್ಯಾಯ ದೊರಕಿಸಿಲ್ಲವೆನ್ನುವಂಥ ನೋವು ಉದ್ದಕ್ಕೂ ಕಂಡುಬರುತ್ತದೆ. 'ಸ್ವಗತ' ಎಂಬ ಕವಿತೆಯಲ್ಲಿ ಎಂಬತ್ತಾರರ ಮುದುಕಿಯ ಅಳಲು ಹೀಗಿದೆ–

**ಗಂಡ ಎರವಾದರೂ**
**ಗಂಡು ಮಕ್ಕಳ ತಾಯಿ**
**ನನಗಿಲ್ಲ ನಾಳಿನಾ ಚಿಂತೆ**
**ಎಂದೆನಿತೊ ಗರ್ವದಲಿ**
**ಬೀಗಿದ್ದೆ**
**ಗರಿ ಮೂಡಿ ನಿಂತವರು**
**ಬಲವಾಗಿ ಬೆಳೆದವರು**
**ಕಾಳು ಕಡ್ಡಿಗೆ ಕೊರತೆ**
**ಇಲ್ಲದವರು**
**ಅಮ್ಮನಿಗೆ ಹಿಡಿಯನ್ನ**
**ಗೇಣರಿವೆ ಮೈಮರೆಸೆ**
**ಇಲ್ಲವೆಂದಟ್ಟಿದರು**

ಈ ಅಜ್ಜಿಯ ಕಥೆಗಿಂತ 'ಅಮ್ಮ'ನ ಕಥೆ ಭಿನ್ನವಾಗೇನಿಲ್ಲ–

**ತನ್ನ ಕುಡಿಗಳ ಬೆಳೆದು**
**ನೆರಳ ಕೊಡೆಯಾಗುವ**
**ಬೆನ್ನಿಗೆ ಆಸರೆಯಾಗುವ**

ಕನಸುಗಳ ನೆಮ್ಮತ್ತ
ನಗುತ್ತ ನಿಂತವಳು
ನಿದ್ದೆ ಮುಗಿದು
ಕತ್ತಲ ಹರಿದು
ಕನಸುಗಳೊಡೆದು
ಬೆಳಕು ಹಿಡಿಯಲು ಕಣ್ಣು ಬಿಟ್ಟಾಗ
ನಿರಾಶೆಯ ಗುದ್ದುಗಳು

'ಪ್ರಾರ್ಥನೆ'ಯ ಹಣ್ಣು ಮುದುಕಿಯ ಅಳಲಿನ ಸ್ವರೂಪವೂ ಇದೇ–

ಹೆತ್ತ ಕುಡಿಗಳೆ ದೂಡಿ
ಹೊರಗಟ್ಟೆ ಮೇಲೇನು?
ಕಸುವು ಬತ್ತಿದ ಮೇಲೆ
ಬೇಕೆನಿಸುವುದೇನು?

ಪುರುಷಕೃತಘ್ನತೆಯ ಈ ಚಿತ್ರಗಳನ್ನು ಒಟ್ಟಿಗೆ ನೋಡುವಾಗ ಒಂದು ಹೊಸ ಭಾವಸ್ಥಿತಿಯ ಸ್ಥಾಪನೆಯಾಗುತ್ತದೆ. ಇಂಥ ಅನುಭವಗಳು ಈ ಮೊದಲು ಕಾವ್ಯದಲ್ಲಿ ಅಭಿವ್ಯಕ್ತಿ ಪಡೆದಿಲ್ಲವೆಂದಲ್ಲ. ಅವು ಚದುರಿ ಬೀಳುತ್ತಿದ್ದ ಕಾರಣ ಅನುಭೂತಿಯು ಸಾಂದ್ರಗೊಳ್ಳದೆ ಅಳ್ಳಕವಾಗುತ್ತಿತ್ತು. ಈಗ ಪುರುಷಾಹಂಕಾರ ತನ್ನ ನಡಾವಳಿಯನ್ನು ಮರುಪರೀಕ್ಷೆಗೆ ಒಳಪಡಿಸಿ ಆತ್ಮವಿಮರ್ಶೆ ಮಾಡಿಕೊಳ್ಳುವ ಸಂದರ್ಭ ಒದಗಿದೆ. ಭಾವಸಂವರ್ಧದಿಂದ ಉಂಟಾಗುವ ಪರಿಣಾಮವಿದೆ.

'ಬೆಸ್ಲಾನಿನ ತೋಟದಲ್ಲಿ' ಎಂಬ ಕವಿತೆಯಲ್ಲಿ ಕಾಣುವ ಅಮಾನುಷತೆ ಎದೆ ನಡುಗಿಸುವಂತೆ ವರ್ಣಿತವಾಗಿದೆ–

ಕಂಬನಿಗೆ ಕರಗಲಿಲ್ಲ
ವೇದನೆಗೆ ಮೃದುವಾಗಲಿಲ್ಲ
ಪುರುಷಾಮೃಗಗಳ
ಗುರಿಗೆ ಪುಟ್ಟ ಎದೆಗಳು
ನಡುಗಿ ಒಮ್ಮೆಲೇ ಸ್ತಬ್ಧ
ರಕ್ತಚಿತ್ತಾರದ ರಂಗವಲ್ಲಿ
ಬಣ್ಣಗಳು ಕಳೆದು ಕರಗಿ
ಬರಿಯ ಕೆಂಪು ಕೆಂಪು
ಸಮಾಧಿಗಟ್ಟಿತ್ತು
ಬೆಸ್ಲಾನಿನ ತೋಟದ ಸೊಂಪು

ಈ ಪುರುಷ ಕ್ರೌರ್ಯ ಅನಂತಕಾಲದ್ದು ಎಂಬುದನ್ನು ತೋರಿಸುವಂತೆ 'ಚಿರವಿರಹಿ' ಎಂಬ ಕವಿತೆಯ ರೂಪಕ ನಿರ್ಮಿತಿ ಕಾಣುತ್ತದೆ. ಭೂಮಿಯೇ ಈ ಚಿರ ವಿರಹಿ. ಆಕೆ ತನ್ನನ್ನು ಪರಿತ್ಯಜಿಸಿಹೋದ ತನ್ನ ಪುರುಷನಿಗೆ ಹೇಳುತ್ತಾಳೆ –

**ನಿನ್ನ ದೂರುವುದಿಲ್ಲ ಇನಿಯ**
**ನೀನಿಲ್ಲದಿದ್ದರೂ ನಿನ್ನ ಕಂಬನಿ**
**ಮಳೆಯಾಗಿ ಇಳಿದಾಗ**
**ನಿನ್ನ ಸನಿಯದನುಭೂತಿಯಲಿ**
**ತಣಿದು ಸುಖಿಸುತ್ತೇನೆ**
**ಅಪ್ಪನ ಪ್ರೀತಿ ಇದೆಂದು**
**ಮಕ್ಕಳನ್ನು ರಮಿಸುತ್ತೇನೆ**

ತೆಲಗು ಜಾನಪದ ಗೀತೆಯೊಂದರಿಂದ ಪ್ರೇರಿತವಾಗಿ ರಚನೆಗೊಂಡಿರುವ 'ಮಡದಿಯ ಅಳಲು' ಎಂಬ ಕವಿತೆಯಲ್ಲಿ ಏಡಿಯಿಂದ ಕಚ್ಚಿಸಿಕೊಂಡ ಹೆಣ್ಣು ಆ ಮೂಲಕ ಪತಿಯ ಗಮನವನ್ನೂ ಪ್ರೀತಿಯನ್ನೂ ಸೆಳೆಯುವ ಯತ್ನ ಮಾಡುವುದು ಚಿತ್ತವೇಧಕವಾಗಿದೆ.

**ಮೈಯ ತುಂಬ ಮುಳ್ಳು**
**ಉರಿಯ ಜ್ವಾಲೆ ಬೆಳ್ಳು**
**ಮುತ್ತುಕೊಟ್ಟು**
**ಮೈಯ ಸುತ್ತು**
**ತಂಪು ನೆರಳ ಬಿತ್ತೋ...**

ಈ ಎಲ್ಲ ಚಿತ್ರಗಳು ಸಂಕೀರ್ಣವಾದ ಸ್ತ್ರೀ ಸಂವೇದನೆಯೊಂದನ್ನು ನಮ್ಮ ಅನುಭವಕ್ಕೆ ತರುತ್ತಿದೆ. ಅದು ಪುರುಷವಿದ್ರೋಹದಿಂದ ವ್ಯಗ್ರವಾದ ಸಂವೇದನೆ ಮಾತ್ರವಲ್ಲ. ಪುರುಷ ಪ್ರೀತಿಗೆ ಹಾಡಿ ಹಂಬಲಿಸುವ ಸಂವೇದನೆಯೂ ಹೌದು. ಒಮ್ಮೆ ಮಿದುವಾಗುತ್ತಾ, ಒಮ್ಮೆ ಕಠೋರವಾಗುತ್ತಾ, ಒಮ್ಮೆ ನಿನ್ನ ಹಂಗೇ ಬೇಡವೆಂದು ಸ್ವಾಭಿಮುಖಿಯಾಗುತ್ತಾ ಅನಂತ ಹದಗಳನ್ನು ಅದು ಅಭಿನಯಿಸಿ ತೋರಿಸುತ್ತದೆ. ತನ್ನ ಪುರುಷ ಶಾಪಗ್ರಸ್ತ ಯಕ್ಷ ಎಂದು ಒಮ್ಮೆ ತನ್ನನ್ನೇ ನಂಬಿಸಿಕೊಳ್ಳುವ ಯತ್ನ ನಡೆಯುತ್ತದೆ. ಇನ್ನೊಮ್ಮೆ ಇದೆಲ್ಲಾ ವಿಧಿಯ ಕೈವಾಡ ಎಂದು ಹೊಣೆಗಾರಿಕೆಯನ್ನು ಬೇರೊಂದು ತಲೆಗೆ ದಾಟಿಸಿ ಸಮಾಧಾನ ಪಟ್ಟುಕೊಳ್ಳುತ್ತದೆ. ಆದುದರಿಂದಲೇ ಹೆಣ್ಣಿನ ಅನಂತ ಧ್ವನಿಗಳು ಇಲ್ಲಿ ಅಭಿವ್ಯಕ್ತಿ ಪಡೆದಿವೆ ಎನ್ನಬೇಕಾಗುತ್ತದೆ. 'ನನ್ನಂತಲ್ಲ ನನ್ನವರು' ಎಂಬ ಕವಿತೆಯ ಶೀರ್ಷಿಕೆಯ ಅರ್ಥ ಈಗ ಥಟ್ಟನೆ ಹೊಳೆಯುತ್ತದೆ. 'ನನ್ನವರು' ಲೋಕದ ಅನಂತ ಹೆಣ್ಣುಗಳು. ನಾನು ಅವರಿಗಿಂತ ಭಿನ್ನ ಎನ್ನುತ್ತದೆ ವಿಜಯಾ

ಅವರ ವಿಶಿಷ್ಟ ಕಾವ್ಯ ಸಂವೇದನೆ! ಹಾಗಾದರೆ ಆ ಸಂವೇದನೆಯ ಸ್ವರೂಪವೇನು? ಲೇಖಕಿ ಹೇಳುವಂತೆ ಅದು ನಿಜಕ್ಕೂ ಭಿನ್ನವಾದುದೇ? ಇಂಥ ಪ್ರಶ್ನೆಗಳನ್ನು ನಾವೀಗ ಕೇಳಿಕೊಳ್ಳಬೇಕಾಗುತ್ತದೆ.

ವಿಜಯಾ ಅವರ ಸ್ವಾಭಿಮುಖೀಕವನಗಳಲ್ಲಿ ಕಾಣುವ ಸಂವೇದನೆಯ ಸ್ವರೂಪವನ್ನು ಈಗ ಪರೀಕ್ಷಿಸಬಹುದು. ಹಕ್ಕಿಗಳು ಮತ್ತು ನಾನು, ಉತ್ತಿಷ್ಠ ಉತ್ತಿಷ್ಠ, ಆ ಮನೆ, ಸಖ ಬಾ ಸಂಚಾರಕೆ, ನನ್ನೊಳಗೆ ನನ್ನ ಲೋಕ, ಅಕ್ಕಾ ನಾನೂ ನಿನ್ನಂತೆ, ಸ್ವಘೋಷಿತೆ, ಕಡಲ ಸೇರುವ ಬಯಕೆ ನನಗಿಲ್ಲ – ಇವು ವಿಜಯಾ ಅವರ ಸ್ವಾಭಿಮುಖಿಕವಿತೆಗಳು. ಇವುಗಳಲ್ಲಿ ಒಂದು ನಿರಾಳವಾದ ಮನಸ್ಸಿದೆ. ಬಾ ಸಖ ಸಂಚಾರಕೆ ಎಂದು ಪ್ರಿಯನನ್ನು ಕರೆಯಲು ಸಂಕೋಚ ಪಡದ ಮುಕ್ತತೆ ಆ ಕವಿತೆಯಲ್ಲಿ ಕಾಣಿಸಿಕೊಳ್ಳುತ್ತದೆ. ಈ ಆಹ್ವಾನ ತನ್ನ ಸ್ತ್ರೀ ನಿಲುವನ್ನು ಮಿದುವಾಗಿಸಿದರೆ ಏನು ಗತಿ ಎಂದು ಲೇಖಕಿ ಮುಜುಗರ ಪಡುವುದಿಲ್ಲ. ಗಂಡನನ್ನು ಸಖ ಎಂದು ಕರೆಯುವಲ್ಲಿ ಸಹಚರನೊಡನೆ ಸಮಾನ ಭಾವದ ಅನುಸಂಧಾನವಿದೆ. ಪ್ರಿಯ, ಪ್ರಿಯಕರ, ಪತಿದೇವ ಎಂದ ಮಾತಿಗಿಂತ ಇದು ಭಿನ್ನವಾದುದು.

**ನೀನೂ ನಾನು ಇಬ್ಬರು ಸೇರಿ**
**ನೀಲಿಯ ಬಾನಿನ ನಿರ್ಮಲ ನೆರಳಲಿ**
**ಕುಳಿತೊಂದಿಷ್ಟು ಹಾಡೋಣ!**
**ನೆನ್ನೆಯು ಬೇಡ ನಾಳೆಯು ಬೇಡ**
**ಈ ಕ್ಷಣವಷ್ಟೇ ನಮಗಿರಲಿ**
**ನೂರು ಕಾಲಕು ನಮ್ಮಯ ಪ್ರೀತಿ**
**ನಿತ್ಯವಸಂತದ ತೆರನಿರಲಿ**

ಇದು ನಮಗೆ ಅಪರಿಚಿತವಾದ ನಿಲುವೇನಲ್ಲ. ವಿಜಯಾ ಅವರ ಕವಿತೆಗಳ ಸಂದರ್ಭದಲ್ಲಿ ಇದು ತನ್ನಷ್ಟಕ್ಕೆ ವಿಶಿಷ್ಟ ಎನ್ನಬೇಕಾಗಿದೆ.

**'ನನ್ನೊಳಗೇ ನನ್ನ ಲೋಕ**
**ಇರಲು ಬೇರೆ ಏನು ಬೇಕು?**
**ಅಳುವಿದೆ ನಗುವಿದೆ**
**ಅರಳಿ ಉರುಳಿ ಸೆಟೆದುನಿಂತು**
**ಗಿರಿಯ ಹೊರುವ ಎದೆಯಿದೆ!**

ಇದು ಅರ್ಧಾಂಗಿ ಎಂಬ ಕಲ್ಪನೆಯನ್ನು ಉಢಾಯಿಸುವ ನಿಲುವು. ಹೆಣ್ಣು ಅರ್ಧವಲ್ಲ. ಆಕೆಗೆ ತನಗೆ ತಾನೇ ಪೂರ್ಣವಾಗಿದ್ದಾಳೆ ಎಂಬ ತತ್ವವನ್ನು ಈ ಕವನ

ಸ್ಥಾಪಿಸುತ್ತದೆ. ನಾನು ಅರ್ಧ, ನೀನು ಅರ್ಧ, ಇಬ್ಬರೂ ಕೂಡಿದಾಗ ನಾವು ಒಂದು ಪೂರ್ಣಾಂಕ ಎಂಬ ಪ್ರೇಮದ ಗಣಿತಕ್ಕೆ ಇದು ಹೊಸ ಪ್ರಮೇಯ ಎಂದು ಹೇಳಬೇಕಾಗುತ್ತದೆ.

ಈ ಆಧುನಿಕ ಹೆಣ್ಣು ಅಕ್ಕನನ್ನೂ ಮಾದರಿಯಾಗಿ ಹಿಡಿಯಲಾರಂಭಿಸಿದಳು. ಕಾರಣ ಅಕ್ಕನಿಗಿರುವ ತೀವ್ರ ವಿರಕ್ತಿ ಈಕೆಗಿಲ್ಲ. ಸಂಬಂಧಗಳ ಹಂಗುಳಿದು ಬದುಕಲಾಗುವುದಿಲ್ಲ ನನಗೆ ಎಂಬ ವಾಸ್ತವದ ಅರಿವು ಅವಳಿಗಿದೆ.

**ಬೆತ್ತಲೆಯನ್ನು ಬೆತ್ತಲೆಯಾಗಿ**
**ಭಾವಿಸಿ ಭರಿಸಲಾಗದ ನನ್ನ**
**ಆತ್ಮದಾವರಣಗಳ ಕಳಚದೆ**
**ಹೋಗಲೆಂತೇ ಅಕ್ಕ ಬಯಲಿನೊಳಗೆ?**

ವಿಜಯಾ ಅವರ ಸಂವೇದನೆ ಈ ಸಮಸ್ಯೆ ಅರಿವುಳ್ಳದ್ದಾಗಿದೆ. ಬಯಲು ಎನ್ನುವುದು ಇಲ್ಲಿ ನಿರಾವರಣದ ಅರ್ಥವನ್ನು ಭರಿಸಲಾಗದೆ ಪಬ್ಲಿಕ್ ಎನ್ನುವ ಲೌಕಿಕ ಅರ್ಥವನ್ನು ಮಾತ್ರ ನಿಲುಕಿಸಿಕೊಳ್ಳಬಲ್ಲುದಾಗಿದೆ. ಇದೇ ಆಧುನಿಕ ಅಕ್ಕನ ಸಮಸ್ಯೆಯಾಗಿದೆ.

ಈ ಹಿನ್ನೆಲೆಯಲ್ಲಿ ವಿಜಯಾ ಅವರು ಕಲ್ಪಿಸಿಕೊಳ್ಳ ಬಯಸುವ ಒಂದು ಶಕ್ತ ಸ್ತ್ರೀ ದೈವದ ಕಲ್ಪನೆ ಗಮನಿಸಬೇಕಾದುದು. 'ಸ್ವಘೋಷಿತೆ' ಈ ನೆಲೆಯಲ್ಲಿ ಒಂದು ಮುಖ್ಯ ಕವಿತೆ. ಸಶಕ್ತವೂ, ಸ್ವಸಮರ್ಥವೂ ಆದ ಒಂದು ಸ್ತ್ರೀತ್ವದ ಕಲ್ಪನೆ ಇಲ್ಲಿ ಕಂಡುಬರುತ್ತದೆ. ಇದರ ಜೊತೆಯಲ್ಲೇ ಓದಬೇಕಾದ ಇನ್ನೊಂದು ಕವನ 'ಉತ್ತಿಷ್ಠ' ಗಾರ್ಗಿ ಮತ್ತು ಅಕ್ಕಮಹಾದೇವಿ ಈ ಎರಡೂ ಮಾದರಿಗಳನ್ನು ಬಿಟ್ಟು ಇಲ್ಲಿ ಪುರುಷ ಸತ್ವಗಳನ್ನು ಹೀರಿಕೊಂಡ ಒಂದು ಸಮರ್ಥ ಸ್ತ್ರೀತ್ವ ಕಲ್ಪನೆಯನ್ನು ಲೇಖಕಿ ಸ್ವೀಕಾರ ಮಾಡಿದ್ದಾರೆ.

**ಪುರುಷ ಸತ್ವಗಳನ್ನು ಹೀರಿಕೊಂಡು**
**ಹತ್ತು ಕೈಗಳ ತುಂಬ ಶಸ್ತ್ರಾಸ್ತ್ರವಿರಿಸಿ**
**ಮೆರೆದವಳು ಮೊರೆದವಳು ಮಹಿಷಾಸುರ ಕೊಲೆಗೆ**
**ಹುಲಿಯೇರಿಕೊಂಡು........**

**..................................**
**ಇಂದೇಕೆ ಕಂದಿ ಕಂದಿ**
**ನಿತ್ರಾಣಳಾಗಿರುವೆ?**
**ಹೆಜ್ಜೆ ಹೆಜ್ಜೆಗು ಸಿಗುವ**
**ಮನುಜರಕ್ಕಸರೆದೆ**
**ಬಗಿಯೆ**

ಭಯವು ಕಾಡುವುದೇನು?
ನಿನ್ನ ಜಾತಿ ಜೀವಗಳೆಲ್ಲಾ
ಸುಣ್ಣದಲಿ ಸುಟ್ಟು ಬಣ್ಣಗೆಟ್ಟು
ಹದ್ದುಗಳಿಗೆ ಅನಾಯಾಸ
ತುತ್ತಾಗಿ ಸಾಯುವಾ
ಚೀರಾಟಗಳಲ್ಲಿ ಸಮಾಧಿಯಾದರೂ
ನೀನೇಕೆ ತಣ್ಣಗೆ
ಗುಡಿಯಲ್ಲಿ ಭದ್ರ ಕುಳಿತಿರುವೆ?

ಇದನ್ನು ಸ್ತ್ರೀತ್ವದ ಜಾಗರಣೆಯ ಘೋಷವೆಂದೇ ಕರೆಯಬೇಕಾಗಿದೆ.

ವಿಜಯಾ ಅವರ ಕಾವ್ಯದ ಸಮಸ್ಯೆ ಅದರ ವೈಚಾರಿಕ ನಿಲುವಿನಲ್ಲಿ ಅಲ್ಲ. ಆ ನಿಲುವಿನ ಭಾಷಾ ಮತ್ತು ಕಲಾತ್ಮಕ ಅನುಸಂಧಾನದಲ್ಲಿ. ಅದನ್ನವರು ತಮ್ಮ ಕಾವ್ಯಪ್ರತಿಭೆಯಿಂದಲೇ ಎದುರಿಸಬೇಕಾಗಿದೆ. ಬೇರೆ ಕವಯತ್ರಿಯರಲ್ಲಿ ಸಾಮಾನ್ಯವಾಗಿ ಕಾಣದ ಪರಂಪರೆಯ ಅರಿವು, ಕನ್ನಡ ಕಾವ್ಯದ ಅನಂತ ಲಯಗಳ ಅನುರಣನದ ನೆನಪು, ಭಾಷೆಯ ವ್ಯುತ್ಪತ್ತಿ ವಿಜಯಾ ಅವರಿಗುಂಟು. ಅವರು ಸಾಧಿಸಬೇಕಾಗಿರುವುದು ನವೀನ ರೂಪಕನಿರ್ಮಾಣ ಸಾಮರ್ಥ್ಯವನ್ನು ಮತ್ತು ಅವಿರತ ಪರಿಶ್ರಮದಿಂದ ಮಾತ್ರ ಸಾಧಿತವಾಗುವ ಅಂಗೋಪಾಂಗ ಅನ್ಯೋನ್ಯ ಪ್ರಜ್ಞೆಯನ್ನು ಈ ಸಾಮರ್ಥ್ಯ ಮತ್ತು ಪ್ರಜ್ಞೆಯನ್ನು ಅವರ ದೈವವೂ ಸಂಕಲ್ಪಶಕ್ತಿಯೂ ಅವರಿಗೆ ದೊರಕಿಸಿಕೊಡುತ್ತದೆ ಎಂಬುದು ನನ್ನ ದೃಢ ವಿಶ್ವಾಸ.

**–ಡಾ. ಎಚ್. ಎಸ್. ವೆಂಕಟೇಶಮೂರ್ತಿ**

# ಕಾಲ ಪ್ರಕಾಶನದ ಪ್ರಕಟಣೆಗಳು

| ಕ್ರ. ಸಂ | ಪುಸ್ತಕದ ಹೆಸರು | ಲೇಖಕರ ಹೆಸರು | ಬೆಲೆ |
|---|---|---|---|
| 1 | ರೇಷ್ಮೆ ಕೃತಿ ಕೈಗಾರಿಕೆ | ಮೋಹನ್ ನಾಯಕ್ | 90.00 |
| 2. | ಪ್ರಸ್ತುತ | ಎಲೆಕೇರಿ ಶಿವರಾ | 75.00 |
| 3. | ಅದೃಶ್ಯ ಕ್ರೌರ್ಯ | ಡಾ. ಪಾರ್ಥಸಾರಥಿ | 50.00 |
| 4. | ನಯನ | ಡಬ್ಲ್ಯೂ ಬಸವರಾಜ್ | 50.00 |
| 5. | ಹ್ಯಾಂಗ ಮರೆಯಲಿ ಹೇಳು | ಬಿ.ಹೆಚ್. ಹನ್ನೆರಡು ಮಠ | 60.00 |
| 6. | ಸಂತನ ಸ್ವಗತಗಳು | ಡಾ.ರಾಜಶೇಖರ ಮಠಪತಿ | 75.00 |
| 7. | ಕವಿಯ ಕನಸು | ಜಿ. ಕುಮಾರಪ್ಪ | 35.00 |
| 8. | ಖಾಲಿಮನೆ | ರವಿ ಉಪಾಧ್ಯ | 60.00 |
| 9. | ಕಾನನ ಕುಸುಮ | ವೆಂಕಟಾಚಲ ಸರ್ಜಾಪುರ | 75.00 |
| 10. | ಕರುನಾಡಿನಲ್ಲಿ ಕನ್ನಡಿಗನ ತಿರುಗಾಟ | ಅಶೋಕ ನರೋಡೆ | 75.00 |
| 11. | ಜಗದಂಬೆ | ಪ್ರೊ. ಜಿ. ಹನ್ನೆರಡುಮಠ | 50.00 |
| 12. | In An Alien Jongue | Chandrakantha Kusanuru | 100.00 |
| 13. | ಕಲ್ಲಾದಳು ಅಹಲ್ಯೆ | ಕಸ್ತೂರಿ ಬಾಯರಿ | 80.00 |
| 14. | ಶಿವರಾಂ ಚುಟಕಗಳು | ಎಲೆಕೇರಿ ಶಿವರಾಂ | 60.00 |
| 15. | ನನ್ನವಳು ನನಗಾಗಿ | ಕೌಂಡಿನ್ಯ | 60.00 |
| 16. | ಸಾಮಾಜಿಕ ಚಳುವಳಿಗಳ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ | ಡಾ. ಎ. ಮುನಿಶಾಮಪ್ಪ | 400.00 |
| 17. | ಚಂದ್ರಕಾಂತ ಕುಸನೂರರ ನಾಲ್ಕು ಕಾದಂಬರಿಗಳು | ಚಂದ್ರಕಾಂತ ಕುಸನೂರ | 400.00 |
| 18. | ರೈತ ತೀರ್ಪು | ಈರಯ್ಯ ಕಿಲ್ಲೇದಾರ | 70.00 |
| 19. | ಅನಾಥನಾಥ | ಸುಮಿತ್ರಾ ಮೋತಿಲಾಲ ಹಲವಾಯಿ | 60.00 |
| 20. | ಬಾವಿ ಕಳೆದಿದೆ | ಸುಮಿತ್ರಾ ಮೋತಿಲಾಲ ಹಲವಾಯಿ | 60.00 |
| 21. | ಹಸಿ ಖಜಾನೆ | ರಾಜೇಶ್ವರಿ ಎನ್ | 50.00 |
| 22. | ಪ್ರಕೃತಿ | ಕುಸುಮ | 160.00 |
| 23. | ಹೆಚ್.ಕೆ.ವೀರಣ್ಣಗೌಡ: ಒಂದು ಅಧ್ಯಯನ | ಟಿ. ಪದ್ಮ | 180.00 |
| 24. | ಹಕ್ಕಿ ಬೆಂದೊ ಹಕ್ಕಿ ಮರಿ ಬೆಂದೊ | ಡಾ. ಕರೀಗೌಡ ಬೀಚನಹಳ್ಳಿ | 100.00 |
| 25. | ಹಿಂದಕ ನೋಡಿ ಮುಂದಕ ನಡಿ | ಈರಯ್ಯ ಕಿಲ್ಲೇದಾರ | 80.00 |

| | | |
|---|---|---|
| 26. ಶ್ರೀ ಪೃಥ್ವೀವಲ್ಲಭ | ಡಾ. ವಿಜಯಾ ಸುಬ್ಬರಾಜ್ | 120.00 |
| 27. ಬಣ್ಣದ ಕೊಳಲು | ಗ.ಸು.ಭಟ್ಟ, ಬೆತ್ತಗೇರಿ | 20.00 |
| 28. ಗಂಧವತಿ | ಕಸ್ತೂರಿ ಬಾಯರಿ | 65.00 |
| 29. ಸಾಹಿತ್ಯ ಮತ್ತು ಚಿತ್ರಕಲೆ | ಚಂದ್ರಕಾಂತ ಕುಸನೂರ | 170.00 |
| 30. ಆವಿಗೆಯ ಕಿಚ್ಚು | ಸುಜಾತಾ ಕುಮಟಾ | 60.00 |
| 31. ಪರಿಸಾರಕ | ಸತ್ಯನಾರಾಯಣರಾವ್ ಅಣತಿ | 55.00 |
| 32. ಎಸ್.ಬಿ. ನವಾತಿ ಅವರ ಗಂಡನ ಗೆದ್ದ ಗರತಿ | ಸಂ: ರಾಜಶೇಖರ ಮಠಪತಿ | 100.00 |
| 33. ಡಾ.ವ್ಹಿ.ಜಿ. ಪೂಜಾರರ ವೈಯಕ್ತಿಕ ವಿವರಗಳು | ಡಾ. ಸುಜಾತಾ ಜಂಗಮಶೆಟ್ಟಿ | 25.00 |
| 34. ಜಡಿಮಳೆ | ಡಾ.ಸಿ.ಎಂ.ಗೋವಿಂದರೆಡ್ಡಿ | 75.00 |
| 35. ತತ್ವಮಸಿ | ಡಾ.ಸುಮಿತ್ರಾ ಹಲವಾಯಿ | 70.00 |
| 36. ಅನ್ನದಾತನ ಅಂಗಳದಲ್ಲಿ | ಈರಯ್ಯ ಕಿಲ್ಲೇದಾರ | 100.00 |
| 37. ಕಾನನ ಕುಸುಮ ಭಾಗ-2 | ವೆಂಕಟಾಚಲ ಸರ್ಜಾಪುರ | 80.00 |
| 38. ಒಂದು ತೇವದ ಗೀತೆ | ಡಾ.ಸಿ.ಎಂ.ಗೋವಿಂದರೆಡ್ಡಿ | 75.00 |
| 39. ಚಿಣ್ಣರ ಪಯಣ | ಡಾ.ಸಿ.ಎಂ.ಗೋವಿಂದರೆಡ್ಡಿ | 45.00 |
| 40. ಸ್ತ್ರೀವಾದ ಮತ್ತು ಭಾರತೀಯತೆ | ಸತೀಶ್ ಎಂ.ಈ | 135.00 |
| 41. ಸ್ನೇಹದ ಉರುಳಲ್ಲಿ | ವೆಂ.ರಂ.ಶಾಮ ಅಯ್ಯಂಗಾರ್ | 190.00 |
| 42. ಕೊಳಲ ನ್ಯಾಯ | ಸತ್ಯನಾರಾಯಣರಾವ್ ಅಣತಿ | 35.00 |
| 43. ಕನ್ನಡ ಇಂಗ್ಲಿಷ್ ಗಾದೆಗಳು | ಶಂಕರಾನಂದ | 85.00 |
| 34. ಪ್ರಥಮ ಚಿಕಿತ್ಸೆ | ಡಾ.ಬಯ್ಯಪ್ಪ ರೆಡ್ಡಿ | 40.00 |
| 35. ಕರ್ನಾಟಕ ಜನರಲ್ ನಾಲೆಡ್ಜ್ | ಜಿ.ರಾಮಕೃಷ್ಣ | 85.00 |
| 36. ಹಾಸ್ಯ ಚಕ್ರವರ್ತಿ ತೆನಾಲಿರಾಮ | ಶಂಕರಾನಂದ | 55.00 |
| 37. ಹರಿದ ನೀರು | ಎಚ್.ಎನ್.ಯಾದವಾಡ | 150.00 |
| 38. ನೀಲಿ ಆಕಾಶಕ್ಕೆ ರೆಕ್ಕೆಗಳ ಬಿಚ್ಚಿ | ಕಸ್ತೂರಿ ಬಾಯರಿ | 60.00 |
| 34. ಅರ್ಥಕ್ಕೆ ನಿಂತ ಚಿತ್ರ | ಮೋದೂರ ತೇಜ | 90.00 |
| 35. ಮಹಾಮೌನಿ | ಬಿ.ತಿಪ್ಪಣ್ಣ ಮರಿಕುಂಟೆ | 80.00 |
| 34. ಜಾಣ ಜಾಣೆಯರ ಜಾನಪದ ಕತೆಗಳು | ಪದ್ಮಶ್ರೀರಾಗಂ | 59.00 |
| 35. ದುಗ್ಗಿ | ಡಾ.ಸುಮಿತ್ರಾ ಹಲವಾಯಿ | 95.00 |



ವಿಜಯಾ ಸುಬ್ಬರಾಜ್ ಇವರ ಸಮಗ್ರ ಕಾವ್ಯವನ್ನು ಓದುತ್ತಾ ಹೋದಂತೆ ಈ ನಲವತ್ತು ವರ್ಷಗಳ ಅವಧಿಯಲ್ಲಿ ಈ ನೆಲದ ಮೇಲೆ ಘಟಿಸಿರುವ ಹಲವು ವಿದ್ಯಮಾನಗಳು ನೇರವಾಗಿ ಪರೋಕ್ಷವಾಗಿ ಇಲ್ಲಿ ಮಿಂಚಿ ಮರೆಯಾಗುತ್ತವೆ. ಓದುವ ನಮ್ಮ ಮನೋಗತಿಯನ್ನು ತಡೆದು ಮಾತನಾಡಿಸುತ್ತವೆ. ಜೊತೆಗೆ ಈ ಭೂಖಂಡದ ಮೂಲೆ ಮುಡುಕುಗಳಲ್ಲಿ ಅರಳಿದ ವಿಚಾರ ಕ್ರಾಂತಿಯ ಹಲವು ಸೆಳಕುಗಳು ನಮ್ಮ ಮನೋಗತಿಯ ಎದುರು ಪ್ರಶ್ನೆಗಳನ್ನು ಎಸೆದು ವಾಗ್ವಾದಕ್ಕೆ ಆಹ್ವಾನಿಸುತ್ತವೆ. ಹೀಗಾಗಿ ಇಡೀ ಸಂಕಲನ ವ್ಯಕ್ತಿಯೊಬ್ಬರ ಭಾವಯಾನದ ಗಾಥೆಯಂತೆ ಕಾಣಿಸುತ್ತದೆ ಕೇಳಿಸುತ್ತದೆ. ಕನ್ನಡದ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ವ್ಯವಹಾರದಲ್ಲಿ ಬೇರು ಬಿಟ್ಟಂತೆ ಹರಿದ ಈ ಭಾವಯಾನ ಬಹುರೂಪಿ ಗುಣದ ಸಚೇತನ ಸ್ವಭಾವದ್ದು. ಹೆಚ್ಚು ಮಾತಾಳಿಯಾಗುತ್ತಲೇ ಮತ್ತೆ ಮತ್ತೆ ತನ್ನನ್ನು ಛಾಪಿಸುವ ಛಲದಿಂದ ನಡೆದದ್ದು. ಇಲ್ಲಿ ಹಲವು ವಿಚಾರಗಳ ಬಗ್ಗೆ ಅಭಿಪ್ರಾಯ ಭೇದಗಳು ವ್ಯಕ್ತಿತ್ವದ ಬೆಳವಣಿಗೆಯ ರೂಪಗಳಂತೆ ವಿಕಾಸಶೀಲವಾಗಿವೆ. ಭೇದವೆಂಬುದು ವೈರುಧ್ಯದಂತೆ ಕೆಲವೊಮ್ಮೆ ಭಾಸವಾದರೂ ಅದು ವಿರೋಧಾಭಾಸದ ದ್ವಂದ್ವಮುಖಿಯಾಗದೆ ಬದಲಾವಣೆಯ ಜೀವ ಗುಣವಾಗಿದೆ. ಅಭಿಪ್ರಾಯವೆಂಬುದು ಜಡವಲ್ಲ ಜಂಗಮ ಶೀಲವಾದ ಧಾತುರೂಪಿ. ಮೂಲ ಸೆಲೆಯನ್ನು ಬಿಟ್ಟುಕೊಡದೆ ಸಕಾರಣ ಬದ್ಧವಾಗಿ ಋತದ ಹಾದಿಯಲ್ಲಿ ಬೆಳೆಯುವ ಬಿತ್ತರೂಪಿ. ಇವರ ಕಾವ್ಯದಲ್ಲಿ ವಿಚಾರಗಳು ಸಂವೇದನೆಗೆ ಒಳಗಾಗಿರುವುದು ಈ ಬಗೆಯಲ್ಲಿ.

**ಎಸ್.ಜಿ. ಸಿದ್ಧರಾಮಯ್ಯ**

ಮುನ್ನುಡಿಯಿಂದ

